ಕನ್ನಡ ಕರಾವಳಿ ಗ್ರಂಥಪ್ರಕಾಶನ, ಹೆಗಡೆ.

ಕುಸುಮ – ೧೯

# ಅಧ್ಯಾತ್ಮ ರಾಮಾಯಣ



( ಬಾಲಕಾಂಡ, ಅಯೋಧ್ಯಾಕಾಂಡ )

## ಭಾಗ ೧

ಸಂಪಾದಕರು :

ಶ್ರೀ ಎನ್ ಕೆ. ಹೆಗಡೆ. B.Sc. (Hons.), M. A., B. Ed.
ಸಾ| ಕಮಲಾಬಾಯಿ ಪಿಕಳೆ ಪ್ರೌಢಶಾಲೆ, ಕತಗಾಲ
ಅಂಚೆ : ಕತಗಾಲ 581444 ತಾ : ಕುಮಟಾ (ಉ. ಕ.)

ಪ್ರಕಾಶಕರು :

ಕನ್ನಡ ಕರಾವಳಿ ಗ್ರಂಥಪ್ರಕಾಶನ, ಹೆಗಡೆ. ( ಉ. ಕ. )

THIS BOOK IS PUBLISHED WITH THE FINANCIAL ASSISTANCE OF TIRUMALA TIRUPATI DEVASTHANAMS UNDER THEIR SCHEME AID TO PUBLISH RELIGIOUS BOOKS

ಶಾಲಿವಾಹನ ಶಕೆ ೧೯೧೩ — ಪ್ರಮೋದ ಸಂವತ್ಸರಃ

ಇಸ್ವಿ ೧೯೯೦ — ಬೆಲೆ :– ರೂ. ೩೦–೦೦

# ADHYATMA RAMAYANA

A well known story of Rama ( Ramayana ) written in Bhamini Shatpadi containing Adhyatmic topics.

Editor : Shri N. K. Hegde
B. Sc. (Hons), M. A., B. Ed.

Publisher : Kannada Karavali Granth
Prakashana, Hegde
HEGDE-581330 Kumta (U. K )



ಮೊದಲನೆಯ ಮುದ್ರಣ : ೧೯೯೦

ಪ್ರತಿಗಳು : ೧೦೦೦

ಬೆಲೆ :- ಮೂವತ್ತು ರೂಪಾಯಿಗಳು

ಈ ಪುಸ್ತಕವು ಶ್ರೀ ತಿರುಮಲ ತಿರುಪತಿ ದೇವಸ್ಥಾನದ ಧಾರ್ಮಿಕ ಪುಸ್ತಕಗಳ ಪ್ರಕಟನೆಯ ಧನಸಹಾಯದ ನೆರವಿನಿಂದ ಪ್ರಕಟಿಸಲ್ಪಟ್ಟಿದೆ.

ಸಿರ್ಸಿಯ ತೋಟಗಾರ್ಸ ಕೊಸ್ಯಾಟಿಯೂ ಸಹ ಧನಸಹಾಯ ಮಾಡಿದೆ.

ಮುದ್ರಣ :- ಶ್ರೀಕೃಷ್ಣ ಮುದ್ರಣಾಲಯ, ಹೆಗಡೆ.
ಅಂಚೆ :- ಹೆಗಡೆ -581330
ತಾಲೂಕ :- ಕುಮಟಾ ( ಉತ್ತರ ಕನ್ನಡ )

ಪೂಜ್ಯ ಮಾತಾಪಿತೃಗಳ
ಅಡಿದಾವರೆಗಳಲ್ಲಿ
**ಸಮರ್ಪಣೆ**



ಶ್ರೀ ಶಾಂತಿಕಾಪರಮೇಶ್ವರಿ ದೇವಿ, ಹೆಗಡೆ.

# ನಿವೇದನೆ

ಧರೆಯಲಿಹ ಕರ್ನಾಟ ದೇಶದಿ
ಪರಮ ವೈಭವದಿಂದ ಶೋಭಿಸಿ
ಮೆರೆಯುತಿರುವದು ಕಾರವಾರವು ಜಿಲ್ಲೆಯೆಂದೆನಿಸಿ ||
ಪರಮ ತೇಜಃಪುಂಜ ನಗರಿಯು
ವರ ಮಹಾನದಿ ಪರ್ವತಾವಳಿ
ತರುಲತಾದಿಗಳಿಂದ ಕಂಗೊಳಿಸುತ್ತಲಿರುತಿಹುದು ||೧||

ಆ ನಗರಿಯುದ್ದಗಲದಲಿ ತಾ
ಕಾನನಗಳು ಕಿನಾರೆಯೆಂಬೀ
ತಾಣದಲಿ ಹನ್ನೊಂದು ತಾಲೂಕುಗಳು ಇರುತಿಹವು ||
ಸಾನುರಾಗದಿ ಲಾಲಿಸಾಲಿಸು
ಕಾನನದ ಕೆಳಭಾಗದಲ್ಲಿಯೆ
ಭಾನುತೇಜದಿ ಮೆರೆಯುತಿರುವದು ಕುಂಭಪುರವರವು ||೨||

ಆ ಮಹಾಪುರವರದ ಉತ್ತರ
ಧಾಮದಲಿ ಸುವಿಶಾಲ ಕ್ಷೇತ್ರದಿ
ನೇಮದಿಂ ನೆಲಸಿಹುದು ಹಳ್ಳಿಯದೊಂದು ಪ್ರಭುಪುರವು ||
ಪ್ರೇಮದಿಂ ಕೇಳದರ ಸುತ್ತಲು
ಸಾಮದಿಂ ಶೋಭಿಪವು ತರುಲತೆ
ಸೋಮನಿಧಿಯಂತೆಸೆವ ಗದ್ದೆಯು ಗುಡ್ಡ ಬೆಟ್ಟಗಳು ||೩||

ಮೆರೆವ ಅಘನಾಶಿನಿಯ ತಟದಲಿ
ಪರಮ ವೈಭವದಿಂದ ಶೋಭಿಪ
ಪುರವು ಇರುತಿಹುದದರ ನಾಮವು ಹೆಗಡೆಯೆಂದೆನಿಸಿ ||
ಪುರದ ಮಧ್ಯದಿ ನೆಲಸಿ ಜನರನು
ಕರುಣದಿಂದಲಿ [illegible]ವನು
[illegible]ಮಂಗಳೆ ಮಾ[illegible]ಯಾಗಿಹ ಶಾಂತಿಕಾಂಬಿಕೆಯು ||೪||

ಪುರದ ಪೂರ್ವದ ಕಡೆಯಲಿರ್ಪನು
ಪರಮ ಪುರುಷನೆನಿಪ್ಪ ಕೃಷ್ಣನು
ಮೆರೆಯುತಿರುವನು ಶಂಭುಲಿಂಗನು ಪಶ್ಚಿಮಾದ್ರಿಯಲಿ ||
ವೆರದೆ ದೇವಿಯ ಮುಂದೆ ನೆಲಸಿಯೆ
ಹೆರಸುತಿರುವನು ವೀರಭದ್ರನು
ಭರದಿ ತಾ ರಕ್ಷಿಪನು ಜನರನು ಲಕ್ಷ್ಮಿನರಸಿಂಹ || ೫ ||

ನಮ್ಮ ಊರಿನ ತೆಂಕದಿಕ್ಕಿಗೆ
ಒಮ್ಮನದಿ ನೆಲಸಿಹರು ಸಿರಿ ಕಾ
ನಮ್ಮ ದೇವರ, ಮತ್ತು ಶ್ರೀ ಸಾರಿಂಗ ಬೀರಪ್ಪ ||
ಉತ್ತರದ ದಿಕ್ಕಿನಲಿ ಇರುವರು
ಮತ್ತೆ ದಂಡಿನ ದುರ್ಗಿ ಮೊದಲಾ
ದುತ್ತಮದ ದೇವಿಯರು ಸಹಿತಾ ನಾಗದೇವತೆಯು || ೬ ||

ತರುಣ ನೀ ಕೇಳ್ ಸಕಲ ವರ್ಗದ
ನರರು ತಮ್ಮಯ ಕೆಲಸ ಕಾರ್ಯಗ
ಳರಿತು ಬಂಧು ಪ್ರೇಮದಿಂದಲಿ ವಾಸಿಸುತ್ತಿಹರು ||
ನರರ ಕುಲದಲಿ ಹೆಸರ ಪಡೆದಿಹ
ವರ ಕುಟುಂಬವು ಹೆಗಡೆ ನಾಮದಿ
ಮೆರೆಯುತಿರುವದು ಪುರದ ಪೂರ್ವದ ಮೂಡಕೇರಿಯಲಿ || ೭ ||

ಮೆರೆವ ಭಾರದ್ವಾಜ ಗೋತ್ರದ
ಲಿರದೆ ಜನ್ಮವ ಪಡೆದು ನೆಲಸಿದ
ನರರ ಕಣ್ಮಣಿಯಾದ ಕುಪ್ಪಯನೆಂಬ ದ್ವಿಜವರನು ||
ಪರಮ ಸಾತ್ವಿಕರೆನಿಪ ಮಕ್ಕಳ
ಪರಿಯ ಕರುಣದಿ ಪಡೆದ ನಂತರ
ಸುರರ ತಾಣವ ಸೇರಿದನು ಶ್ರೀಕೃ[illegible] || ೮ ||

ಅವರೊಳಗೆ ತಾ ಹಿರಿಯ ಗಣಪತಿ
ಯವನ ಅನುಜನೆ ಆಗಿ ಜನಿಸಿದ
ನವನೆ ನಾರಾಯಣನು ಪಡೆದನು ಸಕಲ ವಿದ್ಯೆಗಳ ||
ತವನಿಧಿಯೆನಿಪ ವಿದ್ಯೆಯಿಾಯುತ (ಕಲಿಸುತ)
ಸವನಿಸಿದ ಸಮಯದಲಿ ಗ್ರಂಥಗ
ಳವನು ಸಂಶೋಧಿಸುತಲಿರುವನು ಹರಿಯ ಕರುಣದಲಿ || ೯ ||

ಹರಿಯು ಕರುಣದಿ ಹೆಗಡೆಯಲಿ ನೆಲ
ಸಿರುವ ನಾರಾಯಣನು ಇರುವನು
ನೆರೆಯಲಿಹ ಕತಗಾಲ ಶಾಲೆಯ ಮುಖ್ಯಗುರುವೆನಿಸಿ ||
ವರದ ಗೋಪೀನಾಥ ನೆಲಸಿಹ
ವರ ಹರೀಶಕಿಪುರವು ಶೋಭಿಸಿ
ಭರದಿ ಮೆರೆಯುತಲಿತ್ತು ಯಿಾ ಕತಗಾಲ ಸನಿಹದಲಿ || ೧೦ ||

ಇಂದು ಪುರ ವೈಭವವ ಕಾಣಿವು
ಚಂದದಿಂ ಸುತ್ತಲಿವೆ ಆನೇ
ಗುಂದಿ ಹಳ್ಳಿಯು ಕೊಡಂಬಳೆ ಮತ್ತಳ್ಳಿ ಮಾವಳ್ಳಿ ||
ಕಂಧೆಹಳ ಸಂಡಳ್ಳಿ ಯಡತೊರೆ
ಚಂದವಾಗಿಹ ಯಾಣ ಯೆಪ್ಪ
ತ್ತೆಂದು ಸುಜನರು ಮತ್ತೆ ಪೇಳ್ವರು ಹರಿಟೆ ಸೀಮೆಯಲಿ || ೧೧ ||

ಮತ್ತೆ ಅಲ್ಲಿಂ ಮುಂದೆ ಹನ್ನೆರ
ಡುತ್ತಮದ ಮೈಲಿನಲಿ ಯಾಣವು
ಉತ್ತರೋತ್ತರವಾಗಿ ಹಬ್ಬಿದ ಗಿರಿಯ ಶಿಖರದಲಿ ||
ಸುತ್ತುವರಿದಿಹ ಜಲದ ಝರಿಗಳು
ಪೆತ್ತ ಗಿಡಮರ ಲತೆಯು ಕಾಂಬುದು
ಮತ್ತೆ ಕಣ್ಣಿಗೆ ಹಬ್ಬವಾಗಿಹ ರಮ್ಯ ವನಸಿರಿಯು || ೧೨ ||

ದುಷ್ಟದಾನವರುಗಳು ಬ್ರಹ್ಮನ
ಶಿಷ್ಟವರಬಲದಿಂದ ಲೋಕವ
ಕಷ್ಟ ಕೋಟಲೆಯಿಂದ ಪೀಡಿಸುತಿರಲು ರುದ್ರೇಶ ||
ಧೃಷ್ಟ ಭೈರವರೂಪ ತಾಳಿಯೆ
ದುಷ್ಟದಾನವರನ್ನು ಮರ್ದಿಸಿ
ಕಷ್ಟವಿಲ್ಲದೆ ಭೈರವೇಶ್ವರನಾಗಿ ನೆಲಸಿದನು || ೧೩ ||

ಅಲ್ಲಿ ಆ ಸ್ಥಳದಲ್ಲಿ ವಿದ್ಯೆಯ
ಬಲ್ಲಿದರ ಗುಂಪೊಂದು ನೆಲಸಿ
ತ್ತಲ್ಲಿ ಜಪತಪಯಾಗ ನಿಯಮಾದಿಗಳ ನಡೆಸುತ್ತ ||
ಎಲ್ಲ ಜನರಿಗೆ ಜ್ಞಾನ ನೀಡುವ
ಚೆಲ್ವ ನವರಸದಿಂದ ಕೂಡಿದ
ಬಲ್ಲ ಕೃತಿಗಳ ಸುಲಭ ಕನ್ನಡದಲ್ಲಿ ರಚಿಸಿದರು || ೧೪ ||

ನರರ ಹಿತವನು ಬಯಸಿ ಮನದಲಿ
ತರತರದ ಸಂಸ್ಕೃತದ ಕೃತಿಗಳ
ವರ ಗುರುವು ಪೂರ್ಣಾತ್ಮ ಕೃಷ್ಣನ ಕೃಪೆಯ ಬಲದಿಂದ ||
ಸರಳ ಕನ್ನಡ ಪದ್ಯದಲಿ ತರ
ಹರಿಸದೇ ರಚಿಸಿದರು ಯತಿಗಳು (ಕವಿಗಳು)
ಸರಸವಹ ಭಾಮಿನಿಯು ವಾರ್ಧಿಕ ಕಂದ ಸಾಂಗತ್ಯ || ೧೫ ||

ಪರಮ ವೇದದ ಸಾರದಂತಿಹ
ಪರಮ ಕರುಣಾಸಿಂಧು ಕೃಷ್ಣನ
ಚರಿತವನು ರಚಿಸಿದನು ಪರನಿತ್ಯಾತ್ಮಪಾಕಯೋಗಿ ||
ಹರನ ಚರಿತವ ಪೇಳ್ವ ಭೈರವ
ವರ ಪುರಾಣವ ಮುದದಿ ರಚಿಸಿದ
ಸರಸ ಹೃದಯದ ಕವಿಯು ನಿತ್ಯಾನಂದನೆಂಬವನು || ೧೬ ||

ಗುಣಿಗಳಗ್ರಜನೆನಿಪ ರಾಮಜ
ಗುಣಗಣವ ವಿಸ್ತರಿಪ ರಾಮಾ
ಯಣವ ರಚಿಸಿದ ಪಾಲಗಳ್ಳಿಯ ವರದವಿಠ್ಠಲನು ||
ದನುಜರಿಪು ಸಿರಿ ಲಕ್ಷ್ಮಿನೃಸಿಂಹ
ನನುವ ನೆನೆದಧ್ಯಾತ್ಮ ರಾಮಾ
ಯಣವ ಮತ್ತಾ ಬ್ರಹ್ಮಗೀತೆಯ ಸುಲಭ ಕನ್ನಡದಿ ||೧೭||

ಅರ್ಣವದ ತಡಿಯಲಿಹ ಗೋ
ಕರ್ಣದಾ ಮಹಿಮೆಯನು ವಿವರಿಪ
ಕರ್ಣಸುಖಕಾನಂದವೀಯುವ ವಿಮಲ ಚರಿತವನು ||
ವರ್ಣನಾ ಚಮತ್ಕೃತಿಯಲಿದ ಗೋ
ಕರ್ಣ ಪುರಾಣವೆಂಬ ಪೆಸರಲಿ
ವರ್ಣಿಸಿದನಾ ಮುನಿಪ ವರಕವಿ ಬತ್ತಲೇಶ್ವರನು ||೧೮||

ಇಷ್ಟು ಹೊತ್ತಗೆಯಲ್ಲದೇ ಮ
ತ್ತಿಷ್ಟು ಪುಸ್ತಕಗಳನು ಸರಸದಿ
ಕಷ್ಟವಿಲ್ಲದೆ ಬರೆದು ಲೋಕಕೆ ಅರ್ಪಿಸಿದರವರು ||
ಕಷ್ಟವಹ ಸಂಸಾರ ದುಃಖವ
ಶಿಷ್ಟವಾಗಿರುವಾತ್ಮಜ್ಞಾನವ
ಸ್ಪಷ್ಟಪಡಿಪ ವಿಚಾರದೀಪ ಜ್ಞಾನವಾಸಿಷ್ಠ ||೧೯||

ಮಾಲ್ಯವಂತನ ನೀತಿ ಮತ್ತಾ
ಮೂಲಕಾಸುರ ರುಂಡಭೈರವ
ಕಾಳಗದ ಕುಶಲವರ ಐರಾವಣನ ಕಾಳಗವ ||
ಮೇಲೆ ಮತ್ತಾ ವೆಂಕಟೇಶನ
ಲೀಲೆಯನು ವಿವರಿಪ ಚರಿತ ಶ್ರೀ
ಶೈಲ ದೇವಿಮಹಾತ್ಮೆ ಮೊದಲಾದಖಿಳ ಕೃತಿಗಳನು ||೨೦||

ಭಕ್ತನಿಹ ಪ್ರಹ್ಲಾದ ಚರಿತೆಯ
ಮುಕ್ತಿ ಸಿರಿ ಪರಮಾತ್ಮ-ಬೋಧೆಯ
ಭಕ್ತಿಸುಧರಸ ಸಹಿತವಾದಧ್ಯಾತ್ಮ ಶತಕವನು ॥
ಭಕ್ತಿಯಿಂದಲೆ ಯುಕ್ತಿಯಿಂದಲೆ
ಭಕ್ತಜನಕಾನಂದವೀಯುವ
ಮುಕ್ತನಿಹ ಕೃತಿಗಳನು ರಚಿಸಿದರಲ್ಲಿ ಮಿಗಿಲೆನಿಸಿ ॥ ೨೧ ॥

ಸಿದ್ಧಿಕ್ಷೇತ್ರದ ಹರಿತಕೀಪುರ
ದುದ್ದಕೂ ನೆಲಸಿರುವ ಯತಿಗಳು
ಶುದ್ಧಮನದಿಂದುತ್ತಮೋತ್ತಮವಾದ ಕೃತಿಗಳನು ॥
ಮುಗ್ಧ ಜನರಿಗೆ ತಿಳಿಯುವಂದದಿ
ಶುದ್ಧ ಕನ್ನಡವೆನಿಪ ನುಡಿಯಲಿ
ಸಿದ್ಧಿ ಫಲವಾಶಿಸದೆ ಬರೆದರು ಗುರುವಿನಾಜ್ಞೆಯಲಿ ॥ ೨೨ ॥

ಆದಿಯಲ್ಲಿದ್ದಂತೆ ಬರೆದೆನು
ಸಾಧನವಿದೆಂದೆನುತ ಮಾಂಸದ
ಲಾದ ದೃಷ್ಟಿ ಮನಸ್ಸು ಚಂಚಲದಿಂದಲಾಗಿರುವ ॥
ಪಾದ ಪದಸೊನ್ನಕ್ಷರಂಗಳು
ಭೇದ ಭಿನ್ನ ವಿಸರ್ಗ ಯೇರಿಳಿ
ಕಾದು ರಕ್ಷಿಸಿ ಹರಿಹರಾ ಕ್ಷಮ ತ್ರಾಹಿ ಗುರುವರ್ಯ ॥ ೨೩ ॥

ಬುದ್ಧಿಶಾಲಿಗಳಾದ ಪ್ರಾಜ್ಞರಿ
ಬಿದ್ದೆರಗಿ ಬೇಡುವೆನು ಯಿದರೊಳ
ಗಿದ್ದ ತಪ್ಪುಗಳನ್ನು ಕ್ಷಮಿಸುತ ತಿದ್ದಿಕೋದುವುದು ॥
ವಿದ್ಯಹೀನನ ಕರದ ದೋಷವ
ಶುದ್ಧ ಹಂಸಕ್ಷೀರ ನ್ಯಾಯದಿ
ಸಿದ್ಧ ಪುರುಷರು ಭಾವಿಸುವುದಾಗ್ರಹವ ಮಾಡದಲೆ ॥ ೨೪ ॥

ಚಿಣ್ಣರೋದುವ ತೆರದಿ ಕ್ರಮದೊಳ್
ಗಿನ್ನಿದರ ಮುದ್ರಿಸಿಹೆ ನಾನಿದ
ಮನ್ನಿಸುತ ಕೈಗೊಂಡ ಸುಜನಂಗೆರಗಿ ಪೇಳುವೆನು ||
ಮಣ್ಣುಹುಳ ಮೂಷಿಕವು ಯಿದರನು
ತಿನ್ನಗೊಡದತ್ಯುಗ್ರ ವಸ್ತುಗೆ
ಕನ್ನಗಳ್ಳರಿಗಿಕ್ಕದನುದಿನ ಪಾಲಿಸುವುದೆಂದು || ೨೫ ||

ತ್ವರದಿ ಕೊಳ್ಳಿರಿ ಕನ್ನಡಿಗರೇ
ತರಿಸಿ ಪ್ರೋತ್ಸಾಹಿಸಿರಿ ನೀವ್ ಈ
ತರದ ಬಹುಬೆಲೆಯುಳ್ಳ ಪ್ರಾಚೀನ ಗ್ರಂಥವಿವುಗಳನು ||
ಭರದಿ ಓದಿರಿ ಬಳಿಕ ನಿವಿಷ್ಟ
ಸರಿಕರಿಗೆ ಯೀ ತರದ ಕಾರ್ಯಕೆ
ಸರಸದಿಂ ಸಹಕರಿಸಲಿಕೆ ನೀವ್ ಪೇಳಿ ಮುದದಿಂದ || ೨೬ ||

ತಾತ್ಸಾರವೆಸಗದೀ ಕೃತಿ
ಯುತ್ಸಾಹದೊಳೋದಿ ನೋಡಿ ಭಾಷಾಭಿಜ್ಞರ್ ||
ಮಾತ್ಸರ್ಯವನುಳಿದೆನ್ನೊಳ್
ಪ್ರೋತ್ಸಾಹದೊಳೀಯಲೆನಗಭಿಪ್ರಾಯಗಳಂ || ೨೭ ||

ಕನ್ನಡನುಡಿ ಪರಿವಿಡಿಯಂ
ಚೆನ್ನಗೆ ತಿಳಿದಿರ್ಪ ಸಕಲ ಪಂಡಿತ ನಿಚಯಂ ||
ಮುನ್ನಿದನಿರದವಲೋಕಿಸಿ
ಸನ್ನಯಿನೆನಗೀಯಲೆಂಬೆ ತಮ್ಮಭಿಮತಮಂ || ೨೮ ||

ತಪ್ಪೊದಗಿರಲೆನ್ನಿಂದದ
ನೊಪ್ಪುತೆ ತಿದ್ದುವೆನು ಮರಳಿ ತಪ್ಪಾಗದವೋಲ್ ||
ತಪ್ಪದೆ ನೆನೆದಪೆನೆನ್ನಯ
ತಪ್ಪುಗಳಂ ಬಿಡದೆ ತೋರಿದವರುಪಕೃತಿಯಂ || ೨೯ ||

—o—

# ಕನ್ನಡ ಕರಾವಳಿ ಗ್ರಂಥಪ್ರಕಾಶನ, ಹೆಗಡೆ

## ಉದ್ದೇಶ, ಧ್ಯೇಯ, ಧೋರಣೆಗಳು.

ನಾವು " ಕನ್ನಡ ಕರಾವಳಿ ಗ್ರಂಥಪ್ರಕಾಶನ " ವೆಂಬ ಸಂಸ್ಥೆಯನ್ನು ಸ್ಥಾಪಿಸಿಕೊಂಡಿದ್ದು ಅದರ ಮೂಲಕ ಸಾಹಿತ್ಯ ಸೇವೆಯನ್ನು ಸಲ್ಲಿಸಬೇಕೆಂದು ಆಶಿಸಿದ್ದೇವೆ. ೧೯೭೧ ನೇ ಜನವರಿಯಲ್ಲಿ ಈ ಜಿಲ್ಲೆಗೆ ಆಗಮಿಸಿದ ಶ್ರೀಯುತ ಕವಿಭೂಷಣ ಬೆಟಗೇರಿ ಕೃಷ್ಣಶರ್ಮಾ ಅವರು ಈ ಹೆಸರನ್ನು ಸೂಚಿಸಿ, ಈ ಗ್ರಂಥಮಾಲೆಯ ಅಸ್ತಿತ್ವಕ್ಕೆ ಅಸ್ತಿಭಾರವನ್ನು ಹಾಕಿ ಆಶೀರ್ವದಿಸಿದ್ದಾರೆ. ನಮ್ಮಲ್ಲಿರುವ ಕಾರ್ಯಪ್ರವೃತ್ತಿಯನ್ನು ಜಾಗೃತಗೊಳಿಸಿ ಹುರಿದುಂಬಿಸಿದ್ದಾರೆ. ಈ ಸಂದರ್ಭದಲ್ಲಿ ಈ ಗ್ರಂಥಪ್ರಕಾಶನದ ಉದ್ದೇಶ, ಧ್ಯೇಯ ಮತ್ತು ಧೋರಣೆಗಳನ್ನು ತಮ್ಮ ಎದುರು ಇಡಲು ಆಶಿಸಿದ್ದೇವೆ.

೧) ಹಳೆಯ ತಾಡವೋಲೆ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸುವುದು.

೨) ತಾಡವೋಲೆ ಹಾಗೂ ಇತರ ಗ್ರಂಥಗಳ ಪುಸ್ತಕ ಭಾಂಡಾರವನ್ನು ಸ್ಥಾಪಿಸುವದು.

೩) ಸನಾತನ ಧರ್ಮಕ್ಕೆ ಪೋಷಕವಾದಂತಹ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸುವದು.

೪) ಕಥೆ, ಕವನ, ಕಾದಂಬರಿ, ನಾಟಕ, ವಿಮರ್ಶೆ, ವಿಚಾರಸಾಹಿತ್ಯ, ಸಂಶೋಧನಾತ್ಮಕ ಗ್ರಂಥ ಇವೇ ಮೊದಲಾದವುಗಳಿಗೆ ಸಂಬಂಧಪಟ್ಟ ಗ್ರಂಥಗಳನ್ನು ಪ್ರಕಟಪಡಿಸುವದು.

೫) ಪುಸ್ತಕ ಭಾಂಡಾರವನ್ನು ನಡೆಯಿಸುವದು.

೬) ವಿದ್ವಾಂಸರು, ಪಂಡಿತರು, ಮಹನೀಯರು, ಮೊದಲಾದವರುಗಳಿಂದ ಉಪನ್ಯಾಸಗಳನ್ನು ಏರ್ಪಡಿಸುವದು.

೭) ಶೈಕ್ಷಣಿಕ ಪ್ರಚಾರಕ್ಕೆ; ಧಾರ್ಮಿಕ ಹಾಗೂ ಸಾಮಾಜಿಕ ಪ್ರಚಾರಗಳಿಗೆ ಅನುಕೂಲವಾದ ಇತರ ಕಾರ್ಯಗಳನ್ನು ಕೈಕೊಳ್ಳುವದು.

೮) ವಿದ್ವಾಂಸರು, ಪಂಡಿತರು ಮೊದಲಾದವರನ್ನು ಗೌರವಿಸಿ ಸತ್ಕರಿಸುವದು ಇತ್ಯಾದಿ ಇತ್ಯಾದಿ.

ಸಹೃದಯರಾದ ತಾವು ಇದಕ್ಕೆ ತನು-ಮನ-ಧನದಿಂದ ಸಹಾಯ ಸಹಕಾರ ನೀಡುತ್ತೀರಾಗಿ ಆಶಿಸಿ ಧೈರ್ಯದಿಂದ ಮುಂದಡಿಯಿಟ್ಟಿದ್ದೇವೆ.

— ೦ —

# ವಿಷಯಾನುಕ್ರಮಣಿಕೆ



## ೪) ಅಧ್ಯಾತ್ಮ ರಾಮಾಯಣ

### ೧) ಬಾಲಕಾಂಡ

**ಐದನೆಯ ಸಂಧಿ :-** ೪೭

ವಿಶ್ವಾಮಿತ್ರನು ದಶರಥನ ಬಳಿಗೆ ಬಂದು ರಾಮ ಲಕ್ಷ್ಮಣರನ್ನು ಬೇಡಿದ್ದು. ವಸಿಷ್ಠ ದಶರಥನಿಗೆ ತಿಳಿ ಹೇಳಿ ರಾಮ ಲಕ್ಷ್ಮಣರನ್ನು ವಿಶ್ವಾಮಿತ್ರರೊಡನೆ ಕಳುಹಿಸಿದ್ದು. ರಾಮನು ರಾಕ್ಷಸರನ್ನು ಗೆಲಿದುದು.

**ಆರನೆಯ ಸಂಧಿ :-** ೫೬

ಅಹಲ್ಯಾದೇವಿಗೆ ಶಾಪ. ರಾಮನಿಂದ ಆಕೆಯ ಶಾಪ ವಿಮೋಚನೆ. ಅಹಲ್ಯೆ ಪುನಃ ಪತಿಯನ್ನು ಸೇರಿದ್ದು ಇತ್ಯಾದಿ.

**ಏಳನೆಯ ಸಂಧಿ :-** ೬೬

ರಾಮಚಂದ್ರನು ವಿಶ್ವಾಮಿತ್ರರೊಡನೆ ಮಿಥಿಲಾ ನಗರಕ್ಕೆ ಬಂದದ್ದು. ಶಿವ ಧನುಸ್ಸನ್ನು ಮುರಿದು ಜನಕನ ಮಗಳಾದ ಸೀತಾದೇವಿಯನ್ನು ವರಿಸಿದ್ದು. ಸೀತಾ ರಾಮರ ವಿವಾಹ.

**ಎಂಟನೆಯ ಸಂಧಿ** ೭೯

ಮಿಥಿಲೆಯಿಂದ ಅಯೋಧ್ಯಾ ನಗರಕ್ಕೆ ಪ್ರಯಾಣ. ದಾರಿಯಲ್ಲಿ ಪರಶುರಾಮನು ಶ್ರೀರಾಮನನ್ನು ಎದುರಿಸಿದುದು. ಪರಶುರಾಮನ ಸೋಲು. ಶ್ರೀರಾಮನು ಅಯೋಧ್ಯೆಗೆ ಬಂದುದು.

## ೨ ಅಯೋಧ್ಯಾಕಾಂಡ

**ಒಂಭತ್ತನೆಯ ಸಂಧಿ :-** ೯೩

ನಾರದನು ಅಯೋಧ್ಯೆಗೆ ಬಂದದ್ದು. ಶ್ರೀರಾಮನನ್ನು ಭೆಟ್ಟಿಯಾಗಿ ಆತನಿಗೆ ಭೂ ಭಾರಹರಣದ ಕಾರ್ಯವನ್ನು ನೆನಪು ಮಾಡಿದ್ದು.

**ಹತ್ತನೆಯ ಸಂಧಿ :-** ೧೦೫

ರಾಮನಿಗೆ ಪಟ್ಟಾಭಿಷೇಕ ಮಾಡಲು ದಶರಥನ ಸನ್ನಾಹ. ವಸಿಷ್ಠರೊಡನೆ ಸಂವಾದ. ಕುಬ್ಜೆ ಕೈಕೇಯಿಗೆ ಈ ವಿಷಯ ತಿಳಿಸಿ ಪಟ್ಟಾಭಿಷೇಕ ಕಾರ್ಯಕ್ಕೆ ವಿಘ್ನ ತಂದೊಡ್ಡಿದ್ದು.

ಹನ್ನೊಂದನೆಯ ಸಂಧಿ :- ೧೧೭

ಕೈಕೇಯಿಯ ಪ್ರಯತ್ನ. ರಾಮ ಪಟ್ಟಾಭಿಷೇಕಕ್ಕೆ ವಿಘ್ನ. ದಶರಥನು ಕೈಕೆಯಿಯ ಇಚ್ಛೆ ಪೂರೈಸಿದ್ದು.

ಹನ್ನೆರಡನೆಯ ಸಂಧಿ :- ೧೩೦

ತಂದೆಯ ಮಾತನ್ನು ನಡೆಯಿಸುವದಕ್ಕಾಗಿ ರಾಮನು ಕಾಡಿಗೆ ಹೊರಡಲು ತಯಾರಾದದ್ದು. ರಾಮನೊಡನೆ ಸೀತಾ ಲಕ್ಷ್ಮಣರೂ ಸಹ ಹೊರಡಲು ತಯಾರಾದರು.

ಹದಿಮೂರನೆಯ ಸಂಧಿ :- ೧೩೪

ತಂದೆಯನ್ನು ಬೀಳ್ಕೊಂಡು ಶ್ರೀರಾಮನು ವನವಾಸಕ್ಕೆ ಹೋದದ್ದು. ಪುರಜನರು ರಾಮನನ್ನು ಬೆಂಬಲಿಸಿದ್ದು. ಶ್ರೀರಾಮನು ಅವರನ್ನು ಸಮಾಧಾನ ಪಡಿಸಿ ಹಿಂದಕ್ಕೆ ಕಳುಹಿಸಿದುದು. ರಾಮನು ಶೃಂಗವೇರಿಯಲ್ಲಿ ವಾಸ ಮಾಡಿದ್ದು.

ಹದಿನಾಲ್ಕನೆಯ ಸಂಧಿ :- ೧[illegible]

ಮಿತ್ರನಾದ ಗುಹನ ಸಮಾಗಮ. ಆತನೊಡನೆ ಗಂಗಾನದಿಯನ್ನು ದಾಟಿದುದು. ಚಿತ್ರಕೂಟದಲ್ಲಿ ಮುನಿಗಳೊಡನೆ ರಾಮನ ವಾಸ.

ಹದಿನೈದನೆಯ ಸಂಧಿ :- ೧೪೪

ವಾಲ್ಮೀಕಿಯಾಶ್ರಮದಲ್ಲಿ ಶ್ರೀರಾಮನ ವಾಸ. ವಾಲ್ಮೀಕಿಯು ತಾನು ರಾಮನಾಮ ಜಪದಿಂದ ಮುನಿಯಾದ ವೃತ್ತಾಂತವನ್ನು ವಿವರಿಸಿದ್ದು.

ಹದಿನಾರನೆಯ ಸಂಧಿ :- ೧೫೮

ರಾಮ ಚಿಂತೆಯಲ್ಲಿ ದಶರಥನ ಮರಣ. ಅಯೋಧ್ಯೆಗೆ ಭರತನ ಆಗಮನ. ವಸಿಷ್ಠ ಋಷಿ ನಡೆದ ಸಂಗತಿಯನ್ನೆಲ್ಲ ಭರತನಿಗೆ ತಿಳುಹಿ ಆತನನ್ನು ಸಮಾಧಾನ ಪಡಿಸಿದ್ದು.



ಶ್ರೀ ಸೀತಾರಾಮಾಭ್ಯಾಂ ನಮಃ

# ಪ್ರಕಾಶಕರ ನುಡಿ

ಸಹೃದಯ ಓದುಗರಾದ ತಮ್ಮ ಕರಕಮಲಗಳಲ್ಲಿ ಈ "ಕನ್ನಡ ಕರಾವಳಿ ಗ್ರಂಥಪ್ರಕಾಶನ, ಹೆಗಡೆ" ಇದರ ಹತ್ತೊಂಭತ್ತನೆಯ ಕುಸುಮ-ವಾದ ಅಧ್ಯಾತ್ಮ ರಾಮಾಯಣ ಭಾಗ-೧ ಎಂಬ ಉತ್ತಮೋತ್ತಮವಾದ ಅಧ್ಯಾತ್ಮ ಪ್ರಧಾನವಾದ ರಾಮಾಯಣ ಗ್ರಂಥವನ್ನು ಇಡಲು ತುಂಬಾ ಆನಂದವೆನಿಸುತ್ತದೆ ಸಹೃದಯ ಓದುಗರಾದ ತಾವು ಅತ್ಯಂತ ಆಸ್ಥೆಯಿಂದ ಈ ಗ್ರಂಥವನ್ನು ಓದಿ ತಮ್ಮ ಸದಭಿಪ್ರಾಯವನ್ನು ನಮಗೆ ಅರುಹಬೇಕಾಗಿ ಸವಿನಯ ವಿನಂತಿ. ಇದರ ಮುಂದಿನ ಭಾಗಗಳೂ ಇದರ ನಂತರ ಮುದ್ರಣ-ಗೊಳ್ಳುವವು ಎಂದು ತಿಳಿಸಲು ಹೆಮ್ಮೆ ಎನಿಸುತ್ತದೆ.

೧೯೭೧ ನೇ ಇಸವಿ ಜನವರಿ ತಿಂಗಳ ಮೊದಲನೇ ವಾರದಲ್ಲಿ ಈ ಜಿಲ್ಲೆಯ ಅನೇಕ ಸ್ಥಳಗಳ ಸಾಂಸ್ಕೃತಿಕ ಪ್ರವಾಸವನ್ನು ಕೈಕೊಂಡ ಶ್ರೀ ಕವಿಭೂಷಣ ಬೆಟಗೇರಿ ಕೃಷ್ಣ ಶರ್ಮ (ಆನಂದಕಂದ) ಇವರು ಈ ಪ್ರಕಾಶನದ ಹೆಸರನ್ನು ಸೂಚಿಸಿದರು ಹಾಗೂ ಇದರ ಪ್ರಾರಂಭೋತ್ಸವ-ವನ್ನು ನೆರವೇರಿಸಿಕೊಟ್ಟು ನಮ್ಮನ್ನು ಪ್ರೋತ್ಸಾಹಿಸಿ ಹುರಿದುಂಬಿಸಿರುತ್ತಾರೆ. ಈ ಜಿಲ್ಲೆ ಉತ್ತಮವಾದ ಸಂಸ್ಕೃತಿಯ ತವರು ಕಲೆಗಳ ನೆಲೆವೀಡು ಜಾನ-ಪದ ಕಲೆಗಳಲ್ಲಂತೂ ವಿಶಿಷ್ಟ ಸ್ಥಾನವನ್ನು ಗಳಿಸಿ ಅದರ ತವರೂರು ಎನಿಸಿ-ಕೊಂಡಿದೆ. ಯಕ್ಷಗಾನ ಕಲೆಯಿಲ್ಲಿ ತನ್ನ ಕೀರ್ತಿ ಪತಾಕೆಯನ್ನು ದಿಕ್ ದಿಗಂತಗಳಲ್ಲಿ ಹಾರಿಸಿ ಪ್ರಸಿದ್ಧಿಯನ್ನು ಪಡೆದಿದೆಯಲ್ಲದೆ ನಿತ್ಯನೂತನವಾಗಿ ಕಳೆಬೀರಿ ಬೆಳಗುತ್ತಲಿದೆ.

ಈ ಜಿಲ್ಲೆಯಲ್ಲಿ ಪ್ರಾಚೀನ ಕವಿಗಳೆಷ್ಟೋ ಆಗಿ ಹೋಗಿರುತ್ತಾರೆ. ಅವರಿಂದ ರಚಿತವಾದ ಅತ್ಯಮೂಲ್ಯ ಕೃತಿಗಳೆಷ್ಟೋ ತಾಡವಾಲೆ-ಕಟ್ಟು-ಗಳಲ್ಲಿ ಸಂಗ್ರಹವಾಗಿ ಮನೆಮನೆಗಳಲ್ಲಿ ಇವೆ. ಅವು ಈಗ ಯೋಗ್ಯ ಸಂರಕ್ಷ-ಕರಿಲ್ಲದೆ ಮೂಲೆಗುಂಪಾಗಿ ಹುಳ ಹುಪ್ಪಡಿಗಳ ಪಾಲಾಗಿ ವರಲೆಗಳ ಆಹಾರ ವಾಗಿ ಹಾಳಾಗಿವೆ; ಹಾಳಾಗುತ್ತಲಿವೆ. ಕೆಲವರು ಇವು ನಿಷ್ಪ್ರಯೋಜಕ ಎಂದು ಬೀಸಾಡುತ್ತಾರೆ. ಗೊಬ್ಬರಗುಂಡಿಗೆ ಒಗೆದಿದ್ದಾರೆ, ಮರಗಳ ಬುಡಕ್ಕೆ ಗೊಬ್ಬರವಾಗಿ ಬೀಸಾಡಿರುತ್ತಾರೆ. ಕೆಲವರು ಇವನ್ನು ಸುಟ್ಟುಹಾಕಿರುತ್ತಾರೆ. ಹೀಗೆ ಹಾಳಾಗುತ್ತಿರುವ ಇಂಥ ಗ್ರಂಥಗಳನ್ನೆಲ್ಲ

ಸಂಗ್ರಹಿಸಿ, ಶುದ್ಧೀಕರಿಸಿ, ಸಂಶೋಧಿಸಿ ಪ್ರಕಟಪಡಿಸುವ ಹಂಬಲವನ್ನು ಹೊತ್ತು ಈ ಕಾರ್ಯಕ್ಕೆ ಅಣಿಯಾಗಿ ಮುಂದಡಿಯಿಟ್ಟಿರುತ್ತೇವೆ.

ಈಗಾಗಲೇ ಈ ಪ್ರಕಾಶನದ ವತಿಯಿಂದ ದೇವೀಮಹಾತ್ಮೆ, ಮೊಗ್ಗು, ಕೆಕ್ಕಾರ ಶಿವಭಟ್ಟರ ಚರಿತ್ರೆ, ರುಂಡಭೈರವನ ಕಾಳಗ, ಬ್ರಹ್ಮಗೀತೆ, ವೆಂಕಟೇಶ ಚರಿತೆ, ಪ್ರಲ್ಹಾದ ಚರಿತೆ, ಮಾಲ್ಯವಂತನ ನೀತಿ ಜ್ಞಾನ ವಾಸಿಷ್ಠ, ಕುಶಲವರ ಕಾಳಗ, ಕೌಸಲ್ಯಾ ವಿವಾಹ. ಐರಾವಣನ ಕಾಳಗ, ಭೈರವ ಪುರಾಣ, ಆದಿಪರ್ವ, ಮೂಲಕಾಸುರನ ಕಾಳಗ, ವಿಚಾರದೀಪ, ಪರಮಾತ್ಮ ಬೋಧೆ, ಅಧ್ಯಾತ್ಮ ಶತಕ ಮತ್ತು ಭಕ್ತಿಸುಧಾರಸ ಇವು ಪ್ರಕಟವಾಗಿ ಜನರ ಮೆಚ್ಚುಗೆ ಗಳಿಸಿವೆ. ಅಧ್ಯಾತ್ಮ ರಾಮಾಯಣದ ಮೊದಲನೆಯ ಭಾಗ ಮುದ್ರಣವಾಗಿ ನಿಮ್ಮ ಕೈಸೇರುತ್ತಲಿದೆ.

ಶ್ರೀಶೈಲ ಮಹಾತ್ಮೆ ಹಾಗೂ ಉತ್ತರ ಕನ್ನಡ ಜಿಲ್ಲೆಯ ಗ್ರಂಥಕಾರರು ಇವೂ ಕೂಡ ಪ್ರಕಟವಾಗಿವೆ.

ಇದಲ್ಲದೇ ರಾಮಾಯಣ, ಗೋಕರ್ಣ ಪುರಾಣ, ಬ್ರಹ್ಮೋತ್ತರ ಕಾಂಡ, ಸಹ್ಯಾದ್ರಿ ಖಂಡ, ಶ್ರೀಗೀತೆ, ಭಾಗವತ, ಶಂಕರ ಸಂಹಿತೆ ಇವೇ ಮೊದಲಾದ ಅನೇಕ ಕೃತಿಗಳು ದೊರಕಿದ್ದು ಅವೆಲ್ಲ ಒಂದೊಂದಾಗಿ ಶುದ್ಧೀಕೃತವಾಗುತ್ತಲಿವೆ ಇವುಗಳ ಪ್ರಕಟನೆಯಿಂದ ನಮ್ಮ ಜಿಲ್ಲೆಯ ಹೆಸರು ಸಾಹಿತ್ಯಾಕಾಶದಲ್ಲಿ ಚಿರಸ್ಥಾಯಿಯಾಗಿ ನಿಲ್ಲಬೇಕಾಗಿದೆ. ಈ ಜಿಲ್ಲೆ ಬರೇ-ಕಾಡಿನಿಂದ ತುಂಬಿದ ಜಿಲ್ಲೆ ಅಲ್ಲ. ಸಾಹಿತ್ಯ ಸಂಸ್ಕೃತಿಗಳ ಸಮೃದ್ಧ ನೆಲೆ-ವೀಡೂಕೂಡ ಹೌದು ಎಂದು ತಿಳಿದುಬರಬೇಕಾಗಿದೆ.

ಇದಕ್ಕೆ ನಿಮ್ಮಂಥವರ ಸಹಾಯ ಸಹಕಾರ ಅತ್ಯಂತ ಅವಶ್ಯವಾಗಿ ಬೇಕಾಗಿದೆ. ರಾಮಾಯಣದ ಮುದ್ರಣಕ್ಕೆ ತೋಟಗಾರ್ಸ ಸೊಸೈಟಿ ಸಿರ್ಸಿ, ತಿರುಮಲ ತಿರುಪತಿ, ದೇವಸ್ಥಾನ ತಿರುಪತಿ ಮೊದಲಾದವರು ಸಹಾಯ ಹಸ್ತ ನೀಡಿ ಹರಸಿದ್ದಾರೆ ಅವರಿಗೆ ನಾವು ಅತ್ಯಂತ ಕೃತಜ್ಞರು. ತಾವು ಇದನ್ನು ಓದಿ. ತಮ್ಮ ಮಿತ್ರರಿಗೂ ಕೊಂಡುಕೊಂಡು ಓದಲು ಪ್ರೋತ್ಸಾಹಿಸಬೇಕೆಂದು ತಮ್ಮಲ್ಲಿ ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇವೆ. ಹಾಗೂ ಉಳಿದ ಅಮೂಲ್ಯ ಕೃತಿಗಳ ಪ್ರಕಟನೆಗೆ ಕಾರಣೀಕರ್ತೃಗಳಾಗಬೇಕು ಎಂದು ಆಶಿಸುತ್ತೇವೆ.

ಪ್ರಕಾಶಕರು

# ಪ್ರಸ್ತಾವನೆ

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥

ಈ ಭರತಖಂಡವು ಪುಣ್ಯಭೂಮಿ. ಇಲ್ಲಿರುವಷ್ಟು ತೀರ್ಥಕ್ಷೇತ್ರಗಳು, ಪುಣ್ಯಸ್ಥಳಗಳು, ಪವಿತ್ರತಮವಾದ ನದಿಗಳು ಮುಂತಾದವುಗಳು ಬೇರಾವ ದೇಶಗಳಲ್ಲೂ ಇಲ್ಲ. ಇಲ್ಲಿಯ ಪುರಾಣ ಕಾವ್ಯಗಳಾದ ರಾಮಾಯಣ ಮಹಾಭಾರತಾದಿಗಳು ಅತ್ಯಂತ ಪ್ರಾಚೀನವೂ, ಪ್ರಸಿದ್ಧವೂ, ಬೋಧಪ್ರದವೂ ಆದ ಗ್ರಂಥಗಳು. ಇವು ಪ್ರತಿಯೊಬ್ಬರ ಮನೆ ಮನೆಗಳಲ್ಲೂ ಇವೆ. ಇವು ಆಗಿನ ಕಾಲದ ಜನಜೀವನವನ್ನು ಚಿತ್ರಿಸುವದಲ್ಲದೇ ಜನರಿಗೆ ಸಾರ್ವಕಾಲಿಕ ಮೌಲ್ಯಗಳನ್ನು ನೀಡುವಂಥ ಉತ್ತಮೋತ್ತಮ ಗ್ರಂಥಗಳಾಗಿವೆ. ಜನರಲ್ಲಿ ದಯೆ–ಧರ್ಮ, ರೀತಿ–ನೀತಿ, ಅಹಿಂಸೆ ಮೊದಲಾದವುಗಳನ್ನು ಬೋಧಿಸುವ ನೀತಿ ಗ್ರಂಥಗಳಾಗಿಯೂ ಇರುವಂಥವುಗಳಾಗಿವೆ. ಇಂಥ ಹಲವಾರು ಗ್ರಂಥ–ಗಳು ಭರತಖಂಡದಲ್ಲಿ ಹರಡಿಕೊಂಡಿವೆ ಜನರ ಮೇಲೆ ತಮ್ಮ ಪ್ರಭಾವಗಳನ್ನು ಬೀರಿ ಉತ್ತಮ ಸಂಸ್ಕೃತಿಯನ್ನು ನೀಡಿ ಅವರನ್ನು ಸನ್ಮಾರ್ಗಕ್ಕೆ ಕೊಂಡೊಯ್ಯುವಂಥವುಗಳಾಗಿವೆ

ವಾಲ್ಮೀಕಿ ಮಹರ್ಷಿಗಳಿಂದ ರಚಿತವಾದ ಶ್ರೀ ಮದ್ರಾಮಾಯಣವು ಆದಿಕಾವ್ಯವೆಂದು ಪ್ರಸಿದ್ಧಿಯನ್ನು ಪಡೆದಿದೆ ಕವಿಯೂ ಕೂಡ ಆದಿಕವಿ ಎಂದು ಹೇಳಿಸಿಕೊಂಡಿದ್ದಾನೆ. ಇದು ಒಂದು ವಂಶದ ಚರಿತ್ರೆಯನ್ನು ಚಿತ್ತರಿಸುವದಲ್ಲದೇ ಆಗಿನ ಕಾಲದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ರೀತಿನೀತಿಗಳನ್ನು ವಿವರಿಸುತ್ತದೆ ಅದಲ್ಲದೇ ಸಾರ್ವಕಾಲಿಕ ಸತ್ಯವನ್ನು ಸಾರುವಂಥ ಗ್ರಂಥವಾಗಿದೆ. ರಾಮಚಂದ್ರನ ಅವತಾರವು ಪೂರ್ಣಾವತಾರ ಎಂದು ಖ್ಯಾತಿಯನ್ನು ಪಡೆದಿದೆ. ಇದು ಮೂಲ ಸಂಸ್ಕೃತದಲ್ಲಿದ್ದರೂ ದೇಶದ ನಾನಾ ಭಾಷೆಗಳಲ್ಲಿ ಪರಿವರ್ತಿತವಾಗಿ ಜನಮನವನ್ನು ಸೂರೆಗೊಳ್ಳುತ್ತಿದೆ. ಇಂದಿಗೂ ಜನರಿಂದ ಬೇರೆ ಬೇರೆ ಛಂದಸ್ಸುಗಳಲ್ಲಿ, ಗದ್ಯ–ಪದ್ಯಗಳಲ್ಲಿ ರಾಮಾಯಣವು ಪರಿವರ್ತಿತವಾಗುತ್ತಿದೆ. ಇದೇ ಅದರ ಸಾರ್ವಕಾಲಿಕ ಸತ್ಯವನ್ನು, ಮೌಲ್ಯವನ್ನು ವಿವರಿಸುವದಕ್ಕೆ ಸಾಕ್ಷೀಭೂತವಾಗಿದೆ.

ನಮ್ಮ ಉತ್ತರಕನ್ನಡ ಜಿಲ್ಲೆಯೂ ಈ ವಿಷಯದಿಂದ ಹೊರತಾಗಿಲ್ಲ. ಈ ಜಿಲ್ಲೆಯು ಗುಡ್ಡಗಾಡುಗಳಿಂದ, ಸಹ್ಯಪರ್ವತದ ಗಿರಿ ಕಂದರಗಳಿಂದ ಹಲವಾರು ಹೊಳೆ ಹಳ್ಳ ಕೊಳ್ಳಗಳಿಂದ ಪರಿವೃತವಾದ ನಾಡು. ಅಲ್ಲಲ್ಲಿ ಚಿಕ್ಕಪುಟ್ಟ ಹಳ್ಳಿಗಳು. ಈ ಹಳ್ಳಿಗಳಲ್ಲಿ ವಾಸಿಸುವ ಜನರು ಸುಸಂಸ್ಕೃತರು ಸದಾಚಾರ ಸಂಪನ್ನರು, ಅತಿಥ್ಯ ಪ್ರಿಯರು ಹಲವಾರು ಬಗೆಯ ಕುಶಲ ಕಲೆಗಳಲ್ಲಿ ಪರಿಣತರಾದವರು. ಹಳೆಯ ಗ್ರಂಥಗಳಾದ ರಾಮಾಯಣ, ಮಹಾಭಾರತ, ಭಾಗವತ, ವೇದಾಂತ ಗ್ರಂಥ ಮೊದಲಾದವುಗಳಲ್ಲಿಯ ವಿಷಯಗಳನ್ನು, ಕಥೆಗಳನ್ನು ಚೆನ್ನಾಗಿ ಬಲ್ಲವರು. ವಿಷಯವು ತಿಳಿಯದೇ ಇದ್ದರೆ ತಿಳಿದ ಹಿರಿಯರಿಂದ ಕೇಳಿ ತಿಳಿದು ತಮ್ಮ ಸುಸಂಸ್ಕೃತಿಯನ್ನು ಹೆಚ್ಚಿಸಿಕೊಂಡವರು

ರಾಮಾಯಣವು ಜನಪ್ರಿಯವಾದ ಕಾವ್ಯ. ಸಂಸ್ಕೃತದಲ್ಲಿ ಹಲವಾರು ರಾಮಾಯಣಗಳಿವೆ. ವಾಲ್ಮೀಕಿ ರಾಮಾಯಣ, ಅಧ್ಯಾತ್ಮರಾಮಾಯಣ, ಅದ್ಭುತ ರಾಮಾಯಣ, ಆನಂದ ರಾಮಾಯಣ ಇತ್ಯಾದಿ ಇತ್ಯಾದಿ ಈ ರಾಮಾಯಣಗಳೆಲ್ಲ ಸಂಸ್ಕೃತ ಭಾಷೆಯಲ್ಲಿವೆ. ಅದನ್ನು ಸರ್ವಜನೋಪಯೋಗಿಯಾಗಿ ಮಾಡಲು ಎಷ್ಟೋ ಜನರು ತಮ್ಮ ಮಾತೃಭಾಷೆಗಳಲ್ಲಿ ರಚಿಸಿ ಜನರ ಪ್ರಸಂಸೆಯನ್ನು ಗಳಿಸಿರುತ್ತಾರೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಮನೆಮನೆಗಳಲ್ಲಿ ತಾಳೆಗರಿ ಗ್ರಂಥಗಳು ದೊರೆಯುತ್ತವೆ. ಅವನ್ನು ಅವರು ಸಂರಕ್ಷಿಸಿಟ್ಟು ಶ್ರಾವಣಮಾಸದಲ್ಲಿ ಹಿರಿಯರಿಂದ ಓದಿಸಿ ಕೇಳುವ ಪರಿಪಾಠವಿಟ್ಟುಕೊಂಡಿರುತ್ತಾರೆ. ನವರಾತ್ರಿ ವೇಳೆಯಲ್ಲಿ ಶಾರದಾ ಪೂಜಾ ಸಮಯದಲ್ಲಿ ದೇವರ ಪೀಠದಲ್ಲಿಟ್ಟು ಪೂಜೆ ಮಾಡುವ ಪರಿಪಾಠ ಹಾಗೂ ಮಹಾನವಮಿಯ ದಿನ ವಿಸರ್ಜನೆ ಮಾಡಿ ಪುಸ್ತಕವನ್ನು ಓದುವ ಪರಿಪಾಠ ಈಗಲೂ ಇದೆ.

ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲೂಕಿನಲ್ಲಿಯ ಕುಮಟಾದಿಂದ ಸುಮಾರು ೨೦ ಕಿ. ಮಿ. ದೂರದಲ್ಲಿ (ಕುಮಟಾ-ಸಿರ್ಸಿ ರಸ್ತೆಯ ಮೇಲೆ) ಹರೀಟೆ ಎಂಬ ಹಳ್ಳಿ ಇದೆ. ಇದು ಹಿಂದಿನಕಾಲದಲ್ಲಿ ಒಂದು ಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು ಎಂದು ಅಲ್ಲಿಯ ಸಂಶೋಧನೆ ಮಾಡಿದಾಗ

ತಿಳಿದುಬರುತ್ತದೆ. ಈ ಹಿಂದೆ ಇದಕ್ಕೆ "ಹರೀತಕೀಪುರ" ಎಂಬ ಹೆಸರು ರೂಢಿಯಾಗಿತ್ತು. ಇಲ್ಲಿ ಹಲವಾರು ಸಾಧು ಸಂತರು ನೆಲಸಿದ್ದು ತಮ್ಮ ಆರಾಧ್ಯ ದೇವರಾದ ಹರೀತಕೀಪುರದ "ಗೋಪೀನಾಥ"ನನ್ನು ಸದಾ ಸೇವಿಸಿ ಸ್ಮರಿಸುತ್ತಿದ್ದರು. ಈ ಸಾಧುಸಂತರು ಲೋಕ ಕಲ್ಯಾಣಾರ್ಥವಾಗಿ ರಾಮಾಯಣ, ಭಾಗವತ, ಭಾರತ ಮೊದಲಾದ ಗ್ರಂಥಗಳನ್ನೂ, ಸ್ಥಳಪುರಾಣಗಳನ್ನೂ ವೇದಾಂತ ಗ್ರಂಥಗಳನ್ನೂ ಸುಲಭವಾದ ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಅವನ್ನೆಲ್ಲ ಸುಲಭವಾದ ಕನ್ನಡ ಛಂದಸ್ಸಾದ ಭಾಮಿನೀ ಷಟ್ಪದಿ ಹಾಗೂ ಸಾಂಗತ್ಯದಲ್ಲಿ ರಚಿಸಿ ಜನೋಪಕಾರಮಾಡಿರುತ್ತಾರೆ. ಈ ಎಲ್ಲ ಸಾಧುಗಳ ಆರಾಧ್ಯ ದೇವರು "ಹರೀತಕೀಪುರದ ಗೋಪೀನಾಥ" ಇವರೆಲ್ಲರ ಆದಿಗುರುವು ಪೂರ್ಣಾತ್ಮಕೃಷ್ಣ ಇದ್ದಿರಬೇಕು. ಬ್ರಹ್ಮಗೀತೆಯಲ್ಲಿ ಕವಿಯು ತನ್ನ ಗುರುಗಳ ವಿಚಾರವಾಗಿ ಈ ರೀತಿ ನುಡಿದಿದ್ದಾನೆ.

ಶರಣು ಶ್ರೀಮದ್ಗುರು ನಿಜಾತ್ಮಗೆ । ಶರಣು ಶರಣಾರಾಧ್ಯ ಗುರುವಿಗೆ
ಶರಣು ಶರಣರ ಪೊರೆವ ಕರುಣಾಕರ ನಿರಂಜನಗೆ ॥
ಶರಣು ಪರಮಾನಂದರೂಪಗೆ । ಶರಣು ಪರಮೋಲ್ಲಾಸ ರೂಪಗೆ
ಶರಣು ಶ್ರೀ ನಿಜಾತ್ಮ ಗುರುಗಳ ಪಾದರೇಣುವಿಗೆ ॥ ೧ ॥

ಆದಿಗುರು ಪೂರ್ಣಾತ್ಮಕೃಷ್ಣರ । ಪಾದಪಂಕಜಗಳಿಗೆರಗಿ ಸ
ದ್ಬೋಧಮಯ ನಿಜಾತ್ಮನಮಲಾಂಘ್ರಿಯನು ಬಲಗೊಂಡು ॥

ಇದಲ್ಲದೇ "ಜ್ಞಾನವಾಸಿಷ್ಠ" "ವಿಚಾರ ದೀಪ"ಗಳಲ್ಲಿ ಗುರುವಿನ ಬಗ್ಗೆ ಈ ರೀತಿ ಬರೆಯಲಾಗಿದೆ.

ಶ್ರೀ ಗುರುವೆ ಗುಣರೂಪ ವಿರಹಿತ । ಶ್ರೀ ಗುರುವೆ ಪರಿಪೂರ್ಣ ಸುಖಮಯ
ಶ್ರೀ ಗುರುವೆ ಸಚ್ಚಿನ್ಮಯಾನಂದೈಕ ವಿಗ್ರಹನೆ ।
ಶ್ರೀ ಗುರುವೆ ನಿರುಪಮ್ಯ ನಿರವಧಿ । ಶ್ರೀ ಗುರುವೆ ನಿಜನಂದ ರೂಪನೆ
ಶ್ರೀ ಗುರುವೆ ನಿಜಾತ್ಮ ಶ್ರೀ ಗುರುಸಿದ್ಧ ಜಯ ಶರಣು ॥ ೧ ॥

ಅವರ ಶಿಷ್ಯ ಪ್ರಶಿಷ್ಯರು ಹಲವಾರು ದೇವರ ಅಂಕಿತಗಳಿಂದ (ಹರೀತಕೀಪುರದ ಸುತ್ತುಮುತ್ತಲಿನ ದೇವರು) ಕಾವ್ಯಗಳನ್ನು ರಚಿಸಿದ್ದಾರೆ. ಅವರ ಕಾವ್ಯಗಳಲ್ಲಿ ರಾಮಾಯಣ, ಅಧ್ಯಾತ್ಮ ರಾಮಾಯಣ, ಭೈರವ ಪುರಾಣ

ಗೋಕರ್ಣ ಪುರಾಣ, ಬ್ರಹ್ಮಗೀತೆ, ವಿಚಾರ ದೀಪ, ಜ್ಞಾನ ವಾಸಿಷ್ಠ ಇವೇ ಮೊದಲಾದ ಹಲವಾರು ಗ್ರಂಥಗಳು ಇವೆ.

ಅಧ್ಯಾತ್ಮ ರಾಮಾಯಣವು ಅಂಥವುಗಳಲ್ಲಿಯು ಒಂದು ಗ್ರಂಥ. ಇದು ಜನರಿಗೆ ಅಧ್ಯಾತ್ಮಿಕ ವಿಷಯವನ್ನು ತಿಳಿಸುವ, ಸಾವಧಪಡಿಸುವ ಉತ್ತಮೋತ್ತಮ ಗ್ರಂಥಗಳಲ್ಲಿ ಒಂದಾಗಿದೆ. ಪ್ರತಿಯೊಂದು ಸಂಧಿಯ ಕೊನೆಯಲ್ಲಿಯೂ "ನಿತ್ಯಾತ್ಮ ಲಕ್ಷ್ಮೀ ನೃಸಿಂಹ" ಎಂಬ ಅಂಕಿತವಿದೆ. ಈ ಗ್ರಂಥವು ಉತ್ತರ ಕಾಂಡ ಸಹಿತ ೭೫ ಸಂಧಿಗಳುಳ್ಳದ್ದು ಒಟ್ಟು ೩೫೦೦ ಪದ್ಯಗಳಿಂದ ಕೂಡಿದ್ದೂ ಆದ ಬೃಹತ್ ಗ್ರಂಥವಾಗಿದೆ. ಪ್ರತಿಯೊಂದು ಕಾಂಡವಲ್ಲಿಯು ಸಂಧಿಗಳು ಹಾಗೂ ಪದ್ಯಗಳ ಸಂಖ್ಯೆಗಳು ಈ ರೀತಿ ಇವೆ.

| | | | | |
|---|---|---|---|---|
| ಬಾಲಕಾಂಡ | — ಸಂಧಿಗಳು | ೮ | ಪದಗಳು | ೩೩೨ |
| ಅಯೋಧ್ಯಾಕಾಂಡ | — ಸಂಧಿಗಳು | ೧೧ | ಪದಗಳು | ೪೯೦ |
| ಅರಣ್ಯಕಾಂಡ | — ಸಂಧಿಗಳು | ೧೦ | ಪದಗಳು | ೪೬೪ |
| ಕಿಷ್ಕಿಂಧಾಕಾಂಡ | — ಸಂಧಿಗಳು | ೮ | ಪದಗಳು | ೪೦೫ |
| ಸುಂದರಕಾಂಡ | — ಸಂಧಿಗಳು | ೪ | ಪದಗಳು | ೨೦೦ |
| ಯುದ್ಧಕಾಂಡ | — ಸಂಧಿಗಳು | ೧೯ | ಪದಗಳು | ೯೮೪ |
| ಉತ್ತರಕಾಂಡ | — ಸಂಧಿಗಳು | ೧೫ | ಪದಗಳು | ೬೨೫ |
| | | ೭೫ | | ೩೫೦೦ |

ಈ ಪುಸ್ತಕವನ್ನು ನಾಲ್ಕು ಭಾಗಗಳಲ್ಲಿ ಪ್ರಕಟಿಪಡಿಸಬೇಕೆಂಬ ವಿಚಾರದಿಂದ ಪ್ರಕಟನೆಯ ಕೆಲಸಕ್ಕೆ ಮುಂದುವರಿದಿದ್ದೇನೆ.

## ಕವಿಯ ವಿಚಾರ

ಈ ಗ್ರಂಥವನ್ನು ಬರೆದ ಕವಿಯು ತನ್ನ ಹೆಸರನ್ನು ಎಲ್ಲಿಯೂ ಹೇಳಿಲ್ಲ. ಪ್ರತಿಯೊಂದು ಸಂಧಿಯ ಕೊನೆಯಲ್ಲಿ "ನಿತ್ಯಾತ್ಮ ಲಕ್ಷ್ಮೀನೃಸಿಂಹ" ಎಂಬ ಅಂಕಿತವಿದೆ ಇದಲ್ಲದೇ "ಬ್ರಹ್ಮಗೀತೆ" ಎಂಬ ಪುಸ್ತಕ (ವೇದಾಂತಪರ) ವನ್ನು ಬರೆದ ಕವಿಯು "ನಿತ್ಯಾತ್ಮ ಲಕ್ಷ್ಮೀನೃಸಿಂಹ" ಎಂಬ ಅಂಕಿತವನ್ನೇ

ಉಪಯೋಗಿಸಿದ್ದಾನೆ. ಈ ದೇಶವು ಆತನ ಆರಾಧ್ಯ ದೇವರಾಗಿರಬೇಕು. ಹರೀತಕೀಪುರದ ಸಮೀಪದಲ್ಲಿಯೇ ಲಕ್ಷ್ಮೀನರಸಿಂಹ ದೇವರ ದೇವಸ್ಥಾನವಿದೆ. ಇದಲ್ಲದೇ

ಶ್ರೀ ಪದದ್ವಯಾನಂತ ಸುಖರಸ | ದಾ ಮಹೋದಧಿ ಪೂರ್ಣಶಶಿ ನಿ
ಸ್ಸೀಮ ನಿರವಧಿ ನಿರ್ವಿಕಾರ ನಿರೀಹ ನಿರ್ದ್ವಂದ್ವ ||
ಕಾಮಿತಾರ್ಥ ವಿದೂರನಾತ್ಮಾ | ರಾಮ ಸಂವಿದ್ಯೋಗಿ ನನ್ನ
ಸ್ವಾಮಿ ಸಿರಿ ನಿತ್ಯಾತ್ಮ ಗುರುಗಳು ಮಾಳ್ಕೆ ಸನುಮತಿಯ ||೧||

ಈ ಪದ್ಯವು ಎರಡೂ ಗ್ರಂಥಗಳಲ್ಲಿ ಬಂದಿದೆ. ಇದರಿಂದ ತಿಳಿದು ಬರುವದೇನೆಂದರೆ — ಕವಿಯ ಗುರು "ನಿತ್ಯಾತ್ಮ" ಎಂಬುದು. ಬಹುಶಃ ಭಾಗವತವನ್ನು ಬರೆದ ನಿತ್ಯಾತ್ಮ ಶುಕಯೋಗಿಯು ಈತನ ಗುರುವಾಗಿರಬೇಕು. ಕವಿಯು ಎಲ್ಲಿಯೂ ತನ್ನ ಹೆಸರನ್ನು ಹೇಳಿಲ್ಲ. ಇದಲ್ಲದೇ ತಂದೆ ತಾಯಂದಿರ ಹೆಸರಾಗಲೀ, ಊರಿನ ಹೆಸರಾಗಲೀ ಯಾವುದೂ ಹೇಳಿಲ್ಲ. ಆವರು ತಮ್ಮ ಆರಾಧ್ಯ ದೇವರ ಹೆಸರನ್ನಾಗಲೀ ತಮ್ಮ ಗುರುಗಳ ಹೆಸರನ್ನಾಗಲೀ ಹೇಳಿದ್ದಾರೆಯೇ ಹೊರತು ಬೇರೆ ಏನೂ ಕುರುಹನ್ನು ಹೇಳಿಲ್ಲ. ಬಹುಶಃ ಆವರಿಗೆ ತಮ್ಮ ಹೆಸರಿನ, ತಂದೆತಾಯಂದಿರ ಊರಿನ ಹೆಸರು ಇತ್ಯಾದಿಗಳನ್ನು ಹೇಳುವ ಅವಶ್ಯಕತೆ ಇರಲಿಲ್ಲ ಎಂದು ಎನಿಸುತ್ತದೆ.

ಕವಿಯು ಪ್ರಾರಂಭದಲ್ಲಿ ಬ್ರಹ್ಮ ವಿಷ್ಣು ಮೊದಲಾದವರನ್ನು ಸ್ಮರಿಸಿದ್ದಾನೆ. ಎರಡನೆಯ ಪದ್ಯದಲ್ಲಿ ತನ್ನ ಗುರುವಾದ ನಿತ್ಯಾತ್ಮನನ್ನು ಸ್ಮರಿಸಿದ್ದಾನೆ. ಅನಂತರ ಗಣಪತಿ, ವಾಗ್ದೇವಿ, ಗೋಕರ್ಣದಮಹಾಬಲೇಶ್ವರ, ಲಕ್ಷ್ಮೀನರಸಿಂಹ, ಮೊದಲಾದ ದೇವರುಗಳನ್ನು ಸ್ಮರಿಸಿದ್ದಾನೆ. ನಂತರ ಚಿನ್ಮಯ ಮೂರ್ತಿಯಾದ ಶ್ರೀ ರಾಮಚಂದ್ರನನ್ನು ನಾನಾಪ್ರಕಾರವಾಗಿ ಸ್ತುತಿಸಿ ಆ ಮಹಾಮಹಿಮನ ಚರಿತ್ರೆಯನ್ನು ಹೇಳುತ್ತೇನೆ ಎಂದು ಹೇಳುತ್ತಾನೆ. ನಂತರ ಆದಿಗುರು, ಗಣನಾಥ, ಶಾರದೆ, ಬ್ರಹ್ಮ, ಈಶ್ವರ ದಿಕ್ಪಾಲಕರು ವೇದವಿದರಾದಂಥ ಶುಕ, ಸನಕ, ನಾರದ, ಬಾದರಾಯಣ, ಕಪಿಲ ಮೊದಲಾದಂಥ ಮಹಾಮಹಿಮರು (ಭಾಗವತೋತ್ತಮರು) ನನಗೆ ಸನ್ಮತಿಯನ್ನು ನೀಡಲಿ ಎಂದು ಕೇಳಿಕೊಳ್ಳುತ್ತಾನೆ. ನನಗೆ ಯಾವುದರ

ಪರಿಜ್ಞಾನವೂ ಇಲ್ಲ. ಎಲ್ಲವೂ ಆ ಶ್ರೀಗುರುವಿನ ಶ್ರೀರಾಮಚಂದ್ರನ ಕರುಣಾಕಟಾಕ್ಷ. ದೇವಿ ಜಗದಂಬೆಯ ಆಶೀರ್ವಾದ. ಇವೇ ನನ್ನ ರಕ್ಷೆ ಎಂದು ಹೇಳಿ ಕಾವ್ಯ ಪ್ರಾರಂಭಿಸುತ್ತಾನೆ. ಅಂತೂ ಹರೀತಕೀಪುರದ (ಹರೀಟಿಯ) ಈ ಕವಿ ಅಧ್ಯಾತ್ಮ ರಾಮಾಯಣವನ್ನು ಸುಲಭ ಭಾಮಿನೀ ಷಟ್ಪದಿಯಲ್ಲಿ ಕನ್ನಡಕ್ಕೆ ಪರಿವರ್ತಿಸಿ ಸಂಸ್ಕೃತ ತಿಳಿಯದ ಅಜ್ಞರಿಗೆ ಮಹೋಪಕಾರ ಮಾಡಿರುತ್ತಾನೆ. ಕವಿ ಬಹುಶಃ ೨೫೦ ವರ್ಷಗಳಿಗಿಂತಲೂ ಹಿಂದಿನವನಾಗಿರಬೇಕು.

## ತಾಳೆಗರಿ ಕೃತಿ ಪರಿಚಯ

ಈ ಗ್ರಂಥವನ್ನು ಒಂದೇ ಒಂದು ತಾಳೆಗರಿಯ ಸಹಾಯದಿಂದ ಸಿದ್ಧಪಡಿಸಲಾಗಿದೆ. ಬೇರೆಡೆಯಲ್ಲಿ ಹುಡುಕಿದರೂ ಇನ್ನೊಂದು ಪ್ರತಿ ಸಿಗಲಿಲ್ಲ. ಈ ಪ್ರತಿ ಶುದ್ಧ ಪ್ರತಿಯಾಗಿದೆ. ತಪ್ಪುಗಳು ತೀರ ಕಡಿಮೆ. ಒಂದೆರಡು ಕಡೆ ಗರಿಗಳು ಮುರಿದು ಹೋದುದರಿಂದ ಆ ಸ್ಥಳದಲ್ಲಿಯ ಶಬ್ದಗಳನ್ನು ತುಂಬಲು ಶಕ್ಯವಾಗದೇ ಹಾಗೆಯೇ ಬಿಡಲಾಗಿದೆ.

ಈ ಪ್ರತಿಯು ದೊರಕಿದ ಸ್ಥಳ ಕುಮಟಾ ತಾಲೂಕಿನ ಕಡೇಕೋಡಿಯ ದಿ| ವೆಂಕಪ್ಪ ಪರಮಯ್ಯ ಹೆಗಡೆಯವರ ಮನೆ. ಅವರ ಮಗ ಪರಮಯ್ಯನಿಂದ ದೊರಕಿತು. ವೆಂಕಪ್ಪ ಹೆಗಡೆಯವರು ಸ್ವತಃ ಕವಿಗಳಾಗಿದ್ದು ಹಲವಾರು ಗ್ರಂಥಗಳನ್ನು ಬರೆದಿದ್ದಾರೆ. ಕೆಲವು ಹಳೆಯ ಗ್ರಂಥಗಳನ್ನೂ ಸಂಪಾದಿಸಿ ಪ್ರಕಟಪಡಿಸಿದ್ದಾರೆ. ಯೋಗವಾಸಿಷ್ಠ, ತುರಂಗ ಭಾರತ, ಪರಶುರಾಮ ರಾಮಾಯಣ, ಶ್ರೀಗೀತೆ, ಹವ್ಯಕರ ಉತ್ಪತ್ತಿ ಇವೇ ಮೊದಲಾದ ಗ್ರಂಥಗಳು. ಅವರ ಮಕ್ಕಳು ಸಂತೋಷದಿಂದ ತಮ್ಮಲ್ಲಿಯ ಎಲ್ಲ ತಾಳೆಗರಿ ಗ್ರಂಥಗಳನ್ನು ಕೊಟ್ಟು ಸಹಕರಿಸಿದ್ದಾರೆ. ಇವರು ನಮ್ಮ ನಮ್ಮ ಕುಟುಂಬದವರೇ ಎಂದು ಹೇಳಲು ತುಂಬಾ ಅಭಿಮಾನವೆನಿಸುತ್ತದೆ.

ಈ ತಾಳೆಗರಿ ಪುಸ್ತಕದಲ್ಲಿ ಅಧ್ಯಾತ್ಮ ರಾಮಾಯಣವು ಪೂರ್ಣವಾಗಿರುವದಲ್ಲದೇ ಉತ್ತರ ರಾಮಾಯಣವೂ ಸಹ ಇದೆ. ತಾಳೆಗರಿ ಪುಸ್ತಕವು

೧೬ ಇಂಚು ಉದ್ದವಾಗಿದ್ದು ಎರಡುವರೆ ಇಂಚು ಅಗಲವಾಗಿದೆ. ಪ್ರತಿಯೊಂದು ಹಾಳೆಯು ಎರಡೂ ಮಗ್ಗಲು ಬರೆಯಲಾಗಿದೆ. ಪ್ರತಿಯೊಂದು ಬದಿಗೂ ಎಂಟೆಂಟು ಸಾಲುಗಳಿವೆ. ತಾಳೆಗರಿ ಪುಸ್ತಕದ ಪ್ರಾರಂಭದಲ್ಲಿ ಈ ರೀತಿ ಬರೆಯಲಾಗಿದೆ.

"ಸ್ವಸ್ತಿ ಶ್ರೀ ಗುರುಗಣೇಶಾಯನಮಃ । ನಿರ್ವಿಘ್ನಮಸ್ತು । ಶ್ರೀ ವೇದವ್ಯಾಸಾಯ ನಮಃ ।" ಮುಂದೆ ರಾಮಾಯಣ ಪ್ರಾರಂಭ- ಶ್ರೀ ವರನು ಶಾಶ್ವತನಖಿಳ ವೇ । .... .... .... ...."

ಕೊನೆಯಲ್ಲಿ ಈ ರೀತಿ ಬರೆಯಲಾಗಿದೆ — "ಶುಭಾನು ಸಂವತ್ಸರದ ಶ್ರಾವಣ ಶುಕ್ಲ ೮ ರಲ್ಲು ಬರೆದು ಮುಗಿಸಿದಾತ ಗು । ವೆಂ । ಕೃಷ್ಣ । ಬರ । ಅಧ್ಯಾತ್ಮ ಪುಸ್ತಕಾ ॥ ಅಪದ್ಧಂ ವಾ ಸುಪದ್ಧಂ ವಾ ಮಮ ದೋಷೋನ ವಿದ್ಯತೇ ಕ್ಷಮಸ್ವ ಪುರುಷೋತ್ತಮ ॥"

ಉತ್ತರ ಕಾಂಡದ ಪ್ರಾರಂಭದಲ್ಲಿ ಈ ರೀತಿ ಇದೆ.

"ಸ್ವಸ್ತಿ । ಶ್ರೀ ಗಣೇಶಾಯ ನಮಃ ॥" ಮುಂದೆ ಉತ್ತರಕಾಂಡ ಪ್ರಾರಂಭ- "ಶ್ರೀಮತು ಶ್ರೀ ಮಂಗಲಾತ್ಮಕ । ಶ್ರೀ ಮಹಾದೇವೇಶ ಗೌರಿಗೆ । ........"

ಕೊನೆಯಲ್ಲಿ ಈ ರೀತಿ ಇದೆ — "ಶ್ರೀ ರಾಮಾಯ ನಮಃ । ಶುಭಂ ಭವತು । ಉತ್ತರ ಕಾಂಡ ಸಪೂರ್ಣಂ ॥ ವಿಸರ್ಗ ಬಿಂದು ಮಾತ್ರಾಣಿ ಪದ ಪಾದಾಕ್ಷರಾಣಿ ಚ । ನ್ಯೂನಾನಿ ಚಾತಿರಿಕ್ತಾನಿ ಕ್ಷಮಸ್ವ ಪುರುಷೋತ್ತಮ ॥ ಮಂಗಳಾನಿ ಭವಂತು ॥"

ಮೇಲಿನ ಹೇಳಿಕೆಯ ಪ್ರಕಾರ ಈ ಪುಸ್ತಕವು ೧೭೯೦ ನೇ ಇಸ್ವಿಯಲ್ಲಿ ಬರೆದಂತೆ ತಿಳಿದುಬರುತ್ತದೆ. ಬಹುಶಃ ಇದು ಲಿಪಿಕಾರನು ಬರೆದ ವರ್ಷವಾಗಿರಬೇಕು. ಆಧುದರಿಂದ ಕವಿಯ ಕಾಲ ಇದಕ್ಕಿಂತಲೂ ಸುಮಾರು ಒಂದು ನೂರು ವರ್ಷ ಹಿಂದಕ್ಕಿರಬಹುದು ಎಂದು ಊಹಿಸಬೇಕಾಗುತ್ತದೆ.



# ಅಧ್ಯಾತ್ಮ ರಾಮಾಯಣದ ಸಾರ

## ಬಾಲಕಾಂಡ

ಈ ಅಧ್ಯಾತ್ಮ ರಾಮಾಯಣವನ್ನೂ ಅದರ ಮಹಿಮೆಯನ್ನೂ ಮಹೇಶ್ವರನು ತನ್ನ ಅರ್ಧಾಂಗಿಯಾದ ಪಾರ್ವತಿಗೆ ವಿವರಿಸಿ ಹೇಳುತ್ತಾನೆ. ಈ ರಾಮಾಯಣ ಅತ್ಯಂತ ಗುಪಿತವೂ ಮಹತ್ವಪೂರ್ಣವೂ ಆದ ಗ್ರಂಥ. ಯಾರು ಇದನ್ನು ಹೇಳುತ್ತಾರೋ ಕೇಳುತ್ತಾರೋ, ಶ್ರವಣ ಮಾಡುತ್ತಾರೋ ಅವರಿಗೆ ಕ್ಷಿಪ್ರದಲ್ಲಿಯೇ ಮೋಕ್ಷಪ್ರಾಪ್ತಿಯಾಗುತ್ತದೆ. ಎಂಬ ವಿವರವನ್ನು ತಿಳಿಸಿ ಈ ರಾಮಾಯಣದ ಕಥೆಯನ್ನು ಪಾರ್ವತಿಗೆ ಹೇಳಲು ತೊಡಗುತ್ತಾನೆ.

ಕವಿಯು ಪ್ರಾರಂಭದಲ್ಲಿ ಬ್ರಹ್ಮ ಮೊದಲಾದ ದೇವರನ್ನು ಸ್ಮರಿಸುತ್ತಾನೆ. ನಂತರ ತನ್ನ ಆರಾಧ್ಯಗುರುವನ್ನೂ, ಗಣಪತಿ, ವಾಗ್ದೇವಿ, ಮಹಾಬಲ, ಆರಾಧ್ಯ ದೇವರಾದ ಲಕ್ಷ್ಮೀ ನೃಸಿಂಹ ಅನಂತರ ಭೂಮಿ ಭಾರವನ್ನು ಇಳುಹಲು, ಗೋದ್ವಿಜ ಮೊದಲಾದವರ ರಕ್ಷಣಾರ್ಥವಾಗಿ ಬಂದ, ಆ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಮೋಹ ಮಾಯಾದಿಗಳಿಂದ ವಿದೂರನಾದ ಆ ಪರಾತ್ಪರ ಮಹಿಮನಾದ ಶ್ರೀ ರಾಮನನ್ನು ಭಜಿಸುತ್ತಾನೆ. ಆಮೇಲೆ ತನ್ನ ಗುರು ಗಣಪತಿ, ಶಾರದೆ ಮೊದಲಾದ ದೇವರುಗಳಿಗೆ ಮತ್ತೊಮ್ಮೆ ವಂದಿಸಿ ಭಾಗವತೋತ್ತಮರಾದ ಶುಕ, ಸನಕ, ನಾರದ, ಬಾದರಾಯಣ, ಕಪಿಲ ಮೊದಲಾದವರನ್ನು ಸ್ಮರಿಸುತ್ತಾನೆ.

ಈ ಶ್ರೀ ರಾಮಚಂದ್ರನ ಚರಿತ್ರೆ ಅತ್ಯಂತ ಪವಿತ್ರತಮವಾದುದು. ವೇದಶಾಸ್ತ್ರ ಪುರಾಣ ಸಂಹಿತೆಗಳಿಗಿಂತಲೂ ಮಿಗಿಲಾದುದು ಚಿತ್ತಾತ್ಮ ಸ್ವರೂಪವನ್ನು ತಿಳಿಸುವಂಥಾದ್ದು. ನೀರು ಚಲಿಸುವಿಕೆ, ಬೊಂಬೆ ಕುಣಿಯುವದು, ಕಹಳೆ ಸ್ವರ ಹೊರಡಿಸುವದು ಮುಂತಾದವುಗಳೆಲ್ಲವೂ ಆ ಪರಾತ್ಪರನಾದ ರಾಮನ ಅಧೀನವೇ ಹೊರತು ಅವಕ್ಕೆ ಸ್ವತಂತ್ರವಿಲ್ಲ. ಶರಧಿಯಲ್ಲಿಯ ರತ್ನಗಳೆಲ್ಲವನ್ನೂ ತರಲು ಸಾಧ್ಯವಾಗದೇ ಇದ್ದರೂ ಸಿಕ್ಕಿದಷ್ಟರಿಂದಲೇ ತೃಪ್ತಿ ದೊರಕುವದಿಲ್ಲವೇ ! ಮೂಕನಿಗೆ ಮಾತನಾಡಲು ಸಾಧ್ಯವಿಲ್ಲ. ಹೇಳವ

ನಡೆಯಲಾರ. ಅವರನ್ನು ಹೆಡ್ಡರಿಂದು ಕರೆದ ಮಾತ್ರಕ್ಕೆ ಏನೂ ಫಲವಿಲ್ಲ. ನನ್ನ ಎಲ್ಲ ದೋಷಗಳನ್ನು ಎಣಿಸದೇ ಲೇಶನ್ನೇ ಎಣಿಸಿ ನನ್ನನ್ನು ಪಾಲಿಸಬೇಕು. ನಾನು ಹೇಳುವದನ್ನು ಕೇಳಬೇಕು. ಎಂದು ಮಹಾ ಜನರಲ್ಲಿ ವಿನಯ ಪೂರ್ವಕವಾಗಿ ವಿನಂತಿಸಿ ಕೊಳ್ಳುತ್ತಾನೆ.

ಒಂದು ದಿನ ಶಿವ ಪಾರ್ವತಿಯರು ಕೈಲಾಸದಲ್ಲಿ ವಿಹರಿಸುತ್ತಿರುವಾಗ ಪಾರ್ವತಿಯು ಶಿವನಲ್ಲಿ ಕೇಳುತ್ತಾಳೆ :- ಪ್ರಾಣವಲ್ಲಭನೇ ! ಅಧ್ಯಾತ್ಮ ರಾಮಾಯಣದಲ್ಲಿಯ ಆ ಪರಾತ್ಪರ ಪುರುಷನಾದ ಶ್ರೀ ರಾಮಚಂದ್ರನ ಮಹಾಮಹಿಮೆಯನ್ನು ನನಗೆ ವಿಸ್ತಾರವಾಗಿ ವಿವರಿಸಬೇಕು. ಆಗ ಈಶ್ವರನು ಹೇಳಿದ್ದೇನೆಂದರೆ — ಪ್ರಾಣಕಾಂತೆಯೇ ಈ ಮಹಿಮೆಯು ಅತ್ಯಂತ ಗೌಪ್ಯವಾದದ್ದು. ಭಕ್ತರಿಗೆ ಭಕ್ತಿರಸ ನೀಡುವಂಥಾದ್ದು. ವಿರತರಿಗೆ ವಿಷಯ ವಾಸನೆಯನ್ನು ಹೋಗಲಾಡಿಸುವಂಥಾದ್ದು. ಕರ್ಮಾಸಕ್ತರಿಗೆ ಸನ್ಮಾರ್ಗವನ್ನು ತೋರಿಸುವಂಥಾದ್ದು. ಇದು ಮುನಿಗಳಿಗೆ ಹೇಳಿದಂಥಾ ತಪಸ್ಸಾಗಿದೆ. ಮರ್ತ್ಯರಿಗೆ ಮುಕ್ತಿಯನ್ನು ಕರುಣಿಸುವಂಥಾದ್ದು. ಆದುದರಿಂದ ಆ ರಾಮ ನಾಮ ಮಹಿಮೆಯು ಅಗಾಧವಾದದ್ದು. ಇದನ್ನು ಮರಣಕಾಲದಲ್ಲಿ ಕಿವಿಯಲ್ಲಿ ಹೇಳಿದ್ದಾದರೆ ಮುಕ್ತಿ ದೊರಕುವದು. ಕಾರಣ ಈ ಈಶ್ವರನೇ ಸದಾಕಾಲ ಇದನ್ನು ಜಪಿಸುತ್ತಿರುತ್ತಾನೆ. ಇದನ್ನು ಇನ್ನೂ ತನಕ ನಾನೂ ಯಾರಿಗೂ ಹೇಳಿಲ್ಲ. ಸಕಲ ಜನೋಪಕಾರಿಯಾದ ಈ ತತ್ವವನ್ನು ತಿಳಿಯಲು ನೀನು ಕೇಳಿದುದು ಅತ್ಯಂತ ಶ್ಲಾಘನೀಯವಾಗಿದೆ. ರಾಮನು ಸಾಕ್ಷಾತ್ ಪರಮ ಪುರುಷನು. ಚಿನ್ಮಯನು. ಮಾಯೆಯನ್ನು ದೂರಮಾಡಿದವನು. ಈತನು ಮೋಕ್ಷಕ್ಕೆ ಸಾಧನವಾದವನು. ವಸಿಷ್ಠರೇ ಮೊದಲಾದ ಮಹಾ ಮಹಾ ಮಹರ್ಷಿಗಳು ಈತನನ್ನು ಸ್ತುತಿಸುತ್ತಿದ್ದಾರೆ. ಸಿರಿ ರಾಮನ ಅಂಗಾಂಗಗಳ ವರ್ಣನೆಯೂ ಅತಿ ಮನೋಹರವಾದುದು. ತನ್ನ ಪರಮ ಭಕ್ತನಾದ ಅಂಜನೇಯನಿಗೆ ಆತ್ಮಜ್ಞಾನವನ್ನು ಕರುಣಿಸಿದ್ದಾನೆ. ಶ್ರೀ ರಾಮನು ನಿರ್ವಿಷಯಿ. ಸದ್ಗುಣಗಳ ಖಣಿ. ಆತನ ಮಹಿಮೆಯನ್ನು ಸಾದ್ಯಂತವಾಗಿ ಕೇಳುವವಳಾಗು ಎಂದು ಮಹೇಶನು ಪಾರ್ವತಿಗೆ ಹೇಳಿದನೆಂಬಲ್ಲಿಗೆ ಮೊದಲನೆಯ ಸಂಧಿಯು ಮುಕ್ತಾಯಗೊಳ್ಳುತ್ತದೆ.

ಎರಡನೆಯ ಸಂಧಿ : – ಈ ಸಂಧಿಯಲ್ಲಿ ಹನುಮಂತನಿಗೆ ಶ್ರೀರಾಮ ಮಹಿಮೆಯನ್ನು ಹೇಳುತ್ತಿರುವ ಸಂದರ್ಭದಲ್ಲಿ ಶ್ರೀ ರಾಮನೇ ತನ್ನ ನಿಜ ತತ್ವವನ್ನು ಹನುಮನಿಗೆ ತಿಳಿಸುತ್ತಾನೆ. ಶಿವನು ಗಿರಿಜೆಗೆ ಆ ವಿಷಯವನ್ನು ತಿಳಿಸುತ್ತಾನೆ.

ಶ್ರೀ ರಾಮಚಂದ್ರನು ಸೀತಾದೇವಿಯನ್ನು ಕರೆದು ತನ್ನ ನಿಜ ತತ್ವವನ್ನು ಹನುಮಂತನಿಗೆ ತಿಳಿಸುವಂತೆ ಹೇಳುತ್ತಾನೆ. ಸೀತೆಯು ಆ ಜಗನ್ಮಯನಾದ, ಚಿನ್ಮಯ ಮೂರ್ತಿಯಾದ ಶ್ರೀ ರಾಮಚಂದ್ರನ ನಿಜ ಸ್ವರೂಪವನ್ನು ಮಾರುತಿಗೆ ತಿಳಿಸುವಂಥವಳಾಗುತ್ತಾಳೆ. ಶ್ರೀ ರಾಮಚಂದ್ರನು ಆತ್ಮ ಸ್ವರೂಪನು, ಜ್ಞಾನಮಯನು, ನಿರ್ವಿಕಾರನು, ನಿರ್ಮಲಸ್ವರೂಪನು ಮಾಯಾ ರಹಿತನು, ಸರ್ವವ್ಯಾಪಿಯೂ ಆಗಿದ್ದು, ಮೂಲ ಪ್ರಕೃತಿ ಸ್ವರೂಪ ನಾಗಿದ್ದು ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾಗಿದ್ದಾನೆ. ಆತನೇ ರಘುಕುಲ ದಲ್ಲಿ ಶ್ರೀ ರಾಮಚಂದ್ರನಾಗಿ ಜನಿಸಿ ವಿಶ್ವಾಮಿತ್ರನ ಯಜ್ಞ ರಕ್ಷಣೆ ಮಾಡಿದ. ಲೋಕಕಂಟಕಳಾದ ತಾಟಕಿಯನ್ನು ಸಂಹರಿಸಿದ, ಪತಿವ್ರತೆಯಾದ ಅಹಲ್ಯೆಯ ಶಾಪ ವಿಮೋಚನೆ ಮಾಡಿದ. ಜನಕ ರಾಜನ ಸಭೆಗೆ ಹೋಗಿ ಶಿವಧನುಸ್ಸನ್ನು ಮುರಿದು ಸೀತೆಯನ್ನು ಮದುವೆಯಾದ, ಪರಶುಧರನಾದ ಆ ಭಾರ್ಗವನ ಆಟೋಪವನ್ನು ನಿಲ್ಲಿಸಿದ. ತಂದೆಯ ವಚನವನ್ನು ಸಲ್ಲಿಸುವದಕ್ಕಾಗಿ ಅಡವಿಗೆ ಹೋದಾಗ ಖರ, ದೂಷಣ, ತ್ರಿಶಿರ ಇವರೇ ಮೊದಲಾದ ಮಹಾರಾಕ್ಷಸರನ್ನು ಸಂಹರಿಸಿದ. ಆ ಸಂದರ್ಭದಲ್ಲಿ ರಾವಣ ಮಾಯಾ ಸೀತೆಯನ್ನು ಅಪಹರಿಸಿದ. ಸೀತೆಯನ್ನು ಹುಡುಕುತ್ತಿರುವಾಗ ಜಟಾಯುವಿಗೆ ಮೋಕ್ಷ ಕರುಣಿಸಿ, ಕಬಂಧನನ್ನು ಸಂಹರಿಸಿ ಶಬರಿಯನ್ನು ಅನುಗ್ರಹಿಸಿ ಸುಗ್ರೀವನ ಗೆಳೆತನವನ್ನು ಮಾಡಿ ವಾಲಿಯನ್ನು ಕೊಂದ. ಸೀತಾನ್ವೇಷಣದ ನೆವದಲ್ಲಿ ಶರಧಿಗೆ ಸೇತುವನ್ನೂ ಕಟ್ಟಿ ರಾವಣನ ಕುಲವನ್ನು ಸಂಹರಿಸಿ ವಿಭೀಷಣನಿಗೆ ರಾಜ್ಯವನ್ನಿತ್ತು ಅಯೋಧ್ಯೆಗೆ ಬಂದು ಭರತನಿಂದ ರಾಜ್ಯ ಸ್ವೀಕರಿಸಿ ಧರ್ಮದಂತೆ ರಾಜ್ಯ ಕಾರಭಾರ ನಡೆಸಿದ. ಹೀಗೆ ಹಲವಾರು ಸದ್ಗುಣಗಳಿಗೆ ಆಶ್ರಯದಾತನಾದ ಶ್ರೀ ರಾಮಚಂದ್ರ ಸಕಲರಿಗೂ ಚೇತನ ಸ್ವರೂಪನಾಗಿದ್ದಾನೆ. ಹೀಗೆ ರಾಮನ ಸಕಲ ವಿಷಯಗಳನ್ನು ಹನುಮನಿಗೆ ತಿಳಿಸಿದಳು. ನಂತರ ಶ್ರೀ ರಾಮನು ಅವನನ್ನು ಕರೆದು ಆತ್ಮತತ್ವವನ್ನು

ಚೆನ್ನಾಗಿ ತಿಳಿದುಕೋ. ಆತ್ಮವು ಮೂರು ಬಗೆ. ಆತ್ಮ, ಅಂತರಾತ್ಮ, ಪರಮಾತ್ಮ ಎಂಬಿವು. ಮಹದಾಕಾಶದ ಜಲದಲ್ಲಿ ಪ್ರತಿಬಿಂಬವು ತೋರು-ವಂತೆ ಆ ಪರಬ್ರಹ್ಮವು ತೋರುವದು. ಲೋಕವೇ ಪ್ರತಿಬಿಂಬವೆನಿಸುವದು. ಕನಸು ಆಭಾಸವಾಗಿರುವದು. ರಾಮನು ಇದಕ್ಕೆ ಹಲವಾರು ಉದಾಹರಣೆಗಳನ್ನು ಕೊಡುತ್ತಾನೆ. ಬಿಂಬ, ಪ್ರತಿಬಿಂಬ, ಗಗನ ಕಲ್ಪನೆ, ವಿದ್ಯೆ-ಅವಿದ್ಯೆ, ಲಕ್ಷ್ಯ - ನಿರ್ಲಕ್ಷ್ಯ ಮೊದಲಾದವುಗಳ ಮೂಲಕ "ತತ್ವಮಸಿ" ಯ ಅರ್ಥವನ್ನು ವಿವರಿಸಿ ತಿಳಿಸುವನು. ಭಕ್ತಿಯಿಲ್ಲದವರು ಅಹಂಕಾರದಲ್ಲಿ ಬಿದ್ದು ತಾನೇ ಎಲ್ಲವೂ ಎಂದು ಹೇಳುವರು. ಹಮ್ಮಿನ ಭಾವವನ್ನು ಬಿಟ್ಟು ಭಕ್ತಿಯಿಂದ ತನ್ನನ್ನು (ಆತ್ಮಸ್ವರೂಪ) ಭಜಿಸಿದರೆ ನಿಜ ಸ್ವರೂಪವನ್ನು ಪಡೆಯಲು ಶಕ್ಯ. ಇದು ಗೌಪ್ಯದಲ್ಲಿ ಅತಿಗೌಪ್ಯ. ಯಾವುದೇ ತರದ ಪಾಪಗಳನ್ನು ಮಾಡಿದ್ದರೂ ಅದನ್ನು ನಿವಾರಿಸುವದು ರಾಮನಾಮ. ಸಕಲ ಕುಲಕೋಟಿಗಳ ಪಾಪವೆಲ್ಲ ರಾಮನಾಮ ಜಪದಿಂದ ನಾಶವಾಗಿ ಹೋಗಿ ಜನ್ಮ ಪಾವನವಾಗುತ್ತದೆ. ರಾಮನಾಮ ಸ್ಮರಣೆಯೇ ಸಕಲರಿಗೂ ಕಾಮಧೇನು, ಕಲ್ಪವೃಕ್ಷ ಎಂದು ಹೇಳಿದನೆಂಬಲ್ಲಿಗೆ ಎರಡನೆಯ ಸಂಧಿ ಮುಗಿಯುತ್ತದೆ.

**ಮೂರನೆಯ ಸಂಧಿ:-** ಪಾರ್ವತಿಯು ಹೇಳುತ್ತಾಳೆ.-ಪರಮೇಶ್ವರನೇ ಆ ರಾಮನಾಮ ಸಂಕೀರ್ತನದ ಕಥೆಯನ್ನು ಸಂಕ್ಷಿಪ್ತದಲ್ಲಿ ಕೇಳಿದೆನು. ಬಹಳ ಸಮಾಧಾನ ಹೊಂದಿದೆನು. ನನ್ನ ಮನಸ್ಸಿನಲ್ಲಿರುವ ಶಙ್ಕಲಗಳೆಲ್ಲವೂ, ಸಂಶಯಗಳೂ ದೂರವಾದವು. ಆದರೆ ಆ ರಾಮನಾಮ ಮಹಿಮೆಯನ್ನು ಇನ್ನೂ ಕೇಳಬೇಕು ಮತ್ತೂ ಕೇಳಬೇಕು ಎಂದು ಆಶೆಯಾಗುತ್ತದೆ. ಆದ್ದರಿಂದ ಆ ಕಥೆಯನ್ನೇ ಸವಿಸ್ತಾರವಾಗಿ ವರ್ಣಿಸಿ ನನಗೆ ಹೇಳಬೇಕು ಎಂದು ಕೇಳಿಕೊಂಡಳು. ಹಾಗಾದರೆ ಎಲೈ ಗಿರಿಜೆಯೇ ಗೌಪ್ಯದಲ್ಲಿ ಅತಿ ಗೌಪ್ಯವಾದ, ರಹಸ್ಯಕರವಾದ, ಆ ಶ್ರೀರಾಮಚಂದ್ರನೇ ನನಗೆ ಹೇಳಿದಂಥಾ ಆ ಅಧ್ಯಾತ್ಮ ರಾಮಾಯಣದ ಕಥೆಯನ್ನು ನಿನಗೆ ಸವಿಸ್ತಾರವಾಗಿ ಹೇಳುತ್ತೇನೆ ಕೇಳುವಂಥವಳಾಗು.

ಹಿಂದೆ ರಾವಣ ಕುಂಭಕರ್ಣ ಇವರೇ ಮೊದಲಾದ ಘುಹಾ ಮಹಾ ರಾಕ್ಷಸರ ಭಾರದಿಂದ ಭೂದೇವಿ ಬೆಂದು ಬಸವಳಿದು ಬೆಂಡಾಗಿ ಭೂಭಾರ ಹರಣಕ್ಕಾಗಿ ಆ ಬ್ರಹ್ಮದೇವನಲ್ಲಿ ಮೊರೆಯಿಡುತ್ತಾಳೆ. ಆಕೆಯ ಮೊರೆಯನ್ನು ಕೇಳಿದ ಬ್ರಹ್ಮನು ಎರಡು ಗಳಿಗೆ ಯೋಚಿಸಿ ಮುಂದಿನ ಕಾರ್ಯದ ರೂಪ ರೇಷೆಯನ್ನು ಚಿಂತಿಸಿ ವಿಷಯವನ್ನು ವಿವೇಚಿಸಲೋಸುಗ ಕ್ಷೀರಸಾಗರ ಶಯನನಾದ ಆ ಮುರವೈರಿಯಿದ್ದಲ್ಲಿ ದೇವಗಣ, ಭೂದೇವಿ ಸಹಿತ ಹೊರಟ. ಆ ಮುರವೈರಿಯನ್ನು ಅನೇಕ ವಿಧದಿಂದ ಸ್ತುತಿಸಿದ. ಆತನ ಸ್ತುತಿಗೆ ಮುರವೈರಿ ಪ್ರತ್ಯಕ್ಷನಾದ. ಆತ ಅತ್ಯಂತ ಪ್ರಭಾಯುಕ್ತನಾಗಿದ್ದ. ಮಂದ-ಹಾಸದಿಂದ ಕೂಡಿದ ಮುಖಕಮಲ, ಕುಂದ ಕಟ್ಮಲದಂತಹ ದಂತಪಂಕ್ತಿ, ಹೊಳೆವ ಕಣ್ಣು, ಉತ್ತಮೋತ್ತಮವಾದ ಅಭರಣಗಳನ್ನೂ ಧರಿಸಿದ ಆ ಪರಮಾತ್ಮ ಮೈದೋರಿದ. ವೀರಮುದ್ರಿಕೆ ಧರಿಸಿದ್ದ. ನಾಲ್ಕು ಕೈಗಳಲ್ಲೂ ಶಂಖ ಚಕ್ರ ಗದಾಯುಧಗಳನ್ನು ಧರಿಸಿದ್ದ. ಈ ರೀತಿಯಾಗಿ ಮೈದೋರಿದ ಆತನ ಹೊಗಳಿಕೆಯನ್ನು ನಾನಾರೀತಿಯಲ್ಲಿ ಮಾಡಿದ. ಆತನನ್ನು ನೋಡಿದ ದೇವಾಧಿದೇವತೆಗಳೆಲ್ಲರೂ ಪುನಃ ಪುನಃ ಅತನನ್ನು ವಿವಿಧ ಬಗೆಯಿಂದ ಸ್ತೋತ್ರ ಮಾಡಿದರು. ನಿನ್ನ ಧ್ಯಾನದಿಂದಲೇ ಸಕಲರಿಗೆ ಭಕ್ತಿ ಮತ್ತು ಮುಕ್ತಿ. ನೀನೇ ಸಕಲ ಜನರಿಗೆ ಆಶಾದಾಯಕ. ನಿನ್ನ ಭಕ್ತರಿಗಂತೂ ನಿನ್ನ ಪಾದಕಮಲವೇ ಗತಿ. ಹೀಗೆ ನಾನಾ ಪ್ರಕಾರವಾಗಿ ಹೇಳುತ್ತ ನಮಸ್ಕರಿ-ಸಿದರು. ಅವರ ನಮಸ್ಕಾರಗಳನ್ನು ಸ್ವೀಕರಿಸಿದ ಆ ಮುರಿವೈರಿಯು ನೀವು ಬಂದ ಕಾರಣವೇನು ? ಹೇಳಿರಿ ಎಂದು ಬೆಸಗೊಂಡನು. ಆಗ ಬ್ರಹ್ಮನು ಹೇಳಿದ್ದೇನೆಂದರೆ – ಪೌಲಸ್ತ್ಯ ವಂಶಜನಾದ ರಾವಣನು ನನ್ನ ವರದ ಬಲದಿಂದ ಸಕಲರನ್ನೂ ಪೀಡಿಸುತ್ತಿದ್ದಾನೆ. ಆತನಿಗೆ ಮಾನವನಿಂದಲೇ ಮರಣ ಎಂಬ ವರವನ್ನು ನೀಡಿದ್ದೇನೆ. ಕಾರಣ ಆತನಿಗೆ ಮತ್ತಾರಿಂದಲೂ ಮರಣವಿಲ್ಲ. ಆದ್ದರಿಂದ ನೀನು ಮಾನವ ಕುಲದಲ್ಲಿ ಜನಿಸಿ ಲೋಕ ಕಂಟಕ ನಾದ ಆ ರಾವಣನನ್ನು ವಧಿಸಿ ಜನರಿಗೆ ಉಪಕಾರ ಮಾಡಬೇಕು ಇದೇ ನಮ್ಮೆಲ್ಲರ ಬೇಡಿಕೆ.

ಅದನ್ನು ಸಾದ್ಯಂತವಾಗಿ ಕೇಳಿದ ಮಹಾವಿಷ್ಣುವು ಹೇಳಿದ್ದೇನೆಂದರೆ– ನಿಮ್ಮ ಹೇಳಿಕೆಯನ್ನು ನಾನು ಗಮನಿಸಿದ್ದೇನೆ. ನಾನು ಸೂರ್ಯವಂಶದಲ್ಲಿಯ

ದಶರಥರಾಜನ ಮಗನಾಗಿ ಕೌಸಲ್ಯೆಯಲ್ಲಿ ರಾಮನಾಭಿಧಾನದಿಂದ ಜನಿಸುವೆ. ಯೋಗಮಾಯೆಯೇ ಸೀತೆಯಾಗಿ ಜನಕ ಮಹಾರಾಜನಲ್ಲಿ ಜನಿಸುವಳು. ಮುಂದಿನ ಕಾರ್ಯ ವಿಧಾನಗಳನ್ನೆಲ್ಲ ನಾನು ಪೂರಯಿಸುತ್ತೇನೆ ಎಂದು ಹೇಳಿ ಅಭಯವನ್ನಿತ್ತು ಅಂತರ್ಧಾನನಾದನು.

ಬ್ರಹ್ಮನು ತನ್ನ ಸಂಗಡ ಬಂದ ದೇವಾಧಿದೇವತೆಗಳಿಗೆ ಹೇಳಿದ್ದೇನೆಂದರೆ— ಶ್ರೀ ಹರಿಯ ಮಾತನ್ನೆಲ್ಲ ನೀವು ಕೇಳಿದ್ದೀರಿ. ಅವನಿಗೆ ಸಹಾಯಕರಾಗಲು ನೀವೆಲ್ಲರೂ ಭೂತಳದಲ್ಲಿ ಕಪಿಗಳಾಗಿ ಜನಿಸಿರಿ. ಎಂದು ಆದೇಶಿಸಿದನು. ಬ್ರಹ್ಮನೆಂದಂತೆ ದೇವತೆಗಳೆಲ್ಲ ತಮ್ಮಂಶದಿಂದ ಕಪಿಗಳಾಗಿ ಜನಿಸಿ ಪರ್ವತಾಗ್ರದಲ್ಲಿದ್ದು ಆ ಶ್ರೀರಾಮಚಂದ್ರನ ಬರವನ್ನೇ ಹಾರೈಸುತ್ತಿದ್ದರು. ಇತ್ತ ಅಯೋಧ್ಯೆಯ ರಾಜನಾದ ದಶರಥನು ಬಹುಕಾಲ ಮಕ್ಕಳಿಲ್ಲದೇ ಚಿಂತಿಸುತ್ತಿರಲು, ವಸಿಷ್ಠ ಋಷಿಯ ಆದೇಶದಂತೆ ಋಷ್ಯಶೃಂಗನನ್ನು ಕರೆಸಿ ಪುತ್ರಕಾಮೇಷ್ಟಿಯನ್ನು ಮಾಡಿಸಿದನು. ಆ ಯಜ್ಞದ ಫಲವಾಗಿ ದಶರಥನ ಮೂವರೂ ಪತ್ನಿಯರು ಗರ್ಭ ಧರಿಸಿದರು. ಸಕಲ ಲೋಕೋದ್ಧಾರಕನಾದ ಆ ಪರಮಾತ್ಮನು ಕೌಸಲ್ಯೆಯ ಗರ್ಭದಲ್ಲಿ ಪ್ರಕೃತಿರೂಪವನ್ನು ಧರಿಸಿ ಶೋಭಿಸುತ್ತಿದನು ಎಂಬಲ್ಲಿಗೆ ಮೂರನೆಯ ಸಂಧಿ ಮುಗಿಯುತ್ತದೆ.

ನಾಲ್ಕನೆಯ ಸಂಧಿ :- ಎಲೈ ಗಿರಿರಾಜಸುತೆಯೇ ಮುಂದಿನ ಕಥೆಯನ್ನು ಕೇಳುವಂಥವಳಾಗು.

ಈ ರೀತಿಯಾಗಿ ಗರ್ಭ ಧರಿಸಿದ ದಶರಥರಾಜನ ಹೆಂಡಂದಿರು ಸುಜ್ಯೋತಿಯಂತೆ ಬೆಳಗುತ್ತಿದ್ದರು. ಇಡೀ ರಾಜ್ಯಕ್ಕೆ ರಾಜ್ಯವೇ ಪರಮಾನಂದದಲ್ಲಿ ಮುಳುಗಿತು. ಹತ್ತು ತಿಂಗಳು ಕಳೆಯಲು ಕೌಸಲ್ಯೆಯು ಪುತ್ರರತ್ನವನ್ನು ಹಡೆದಳು. ಆ ಸಮಯದಲ್ಲಿ ದಿವಿಜರು ಹೂಮಳೆಗರೆದರು. ರಾಮನು ಜನಿಸಿದುದು ವಸಂತ ಋತುವಿನ ಚೈತ್ರಮಾಸದ ಶುಕ್ಲಪಕ್ಷದ ಪುಣ್ಯತಮವಾದ ನವಮೀ ತಿಥಿಯಾಗಿತ್ತು. ಯಾವವನು ಆದಿನ ಉಪವಾಸ ಮಾಡಿ ಪೂಜಾದಿಗಳಿಂದ ರಾಮನ ಚಿಂತನೆಯಲ್ಲಿಯೇ ವೇಳೆ ಕಳೆಯುತ್ತಾರೆಯೋ ಅವರ ಇಷ್ಟಾರ್ಥ ಸಿದ್ಧಿಯಾಗುತ್ತದೆ.

ಆ ಶ್ರೀರಾಮಚಂದ್ರನ ಸೊಬಗನ್ನು ಏನೆಂತ ವರ್ಣಿಸಲಿ ! ನೀಲ ಕಾಂತಿಯಿಂದ ಒಪ್ಪುವವನಾಗಿದ್ದಾನೆ. ಉತ್ತಮವಾದ ಕಿರೀಟ ಧರಿಸಿದ್ದಾನೆ. ಕೋಮಲಾಧರ, ಕುಂದ ಕುಟ್ಮಲದಂತಹ ದಂತಪಂಕ್ತಿ ರತ್ನ ಕುಂಡಲ ಮೊದಲಾದವುಗಳಿಂದ ಶೋಭಿತನಾಗಿ ರಂಜಿಸಿದ, ಕೌಸ್ತುಭಾಭರಣದಿಂದ ಕೂಡಿದ, ತುಳಸಿಮಾಲೆ ಧರಿಸಿದ, ಪೀತಾಂಬರಧಾರಿಯಾದ ಆ ಪರಾತ್ಪರ ಪರಮಾತ್ಮನ ದಿವ್ಯ ರೂಪವನ್ನು ದೇವಿ ಕೌಸಲ್ಯೆಯು ಕಂಡಳು. ಆ ಪರಮಾತ್ಮನನ್ನು ಆಕೆ ಸ್ತುತಿಸುತ್ತಾಳೆ-ಪುರಾಣಪುರುಷನೆ ಅಚ್ಯುತಾನಂತನೆ. ಸತ್ಯಗುಣ ಸಂಪನ್ನನೆ, ನೀನು ವಾಙ್ಮತಿಗಳಿಗೆ ಇಂದ್ರಿಯಗಳಿಗೆ ಅಗೋಚರನು, ಅತೀತನು, ನಿರೀಹ ನಿಷ್ಕಳನು, ಅದ್ವಿತೀಯನು. ಯಾವುದೇ ಸಂಜ್ಞಾಭೇದವಿಲ್ಲದವನು. ನಿನಗೆ ಕರ್ತೃತ್ವದೋಷವಿಲ್ಲ ಭವಸಾಗರವನ್ನು ದಾಟಿಸುವವನೇ. ನೀನು ಇನ್ನು ನಾನು ನಿನ್ನ ನಿಜರೂಪವನ್ನು ನೋಡಲಾರೆನು. ನಿನ್ನ ಬಾಲಭಾವವನ್ನು ತೋರಿಸಿ ನನ್ನನ್ನು ಪಾರುಮಾಡು ಎಂದು ಬೇಡಿಕೊಳ್ಳುತ್ತಾಳೆ. ತಾಯಿಯ ಮಾತಿಗೆ ಉತ್ತರವಾಗಿ ನಿನ್ನ ಮನಸ್ಸಿನಲ್ಲಿ ಧ್ವಂಸವಾಗಲಿ. ನಾನು ರಾವಣಾದ್ಯರ ವಧೆಗೋಸುಗ ಮನುಜ ರೂಪ ಧರಿಸಿದ್ದೇನೆ. ನೀವು ಪೂರ್ವದಲ್ಲಿ ತಪಸ್ಸನ್ನಾಚರಿಸಿ ಬೇಡಿದ ಕಾರಣ ನಿಮ್ಮ ಉದರದಲ್ಲಿ ನಿಮ್ಮ ಮಗನಾಗಿ ಜನಿಸಿದೆ. ನನ್ನ ಈ ರೂಪ ನೋಡಿದವರು ಸಾಯುಜ್ಯ ಪದವಿಯನ್ನು ಪಡೆವರು ಎಂದು ಹೇಳಿ ತನ್ನ ಬಾಲಸ್ವರೂಪವನ್ನು ಪಡೆದು ರೋದಿಸಲು ಪ್ರಾರಂಭಿಸಿದನು. ಪುತ್ರೋತ್ಸವವಾದುದನ್ನು ಕೇಳಿ ಸರ್ವರೂ ಹರ್ಷಿತರಾದರು. ಗುರುಗಳ ಅನುಜ್ಞೆಯಂತೆ ದಶರಥನು ಮಕ್ಕಳ ಜಾತಕರ್ಮಾದಿಗಳನ್ನು ನೆರವೇರಿಸಿದನು. ದ್ವಿಜರಿಗೆ ಗೋಸಹಸ್ರವನ್ನು ದಾನಮಾಡಿದ ಸಕಲರಿಗೂ ಸುವರ್ಣದ ರಾಶಿ ರಾಶಿಗಳನ್ನೇ ದಾನಮಾಡಿದ. ಮಕ್ಕಳಿಗೆ ರಾಮ, ಲಕ್ಷ್ಮಣ, ಭರತ ಶತ್ರುಘ್ನ ರೆಂಬ ನಾಮಕರಣವಾಯಿತು. ಲಲನೆಯರೆಲ್ಲ ಮಕ್ಕಳನ್ನು ಹೊನ್ನ ತೊಟ್ಟಿಲಲ್ಲಿಟ್ಟು ಜೋ ಜೋ ಎಂದು ತೂಗಿ ಹಾಡಿದರು. ಮಕ್ಕಳು ಬಾಲ್ಯಕಾಲದ ಬಾಲಲೀಲೆಗಳನ್ನು ತೋರ ತೊಡಗಿದರು. ಜನರು ಹರ್ಷಾನಂದ ಪುಳಕಿತರಾದರು. ಮಕ್ಕಳ ಆಟಗಳು ಜನರೆಲ್ಲರಿಗೂ ಸಂತೋಷವನ್ನುಂಟುಮಾಡಿದವು. ಹೀಗೆ ಅವರ ಪೌಗಂಡ ಹಾಗೂ ಕಿಶೋರಾವಸ್ಥೆಗಳು ಕಳೆದವು. ಕೌಮಾರಾವಸ್ಥೆಗೆ ಬರಲು ದಶರಥನು

ಅವರ ಉಪನಯನಾದಿ ಕಾರ್ಯಗಳನ್ನು ನೆರವೇರಿಸಿದನು. ಉತ್ತಮವಾದ ಶಿಕ್ಷಣವನ್ನು ಗುರುಗಳ ಮುಖಾಂತರ ಕೊಡಲು ಪ್ರಾರಂಭಿಸಿದನು. ಹೀಗೆ ಅವರು ಮಾನುಷಾಕೃತಿಯಲ್ಲಿ ನಾನಾ ಕಾರ್ಯಗಳನ್ನು ಮಾಡುತ್ತಾ ಜನರನ್ನು ಸಂತೋಷಗೊಳಿಸುತ್ತಾ ಪ್ರವರ್ಧಮಾನರಾಗಿ ಬೆಳೆಯುತ್ತಿದ್ದರು ಎಂಬಲ್ಲಿಗೆ ನಾಲ್ಕನೆಯ ಸಂಧಿಯು ಮುಕ್ತಾಯಗೊಂಡಿತು.

**ಐದನೆಯ ಸಂಧಿ :-** ಇತ್ತ ಈಶ್ವರನು ಶ್ರೀ ರಾಮಚರಿತದ ಮುಂದಿನ ಕಥೆಯನ್ನು ಪಾರ್ವತಿಗೆ ಹೇಳುವಂಥವನಾಗುತ್ತಾನೆ. ಎಲೈ ಪಾರ್ವತಿಯೇ ಮುಂದಿನ ಸಂಗತಿಯನ್ನು ಕೇಳು.

ಶ್ರೀ ರಾಮಚಂದ್ರನು ಅಯೋಧ್ಯೆಯಲ್ಲಿ ತನ್ನ ಬಾಲಲೀಲೆಯನ್ನು ಪ್ರಕಟಪಡಿಸುತ್ತಾ ಪ್ರವರ್ಧಮಾನನಾಗುತ್ತಿರುವ ಸಂದರ್ಭದಲ್ಲಿ ವಿಶ್ವಾಮಿತ್ರ ಮಹರ್ಷಿಯು ಅಯೋಧ್ಯೆಗೆ ಬರುತ್ತಾನೆ. ಬಂದಂಥ ಮಹರ್ಷಿಯನ್ನು ದಶರಥ ಮಹಾರಾಜನು ಸಂಭ್ರಮದಿಂದ ಸ್ವಾಗತಿಸಿದನು. ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿದನು. ನಿಮ್ಮ ಬರವಿನಿಂದ ನನ್ನ ಪಟ್ಟಣ, ಮನೆ ಪರಮ ಪಾವನವಾಯಿತು. ನಿಮ್ಮಂಥ ಹಿರಿಯರ ಆಗಮನವು ನಮ್ಮಂಥ ಗೃಹಿಗಳಿಗೆ ಸರ್ವಸಂಪತ್ಸಮೃದ್ಧಿ ಕರವಾಗಿದೆ. ಈಗ ಇಲ್ಲಿಗೆ ಬಂದಂಥ ಕಾರಣವನ್ನು ತಾವು ಹೇಳಬೇಕು. ಎಂದು ಕೇಳಿಕೊಳ್ಳಲಾಗಿ ವಿಶ್ವಾಮಿತ್ರನು ಹೇಳಿದನು. ನಾನು ಸಕಲ ಜನರಿಗೂ ದೇವತೆಗಳಿಗೂ ಪ್ರೀತಿಕರವಾದ ಯಾಗವೊಂದನ್ನು ಪ್ರಾರಂಭಿಸಿದ್ದೇನೆ. ದನುಜರಾದ ಮಾರೀಚ ಸುಬಾಹು ಹಾಗೂ ಅವನ ಸಂಗಡಿಗರು ಅದಕ್ಕೆ ವಿಘ್ನವೆಸಗುತ್ತಿದ್ದಾರೆ. ಕಾರಣ ಅವರ ವಧೆಗೋಸ್ಕರವಾಗಿ ಶ್ರೀ ರಾಮ ಲಕ್ಷ್ಮಣರನ್ನು ನನ್ನ ಸಂಗಡ ಕಳುಹಿಸಬೇಕು ಎಂದು ಕೇಳುತ್ತಿದ್ದೇನೆ. ಕುಲಗುರು ವಸಿಷ್ಠರನ್ನು ಕೇಳಿ ಹೇಳು ಎಂದು ತಿಳಿಸುತ್ತಾನೆ. ದಶರಥನು ಕುಲಗುರುಗಳಾದ ವಸಿಷ್ಠರಲ್ಲಿ ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ. ನಾನು ಈ ಬಾಲಕ ರಾಮನನ್ನು ಹೇಗೆ ಕಳುಹಿಸಲಿ ? ಇವರು ಬಹಳ ಕಾಲದ ನಂತರ ಹುಟ್ಟಿದವರು. ರಾಮನನ್ನು ಕಳುಹಿಸಲು ಮನಸ್ಸಿಲ್ಲ. ನಾನೇ ಹೋಗಿ ರಾಕ್ಷಸರನ್ನು ಸದೆಬಡಿದು ಬರುವೆನು. ಸತ್ಯಕ್ಕೆ ಚ್ಯುತಿ ಬಾರದಂತೆ ಹೇಗೆ ನಡೆಯಬೇಕು ಎಂಬುದನ್ನು ತಿಳುಹಿಸುವಂಥವ

ರಾಗಿರಿ ಎಂದು ಬಿನ್ನೈಸಿದನು. ಈ ಮಾತನ್ನು ಕೇಳಿದ ವಸಿಷ್ಠರು ರಹಸ್ಯತಮವಾದ ಮಾತನ್ನು ದಶರಥ ಮಹಾರಾಜನಿಗೆ ಹೇಳುತ್ತಾರೆ.- ರಾಕ್ಷಸರ ಸಂಹಾರಕ್ಕಾಗಿ ಭೂಭಾರವನ್ನಿಳುಹಲೋಸುಗ ಸಾಕ್ಷಾತ್ ಮಹಾವಿಷ್ಣುವೇ ರಾಮನ ಅವತಾರವಾಗಿ ಹುಟ್ಟಿದ್ದಾನೆ. ನೀನು ಪೂರ್ವದಲ್ಲಿ ಕಾಶ್ಯಪಾಂಹಯನು. ಕೌಸಲೆಯು ದೇವಮಾತೆಯು. ನೀವು ಪೂಜಾಧ್ಯಾನ ಜಪ-ತಪಗಳಿಂದ ವಿಷ್ಣುವನ್ನು ಪೂಜಿಸಿ ನೀನೇ ತಮ್ಮ ಮಗನಾಗಿ ಜನಿಸಬೇಕು ಎಂದು ವರ ಪಡೆದಿರಿ. ಆ ವರದ ಫಲವಾಗಿ ವಿಷ್ಣುವು ರಾಮನಾಗಿ ಜನಿಸಿದ್ದಾನೆ. ಶೇಷನೇ ಲಕ್ಷ್ಮಣನಾಗಿದ್ದಾನೆ. ಆತನ ಕೈಯಲ್ಲಿಯ ಶಂಖ ಭರತನಾಗಿದ್ದಾನೆ. ಚಕ್ರವೇ ಶತ್ರುಘ್ನನಾಗಿದ್ದಾನೆ. ಆತನ ಪತ್ನಿಯು ಸೀತೆಯೆಂಬ ಹೆಸರಿನಿಂದ ಜನಕ ಮಹಾರಾಜನಲ್ಲಿ ಬೆಳೆಯುತ್ತಿದ್ದಾಳೆ. ಈ ಗೌಪ್ಯ ಸಂಗತಿಯನ್ನು ನಿನಗರುಹಿದ್ದೇನೆ. ಕಾರಣ ರಾಮ ಲಕ್ಷ್ಮಣರನ್ನು ವಿಶ್ವಾಮಿತ್ರರೊಡನೆ ಕಳುಹಿಸು. ಎಂದು ವಸಿಷ್ಠರು ಹೇಳಿದರು. ಅಂತೆಯೇ ದಶರಥನು ರಾಮಲಕ್ಷ್ಮಣರನ್ನು ಮುನಿ ವಿಶ್ವಾಮಿತ್ರರ ವಶಕ್ಕೆ ಒಪ್ಪಿಸಿದನು. ಅವರು ಶರಧನುಗಳಿಂದೊಡಗೂಡಿ ವಿಶ್ವಾಮಿತ್ರರ ಹಿಂದೆ ಬೆಂಗಾವಲಾಗಿ ಹೊರಟರು. ಮಹಾಮಹಿಮನಾದ ಶ್ರೀ ರಾಮಚಂದ್ರನು ತನ್ನ ಮಾಯಾ ಲೀಲೆಯನ್ನು ತೋರಿಸಲೋಸುಗ ಆ ಋಷಿಯ ಹಿಂದೆ ನಡೆದನು. ಹೀಗೆ ಹಲವು ದೇಶಗಳನ್ನು ಕಳೆದು ಬರುತ್ತಿರಲು ಆ ಮುನಿಯು ಹಸಿವು ತೃಷೆ ಎರಡನ್ನೂ ಅಡಗಿಸುವ ಬಲಾ ಅತಿಬಲಾ ಎಂಬ ಎರಡು ವಿದ್ಯೆಗಳನ್ನು ಅವರಿಗೆ ಉಪದೇಶಿಸಿದನು. ಅವರು ಅದನ್ನು ಪಡೆದು ಋಷಿಯೊಡನೆ ಹೊರಟು ಗಂಗಾನದಿಯನ್ನು ದಾಟಿ ಒಂದು ಕಾನನವನ್ನು ಹೊಕ್ಕರು. ಆ ಕಾನನದಲ್ಲಿ ತಾಟಕಿ ಎಂಬ ರಾಕ್ಷಸಿಯಿದ್ದಳು. ಆಕೆ ಬಾಯ್ದೆರೆದು ಅವರನ್ನು ನುಂಗಲು ಬಂದಳು. ಘೋರ ರೂಪಿಯಾದ ಆಕೆಯನ್ನು ರಾಮನು ವಿಶ್ವಾಮಿತ್ರರ ಪ್ರೇರಣೆಯಂತೆ ಸಂಹರಿಸಿದನು. ಆ ಕ್ಷಣವೇ ಬಿದ್ದ ಶರೀರದಿಂದ ಸುಂದರಾಕಾರಿಯಾದ ಒಬ್ಬ ಯಕ್ಷಿಣಿಯು ಕಾಣಿಸಿಕೊಂಡಳು. ಆಕೆ ರಾಮನನ್ನು ಹಲವು ಬಗೆಯಿಂದ ಸ್ತುತಿಸಿ ಆತನಿಂದ ಅಪ್ಪಣೆ ಪಡೆದು ಸ್ವರ್ಗಕ್ಕೆ ಹೋದಳು. ಇದರಿಂದ ಸುಪ್ರೀತನಾದ ವಿಶ್ವಾಮಿತ್ರನು ರಾಮ ಲಕ್ಷ್ಮಣರಿಗೆ ಬಹು ಮಂತ್ರಾಸ್ತ್ರಗಳನ್ನು ನೀಡಿದನು. ಹೀಗೆ ಪ್ರಯಾಣಮಾಡಿ ತಮ್ಮಾಶ್ರಮಕ್ಕೆ ಬಂದ ವಿಶ್ವಾಮಿತ್ರರು ಯಜ್ಞವನ್ನು

ಪ್ರಾರಂಭಿಸಿದರು. ರಾಮ ಲಕ್ಷ್ಮಣರು ಯಜ್ಞದ ಕಾವಲಿಗಾಗಿ ನಿಂತರು. ಆಗ ಮಾಯಾವಿಗಳಾದ ಸುಬಾಹು ಮಾರೀಚರು ಯಜ್ಞ ಕೆಡಿಸಲು ಬಂದರು. ರಾಮನು ವಾಯು ಮತ್ತು ಆಗ್ನೇಯಾಸ್ತ್ರಗಳನ್ನು ಬಿಟ್ಟನು. ವಾಯು ವಾಸ್ತ್ರವು ಸುಬಾಹುವನ್ನ ಕೊಂದಿತು. ಉಳಿದ ರಾಕ್ಷಸರು ದಿಕ್ಕೆಟ್ಟು ಓಡಿದರು. ದೇವತೆಗಳು ಸಂತೋಷದಿಂದ ಹೂಮಳೆಗರೆದರು. ಹೀಗೆ ಅವರು ಮೂರು ದಿನ ಅಲ್ಲಿದ್ದರು. ನಂತರ ವಿಶ್ವಾಮಿತ್ರರು ಅವರಿಗೆಂದರು- ಮಕ್ಕಳೇ ನಾವು ಮಿಥಿಲಾನಗರಕ್ಕೆ ಹೋಗೋಣ. ಅಲ್ಲಿ ಜನಕ ಮಹಾರಾಜನಿದ್ದಾನೆ. ಆತ ಗುಣನಿಧಿ, ಸತ್ಯನಿಧಿ, ಧರ್ಮಪರಿಪಾಲಕ, ಅಲ್ಲಿ ಈಶ್ವರನ ಚಾಪವಿದೆ. ಜನಕನು ನಿನ್ನ ಶಕ್ತಿ ಪರಾಕ್ರಮವನ್ನು ಮನಗಾಣಲಿ. ನಮಗೆ ಅಲ್ಲಿ ಕೆಲಸವಿದೆ. ಎಂದು ಹೇಳಿ ಅವರನ್ನು ಕರಕೊಂಡು ಹೊರಟರು. ಅಲ್ಲಿರುವ ಪುಣ್ಯ ಸ್ಥಳಗಳನ್ನು ನೋಡುತ್ತಾ ನೋಡುತ್ತಾ ಗೌತಮಾಶ್ರಮಕ್ಕೆ ಬಂದರು ಎಂಬಲ್ಲಿಗೆ ಐದನೆಯ ಸಂಧಿ ಮುಕ್ತಾಯಗೊಂಡಿತು.

ಆರನೆಯ ಸಂಧಿ :- ಎಲೈ ಗಿರಿಜೆಯೇ ಮುಂದಿನ ಕುತೂಹಲ ಕರವಾದ ಕಥೆಯನ್ನು ಕೇಳುವಂಥವಳಾಗು ಎಂದು ಈಶ್ವರನು ಹೇಳಿ ಮುಂದಿನ ಕಥೆಯನ್ನು ಹೇಳುವಂಥವನಾಗುತ್ತಾನೆ.

ವಿಶ್ವಾಮಿತ್ರರು ರಾಮಲಕ್ಷ್ಮಣರೊಡನೆ ಗೌತಮಾಶ್ರಮಕ್ಕೆ ಬಂದರು. ಅಲ್ಲಿಯ ಪ್ರಶಾಂತವಾದ ವಾತಾವರಣ, ಅಲ್ಲಿಯ ರಮ್ಯತೆ, ಸೌಂದರ್ಯ ಇವೆಲ್ಲವನ್ನೂ ಅವರು ನೋಡಿದರು. ಅಲ್ಲಿ ಯಾರೂ ಇಲ್ಲದುದನ್ನು ಕಂಡ ಶ್ರೀರಾಮನು ಆ ಆಶ್ರಮದ ಬಗ್ಗೆ ವಿಶ್ವಾಮಿತ್ರರಲ್ಲಿ ವಿಚಾರಿಸಿದನು. ವಿಶ್ವಾಮಿತ್ರರು ಅಲ್ಲಿಯ ಕಥೆಯನ್ನು ಹೇಳಿದರು. ಬ್ರಹ್ಮನು ತನ್ನ ಮಗಳಾದ ಅಹಲ್ಯೆಯನ್ನು ಗೌತಮ ಮುನಿಗೆ ಕೊಟ್ಟನು. ಆಕೆ ಪತಿಯ ಪರಿಚರ್ಯೆ-ಯನ್ನು ಯೋಗ್ಯ ರೀತಿಯಿಂದ ಮಾಡುತ್ತಿದ್ದಳು. ಆಗ ಒಂದು ದಿನ ಕಾಮ ಕಲುಷಿತನಾದ ದೇವೇಂದ್ರನು ಮುನಿಯು ಹೊರಗೆ ಹೋದ ಸಂದರ್ಭದಲ್ಲಿ ಆ ಮುನಿಯ ವೇಷ ಧರಿಸಿ ಆಕೆಯೊಡನೆ ರಮಿಸಿದನು. ಮುನಿಯು ಬಂದಾಗ ಈ ಸಂಗತಿ ತಿಳಿಯಿತು. ಸಿಟ್ಟಿನಿಂದ ಕೆಂಡವಾದ ಅವರು ಇಂದ್ರನಿಗೆ

ಸಹಸ್ರಾಕ್ಷನಾಗು ಎಂದು ಶಾಪವಿತ್ತರು. ಮತ್ತು ತನ್ನ ಪತ್ನಿಯಾದ ಅಹಲ್ಯೆಗೂ ಶಿಲೆಯಾಗುವಂತೆ ಶಾಪವಿತ್ತರು. ಸದಾಕಾಲ ರಾಮಧ್ಯಾನ ನಿರತಳಾಗಿರು ಹಕ್ಕಿ ಪಕ್ಷಿ ಮೊದಲಾದವುಗಳಾವುದರಿಂದಲೂ ನಿನಗೆ ತೊಂದರೆಯಿಲ್ಲ. ಸಾವಿರಾರು ವರ್ಷಗಳು ಕಳೆದ ಮೇಲೆ ಶ್ರೀ ರಾಮಚಂದ್ರ ಇಲ್ಲಿಗೆ ಬರುತ್ತಾನೆ. ಅವನ ಪಾದಧೂಳಿಯಿಂದ ನಿನ್ನ ಶಾಪ ಬಿಡುಗಡೆ ಯಾಗುತ್ತದೆ ನಂತರ ನೀನು ನನ್ನ ಸೇವೆಗೆ ಬಾ ಎಂದು ಹೇಳಿ ಹಿಮವತ್ಪರ್ವತಕ್ಕೆ ತೆರಳಿದರು. ಇತ್ತ ಅಹಲ್ಯೆ ಕಲ್ಲಾಗಿ ಬಿದ್ದಳು. ಆಕೆ ಗಾಳಿ ಆಹಾರ ಮಾತ್ರದಿಂದ ಇದ್ದಾಳೆ. ನಿನ್ನ ಪಾದಧೂಳಿಯಿಂದ ಆಕೆಯನ್ನು ಉದ್ಧರಿಸು ಎಂದು ವಿಶ್ವಾಮಿತ್ರರು ಹೇಳಿದರು. ರಾಮಪಾದಸ್ಪರ್ಶವಾದ ಕೂಡಲೇ ಶಿಲೆಯು ಅಹಲ್ಯೆಯಾಗಿ ಬದಲಾಯಿತು. ಆ ಅಹಲ್ಯೆ ಶ್ರೀ ರಾಮಚಂದ್ರನ ಪದತಲದಲ್ಲಿ ಬಿದ್ದು ಹೊರಳಿ ನಾನಾ ರೀತಿಯಿಂದ ಆತನನ್ನು ಸ್ತೋತ್ರ ಮಾಡಿದಳು. ಶ್ರೀಮನ್ನಾರಾಯಣನೇ ಇವನು ಎಂದು ಭಾವಿಸಿದಳು. ಆನಂದ ಪುಳಕಿತೆಯಾಗಿ ಗದ್ಗದ ಸ್ವರದಿಂದ ಹಲವಾರು ರೀತಿಯಲ್ಲಿ ಆತನ ಸ್ತೋತ್ರ ಮಾಡಿದಳು. ನೀನು ಈಗ ಮನುಜ ರೂಪ ಧರಿಸಿ ಭೂಲೋಕಕ್ಕೆ ಬಂದಿದ್ದೀ. ಎಲ್ಲರ ಪಾಪಗಳನ್ನು ಪರಿಹರಿಸುವಂಥವನಾಗಿದ್ದೀ. ಯೋಗಿಗಳಿಗೂ ಅಗೋಚರನಾಗಿದ್ದೀ. ಆದಿ ಓಂಕಾರ ರೂಪನು ನೀನೆ. ನೀನೇ ವೇದ ಸ್ವರೂಪ ಎಲ್ಲವಕ್ಕೂ ನೀನೇ ಆದಿಕಾರಣ. ನಾವೆಲ್ಲ ನಿನ್ನ ಮಾಯೆಯಿಂದ ಮೋಹಿತರಾದವರು. ನೀನೇ ಸಕಲಕ್ಕೂ ಕಾರಣನು ಪ್ರಾರಬ್ಧವಶವಾಗಿರುವ ನಮ್ಮನ್ನು ನೀನೇ ಪಾರುಮಾಡಬೇಕು. ನಿನ್ನ ಪದಯುಗ ದರ್ಶನದಿಂದ ನಾನು ಪಾವನಳಾದೆ ನಾನು ನಿನ್ನನ್ನು ಎಂದೂ ಬಿಡುವದಿಲ್ಲ. ನಿನಗೆ ಅನಂತಾನಂತ ನಮಸ್ಕಾರಗಳು ಎಂದು ಸ್ತುತಿಸುತ್ತ ಆತನ ಅನುಜ್ಞೆಯನ್ನು ಪಡೆದು ತನ್ನ ಪತಿಯ ಬಳಿಗೆ ತೆರಳಿದಳು. ಈ ರಾಮನನ್ನು ಅನನ್ಯ ಭಕ್ತಿಯಿಂದ ಒಂದು ವರುಷ ಸ್ತುತಿಸಿದರೆ ಬಂಜೆಯಾದವಳೂ ಕೂಡ ಪುತ್ರರತ್ನವನ್ನು ಪಡೆಯುವಳು. ಪಾಪಿಗಳು ಪಾಪಗಳನ್ನು ಕಳೆದುಕೊಳ್ಳುವರು. ಮುಕ್ತಿಯನ್ನು ಪಡೆದು ಧನ್ಯರಾಗುವರು ಎಂಬಲ್ಲಿಗೆ ಆರನೆಯ ಸಂಧಿಯು ಮುಕ್ತಾಯಗೊಂಡಿತು.

ಏಳನೆಯ ಸಂಧಿ :- ಎಲೈ ಗಿರಿರಾಜಸುತೆಯೇ ಶ್ರೀ ರಾಮಚಂದ್ರನ ಮುಂದಿನ ಕಥೆಯನ್ನು ವಿವರಿಸುವೆನು ಕೇಳುವಂಥವಳಾಗು.

ಈ ಪ್ರಕಾರವಾಗಿ ಪ್ರಯಾಣಮಾಡುತ್ತ ರಾಮಲಕ್ಷ್ಮಣರು ವಿಶ್ವಾಮಿತ್ರರೊಂದಿಗೆ ಮಿಥಿಲಾ ಪಟ್ಟಣದ ಕಡೆಗೆ ಹೊರಟರು. ಗಂಗಾನದಿಯನ್ನು ದಾಟಿ ಮಿಥಿಲಾ ಪಟ್ಟಣದ ಸಮೀಪಕ್ಕೆ ಬಂದ ಸುದ್ದಿಯನ್ನು ಜನಕರಾಜನು ಕೇಳಿ ವಿಶ್ವಾಮಿತ್ರರನ್ನು ಸಾದರದಿಂದ ಸ್ವಾಗತಿಸಿದನು. ಅರ್ಘ್ಯಪಾದ್ಯಾದಿ ಉಪಚಾರಗಳಿಂದ ಸನ್ಮಾನಿಸಿದನು. ಆತನ ಸಂಗಡ ಇರುವ ರಾಮಲಕ್ಷ್ಮಣರನ್ನು ಕಂಡು ಇವರಾರೆಂದು ಪ್ರಶ್ನಿಸುವಂಥವನಾದನು. ಆಗ ವಿಶ್ವಾಮಿತ್ರರು ಹೀಗೆ ಹೇಳಿದರು- ಇವರು ದಶರಥರಾಜನ ಪುತ್ರರು. ನಾನು ನನ್ನ ಯಾಗ ರಕ್ಷಣೆಗೋಸುಗ ಇವರನ್ನು ಕರೆತಂದೆ. ಈತ ತಾಟಕಿ ಎಂಬ ರಾಕ್ಷಸಿಯನ್ನು ಒಂದೇ ಬಾಣದಿಂದ ಕೊಂದನು. ಈತನ ಶರಪತಿಯಿಂದ ಸುಬಾಹು ಮರಣ ಹೊಂದಿದ. ಮಾರೀಚ ಸಮುದ್ರಮಧ್ಯದಲ್ಲಿ ಬಿದ್ದ. ಅಹಲ್ಯೆಯ ಶಾಪ ವಿಮೋಚನೆ ಈತನಿಂದಲೇ ಆಯಿತು. ಅವಳಿಂದ ಪೂಜೆಯನ್ನು ಪಡೆದು ನಾವು ಈಗ ಇಲ್ಲಿಗೆ ಬಂದೆವು. ನಿನ್ನಲ್ಲಿ ಪೂಜೆಗೊಳ್ಳುತ್ತಿರುವ ಶಿವಚಾಪಕ್ಕೆ ತಿರುವನೇರಿಸುವ ನೆವದಿಂದ ಇವರನ್ನು ಇಲ್ಲಿಗೆ ಕರೆತಂದೆ ಎಂದು ಹೇಳಿದನು. ಈ ಮಾತನ್ನು ಕೇಳಿ ಜನಕನು ಅತ್ಯಂತ ಹರುಷಿತನಾಗಿ ಆ ಶಿವಧನುವನ್ನು ಜನಕನು ತನ್ನ ಐದು ಸಾವಿರ ಭುಜಬಲ ಪರಾಕ್ರಮಿಗಳಾದ ಪಟುಭಟರಿಂದ ಸಭೆಗೆ ತರಿಸಿದನು. ಶ್ರೀ ರಾಮಚಂದ್ರನು ಧನುಸ್ಸಿಗೆ ಕೈಮುಗಿದು ಅದನ್ನು ಎತ್ತಿ ಬಗ್ಗಿಸಿ ತಿರುವನೇರಿಸಿದನು. ಹೆದೆಯನ್ನು ಏರಿಸುತ್ತಿರುವಾಗಲೇ ಆ ಧನುಸ್ಸು ಮುರಿಯಿತು. ಅದರ ಚೇಂಕಾರಧ್ವನಿ ಮೂರು ಲೋಕವನ್ನು ನಡುಗಿಸಿತು. ಆಕಾಶದಲ್ಲಿ ದೇವದುಂದುಭಿ ಮೊಳಗಿದವು. ಅಪ್ಸರೆಯರು ಗೀತಗಳನ್ನು ಪಾಡಿದರು. ಈ ಸಂತೋಷದ ಭರದಲ್ಲಿ ಜನಕನು ರಾಮನನ್ನು ಆಲಂಗಿಸಿಕೊಂಡನು. ಸೀತಾದೇವಿಗೆ ಈತನೇ ತಕ್ಕ ವರ ಎಂದು ನಿಶ್ಚಯಿಸಿ ಸೀತೆಯನ್ನು ಮಂಟಪಕ್ಕೆ ಕರೆಸಿದನು. ಸುಂದರಾಂಗಿಯಾದ ಸೀತೆಯು ನಗುಮೊಗದಿಂದ ಶ್ರೀ ರಾಮಚಂದ್ರನ ಮುಂದೆ ಬಂದು ಆತನ ಕೊರಳಲ್ಲಿ ಪೂಮಾಲೆಯಿಕ್ಕಿ ಶೋಭಿಸಿದಳು. ಪುರಜನರೆಲ್ಲ ನೋಡಿ ಅತ್ಯಂತ ಸಂತೋಷ

ಪಟ್ಟರು. ಇತ್ತ ದಶರಥ ಮಹಾರಾಜನಿಗೆ ವಿವಾಹದ ನಿಮಂತ್ರಣ ಪತ್ರಿಕೆಯನ್ನು ಕೂಡಲೇ ಕಳುಹಿಸು ಎಂದು ವಿಶ್ವಾಮಿತ್ರನು ಜನಕನಿಗೆ ಬೆಸಸಿದನು. ದೂತರು ಕೂಡಲೇ ಹೊರಟು ಅಯೋಧ್ಯಾ ಪಟ್ಟಣಕ್ಕೆ ಬಂದು ದಶರಥನಿಗೆ ಸಾದ್ಯಂತವಾದ ವರದಿ ಒಪ್ಪಿಸಿದರು. ದಶರಥ ರಾಜನಾದರೋ ಅತ್ಯಂತ ಸಂತೋಷದಿಂದ ತನ್ನ ಹೆಂಡಂದಿರು, ಪುರಜನರು. ಪರಿವಾರದವರು ಮಂತ್ರಿಗಳು ಮಾಂಡಲಿಕರು ಇವೇ ಮೊದಲಾದ ಸಪರಿವಾರದೊಂದಿಗೆ ಮಿಥಿಲಾ ಪಟ್ಟಣಕ್ಕೆ ಹೊರಟನು. ಬಂದಂಥ ದಶರಥ ಮಹಾರಾಜನನ್ನು ಪರಿವಾರವನ್ನು, ಜನಕನು ತನ್ನ ಪುರೋಹಿತರಾದ ಶತಾನಂದ ಮುನಿ ಸಹಿತನಾಗಿ ಸಂಭ್ರಮದಿಂದ ಇದಿರುಗೊಂಡನು. ಪುರಪ್ರವೇಶ ಮಾಡಿದ ದಶರಥನು ಅಲ್ಲಿ ತನ್ನ ಮಕ್ಕಳಾದ ರಾಮಲಕ್ಷ್ಮಣರನ್ನು ಕಂಡು ಸಂತೋಷದಿಂದ ಅವರನ್ನು ಆಲಂಗಿಸಿದನು. ಜನಕರಾಜನು ಶುಭಲಗ್ನ ಶುಭಮುಹೂರ್ತದಲ್ಲಿ ವೈವಾಹವನ್ನು ನಡೆಸಲು ನಿಶ್ಚಯಿಸಿದನು. ವಿವಾಹಮಂಟಪವು ಅತ್ಯಂತ ಮನೋಹರವಾಗಿ ರಚನೆಗೊಂಡಿತು. ವಾದ್ಯಗಳು ಮೊಳಗಿದವು. ಹೋಮಾಗ್ನಿಯು ಪ್ರಜ್ವಲಿಸಿತು. ಸರ್ವಾಭರಣ ಭೂಷಿತೆ-ಯಾದ ಸೀತೆಯನ್ನು ವಿವಾಹ ಮಂಟಪಕ್ಕೆ ಕರೆತರಲಾಯಿತು. ಜನಕ ರಾಜನು ತನ್ನ ಅಳಿಯನಾಗಲಿರುವ ಶ್ರೀ ರಾಮಚಂದ್ರನ ಪಾದ ತೊಳೆದು ತೀರ್ಥೋದಕವನ್ನು ಶಿರದಲ್ಲಿ ಧರಿಸಿದ. ನಂತರ ಸೀತಾದೇವಿಯ ಹಸ್ತವನ್ನು ರಾಮನ ಕೈಯಲ್ಲಿ ಕೊಟ್ಟು ಧಾರಾಪೂರ್ವಕವಾಗಿ ಶ್ರೀ ರಾಮನಿಗೆ ಸೀತೆಯನ್ನು ಧಾರೆಯೆರೆದು ಕೊಟ್ಟನು. ರಾಮ ಸೀತೆಯರು ಕ್ಷೀರಶರಧಿಯ ವಿಷ್ಣು ಲಕ್ಷ್ಮಿಯರಂತೆ ಶೋಭಿಸಿದರು. ಇದೇ ಸಮಯದಲ್ಲಿ ಲಕ್ಷ್ಮಣನಿಗೆ ಊರ್ಮಿಳೆಯನ್ನು, ಭರತನಿಗೆ ಶ್ರುತಕೀರ್ತಿಯನ್ನೂ, ಶತ್ರುಘ್ನನಿಗೆ ಮಾಳವಿ-ಯನ್ನು ಕೊಟ್ಟು ವೈವಾಹವಿಧಿಯನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸಿದನು. ನಾಲ್ವರೂ ತಮ್ಮ ತಮ್ಮ ಸತಿಯರೊಡನೆ ಶೋಭಿಸುವಂಥವರಾದರು. ಹೀಗೆ ಸಂತೋಷದಿಂದ ಸಂಭ್ರಮಿಸುತ್ತಿರುವ ಸಮಯದಲ್ಲಿ ನಾರದರಿಂದ ಹೇಳಲ್ಪಟ್ಟ ಸೀತಾಜನನದ ವೃತ್ತಾಂತವನ್ನು ವಿಶ್ವಾಮಿತ್ರ ವಸಿಷ್ಠರಿಗೆ ಜನಕ ಮಹಾರಾಜನು ಹೇಳುವಂಥವನಾದನು.

ಒಮ್ಮೆ ನಾನು ಯಾಗಕ್ಕೋಸ್ಕರವಾಗಿ ಭೂಮಿಯನ್ನು ಊಳತ್ತಿರು-ವಾಗ ಭೂಮಿಯಲ್ಲಿ ಸೀತೆ ಕಂಡುಬಂದಳು. ಅವಳನ್ನು ಕರೆತಂದು ತನ್ನ ಪತ್ನಿಗೆ ಕೊಟ್ಟೆನು. ಅವಳು ಆ ಸೀತೆಯನ್ನು ಪ್ರಾಣಕ್ಕಿಂತಲೂ ಮಿಗಿಲಾಗಿ ಪ್ರೀತಿಸಿ ಸಲಹುತ್ತಿರಲು ವೀಣಾಪಾಣಿಯಾದ ನಾರದ ಮುನಿಗಳು ನಾರಾಯಣ ಸ್ಮರಣೆ ಮಾಡುತ್ತ ಮಿಥಿಲಾ ಪಟ್ಟಣಕ್ಕೆ ಬಂದರು. ಬಂದಂಥ ನಾರದರನ್ನು ಯಥೋಚಿತವಾದ ಅರ್ಘ್ಯ ಪಾದ್ಯಗಳಿಂದ ಸತ್ಕರಿಸಿ ಸಿಂಹ ವಿಷ್ಟರದ ಮೇಲೆ ಕುಳ್ಳಿರಿಸಿ ಮಾತಾಡಿಸುತ್ತಿರಲು ನಾರದ ಮಹರ್ಷಿಗಳು ಈ ರೀತಿ ಹೇಳಿದರು – ರಾಜನೇ ನಿನಗೊಂದು ಗೌಪ್ಯ ವಿಷಯವನ್ನು ಹೇಳುತ್ತೇನೆ. ಕೇಳವಂಥವನಾಗು. ಆ ಪರಾಪರ ವಸ್ತುವಾದ ಪರಮಾತ್ಮನಾದ ಶ್ರೀ ಮನ್ನಾರಾಯಣನು ಭಕ್ತರ ಪ್ರೀತಿಗೋಸುಗ, ಅವರ ರಕ್ಷಣೆಗೋಸುಗ, ದುಷ್ಟರಾದ ರಾವಣಾದಿಗಳ ನಾಶಕ್ಕೋಸ್ಕರ ಮಾನವ ವೇಷವನ್ನು ಧರಿಸಿ ಅಯೋಧ್ಯಾ ಪಟ್ಟಣದಲ್ಲಿ ರಾಮಾಭಿಧಾನದಿಂದ ಜನಿಸಿದ್ದಾನೆ. ಯೋಗಮಾಯಾ ಮೂರ್ತಿಯಾದ ಲಕ್ಷ್ಮೀದೇವಿಯು ಸೀತಾ ಎನ್ನುವ ಅಭಿಧಾನದಿಂದ ನಿನ್ನಲ್ಲಿ ಜನಿಸಿದ್ದಾಳೆ. ಅವಳು ರಾಮಚಂದ್ರನನ್ನಲ್ಲದೇ ಮತ್ತಾರನ್ನೂ ಸೇರುವವಳಲ್ಲ ತಿಳಿದಿರು. ಮಿಕ್ಕಾವ ನರರಿಗೂ ಇವಳು ಯೋಗ್ಯಳಲ್ಲ ಎಂದು ಹೇಳಿ ದೇವಲೋಕಕ್ಕೆ ಹೋಗುವಂಥವರಾದರು. ಅಂದಿನಿಂದ ನಾನು ಇವಳನ್ನು ನನ್ನ ಮಗಳಲ್ಲ. ಸಾಕ್ಷಾತ್ ಲಕ್ಷ್ಮೀದೇವಿಯೇ ಎಂದು ಭಾವಿಸಿ ಅವಳನ್ನು ಪಾಲಿಸಿ ಪೋಷಿಸುತ್ತಿದ್ದೇನೆ. ರಾಮದೇವನ ಬರವನ್ನೇ ಹಾರಯಿಸುತ್ತಿದ್ದೇನೆ. ಆತನಿಗೆ ಯಾವಾಗ ಇವಳನ್ನು ಸೇರಿಸು-ವೆನೋ ಎಂಬ ಕಾತರದಿಂದ ಇದ್ದೇನೆ. ಮನುಜನಾದ ಶ್ರೀ ರಾಮಚಂದ್ರನ ಘನಪರಾಕ್ರಮವನ್ನು ತಿಳಿಯುವ ಉಪಾಯ ಯಾವುದು ಎಂದು ಚಿಂತಿಸಿ ಮನಸ್ಸಿನಲ್ಲಿಯೇ ಈ ರೀತಿ ಆಲೋಚಿಸಿದೆನು. ಆ ತ್ರಿಪುರಾಸುರರನ್ನು ಸಂಹಾರಮಾಡಿದ ಶಂಕರನ ಶಿವಧನುಸ್ಸು ನನ್ನ ಮನೆಯಲ್ಲಿಯೇ ಇದೆ. ಇದರ ಹೆದೆಯನ್ನು ಯಾರು ಏರಿಸುತ್ತಾರೋ ಅವರಿಗೇ ನನ್ನ ಮಗಳಾದ ಸೀತಾದೇವಿಯನ್ನು ಕೊಡುವೆ ಎಂದು ನಿಶ್ಚಯಿಸಿದೆ. ಈ ಪಣವನ್ನು ಗೆಲ್ಲುವದಕ್ಕಾಗಿ ಹಲವಾರು ರಾಜರು ಬಂದು ಪ್ರಯತ್ನಿಸಿದರು. ಸೋತು ಮಾನಭಂಗದಿಂದ ಮರಳಿದರು. ಆದರೆ ಶ್ರೀ ರಾಮಚಂದ್ರನು ಇದರ

ಹೆದೆಯೇರಿಸಿ ನನ್ನ ವಚನವನ್ನು ಪೂರ್ತಿಗೊಳಿಸಿದನು. ನಾನು ಗೆದ್ದೆ! ಗೆದ್ದೆ!! ನನ್ನ ಜನ್ಮ ಪಾವನವಾಯಿತು. ರಾಮನ ಪಾದದ್ವಯವನ್ನು ಕಾಣುವ ಭಾಗ್ಯ ನನ್ನದಾಯಿತು. ಹೀಗೆ ರಾಮನನ್ನು ಧ್ಯಾನಿಸುತ್ತ, ನಾನೇ ಧನ್ಯನೆಂದು ಹೇಳುತ್ತ ನಾನಾ ಬಗೆಯಿಂದ ಶ್ರೀ ರಾಮಚಂದ್ರನನ್ನು ಸ್ತುತಿಸಿದನು. ಸೀತೆಯೊಡನೆ ನಾನಾ ತರದ ಬಳುವಳಿಗಳನ್ನು ಸಮರ್ಪಿಸಿದನು. ರಥ, ದಂತಿ, ಹಯ, ಕಾಲಾಳು. ದಾಸದಾಸಿಯರು ಮೊದಲಾದ ಪರಿವಾರವನ್ನು ಕೊಟ್ಟು ಸಂತೋಷಗೊಳಿಸಿದನು. ಹಿರಿಯರಿಗೂ, ಕಿರಿಯರಿಗೂ ಮಡು ಮಕ್ಕಳಿಗೂ ಯಥೋಚಿತ ಉಡುಗೊರೆಯನ್ನು ಸಲ್ಲಿಸಿ ಕೃತಾರ್ಥನಾದನು. ಮಗಳಾದ ಸೀತೆಯನ್ನು ಕರೆದು ಆಕೆಗೆ ಪಾತಿವ್ರತ್ಯ ಧರ್ಮವನ್ನು ಬಿಡದೆ ನಿನ್ನ ಜೀವನ ಸಾಗಿಸು ಎಂದು ಉಪದೇಶಿಸಿದನು. ಅತ್ತೆ ಮಾವಂದಿರ ಸೇವೆ ಮಾಡು. ಪತಿಯೇ ಪರದೈವ ಎಂದು ತಿಳಿ. ಪುರಜನ ಪರಿಜನರನ್ನೆಲ್ಲ ಉತ್ತಮ ರೀತಿಯಿಂದ ನೋಡಿಕೋ ಈ ರೀತಿ ಉಪದೇಶಿಸಿದನು. ನಂತರ ಪುರಜನ ಪರಿಜನ ಸಹಿತವಾಗಿ ಸಕಲ ಸಂಭ್ರಮದಿಂದ ಮಕ್ಕಳನ್ನು ಅಯೋಧ್ಯಾ ಪಟ್ಟಣಕ್ಕೆ ಕಳುಹಿಸಿಕೊಟ್ಟನು ಎಂಬಲ್ಲಿಗೆ ಏಳನೆಯ ಸಂಧಿ ಮುಗಿಯಿತು.

**ಎಂಟನೆಯ ಸಂಧಿ :–** ಶಂಕರನು ತನ್ನ ಪತ್ನಿಯಾದ ಗಿರಿರಾಜ ಸುತೆಗೆ ಮುಂದಿನ ಕಥೆಯನ್ನು ವಿವರಿಸುವಂಥವನಾಗುತ್ತಾನೆ. ಪಾರ್ವತಿಯೇ ಮುಂದಿನ ಕಥೆಯನ್ನು ಕೇಳು.

ದಶರಥ ರಾಜನ ದಿಬ್ಬಣವು ಮದುವೆಯನ್ನು ಮುಗಿಸಿಕೊಂಡು ಶಂಖಭೇರೀ ಮೃದಂಗ ಮೊದಲಾದ ಮಂಗಳ ವಾದ್ಯಗಳ ಸಂಭ್ರಮೋತ್ಸಾಹಗಳಿಂದ ಮುಂದು ಮುಂದಕ್ಕೆ ಹೋಗುತ್ತಿರುವಾಗ ಅಮಂಗಲ ಸೂಚಕವಾದ ದುಃಶಕುನಗಳು ತಲೆದೋರಿದವು- ಆಗ ಭಯಭೀತನಾದ ದಶರಥನು ಇದರ ಬಗ್ಗೆ ಪುರೋಹಿತರಾದ ವಸಿಷ್ಠರನ್ನು ಕೇಳಿದನು. ದಶರಥನೇ ನಿನಗೆ ಭಯಬೇಡ ಹೆದರಬೇಡ ಇದರಿಂದ ಮುಂದೆ ನಿನಗೆ ಒಳ್ಳೆಯದೇ ಆಗುವದು. ಎಂದು ಹೇಳಿ ಸಮಾಧಾನಪಡಿಸುತ್ತಿರುವಾಗಲೇ ಬಿರುಗಾಳಿ ಬೀಸಿದಂತಾಯಿತು. ಕಣ್ಣುಗಳೆಲ್ಲ ಧೂಳಿಯಿಂದ ಮುಚ್ಚಿಕೊಂಡವು. ಇದೇ ಸಮಯದಲ್ಲಿಯೇ

ಕಾರ್ತವೀರ್ಯಾರ್ಜುನನನ್ನು ಸೋಲಿಸಿದ, ಭೃಗುಕುಲೋತ್ಪನ್ನನಾದ, ಜಟಿ ತ್ರಿಪುಂಡ್ರ ಮೊದಲಾದವುಗಳನ್ನು ಧರಿಸಿದ, ದಂಡ ಪರಶುಗಳನ್ನು ಧರಿಸಿದಂಥ ಪರಶುರಾಮನು ಎದುರಿಗೆ ಗೋಚರಿಸಿದನು. ಕಾಲಮೃತ್ಯುವಿನಂತೆ ಇದಿರಾಗಿ ಬಂದ ಪರಶುರಾಮನನ್ನು ಕಂಡು ದಶರಥನು ಸಕಲ ಸನ್ಮಾನದಿಂದ ಅರ್ಘ್ಯಪಾದ್ಯಾಗಿ ಉಪಚಾರಗಳಿಂದ ಸನ್ಮಾನಿಸಿದನು. ಆದರೂ ಶ್ರೀರಾಮನನ್ನು ನೋಡಿದ ಪರಶುರಾಮನು ದಶರಥನ ವಿನೀತಭಾವವನ್ನು ಮರೆತು ಆ ರಾಮನನ್ನೇ ಜರೆಯುತೊಡಗಿದ ಎಲೈ ರಾಮನೇ ನಾನೇ ಬಲಶಾಲಿ ಎಂದು ಕೊಂಡಾಡಬೇಡ | ನಾಮಮಾತ್ರನಾದ ನಿನಗೆ ಬಲವೆಲ್ಲಿಯದು ? ನನ್ನೊಡನೆ ದ್ವಂದ್ವಯುದ್ಧಕ್ಕೆ ಬಾ. ಸೆಣಸಾಡು ಎಂದು ಕರೆದನು. ಹಳೆಯ ಶೈವ ಧನುಸ್ಸನ್ನು ಮುರಿದ ಹೆಗ್ಗಳಿಕೆ ಬೇಡ. ನಾನು ಕೊಡುವ ಈ ವೈಷ್ಣವ ಧನುಸ್ಸಿನ ಹೆದೆಯೇರಿಸು. ಎಂದು ಆತನನ್ನು ಆಹ್ವಾನಿಸಿದನು. ಆಗ ಶ್ರೀ ರಾಮಚಂದ್ರನು ಮುಗುಳ್ನಗುತ್ತ ಪರಶುರಾಮನ ಕಡೆಯಿಂದ ಬಿಲ್ಲನ್ನು ಸ್ವೀಕರಿಸಿ ಹೆದೆಯೇರಿಸಿ ಬಾಣವನ್ನು ಸೆಳೆದು ಈ ರೀತಿ ಹೇಳಿದನು— ಗುರುವರ್ಯರೇ ಈ ಬಾಣಕ್ಕೆ ಗುರಿ ತೋರಿಸಿ. ಲೋಕಕ್ಕೆ ಬಿಡಬೇಕೋ ? ಅಥವಾ ನಿಮ್ಮ ಪಾದಕಮಲಗಳಿಗೋ ! ಅಥವಾ ಬರಿದೆಯೋ ? ಹೇಳಿರಿ ಎಂದು ಹೇಳಿದನು ರಾಮನ ಈ ಕೃತ್ಯವನ್ನು ನೋಡಿ ಪರಶುರಾಮನು ಬೆರಗಾದ. ಕೂಡಲೇ ತನ್ನ ಹಿಂದಿನ ಸಂಗತಿಯನ್ನು ಜ್ಞಾಪಿಸಿಕೊಂಡ. ಆ ಪರಮ ಪೂರುಷನೇ ರಘುನಾಥನಾಗಿದ್ದಾನೆ ರಾಕ್ಷಸರ ಸಂಹಾರಕ್ಕಾಗಿಯೇ ಹುಟ್ಟಿದ್ದಾನೆ. ಎಂದು ತಿಳಿದನು. ಹಿಂದೆ ಬಾಲ್ಯದಲ್ಲಿ ತಪವನ್ನಾಚರಿಸುತ್ತ ನಾರಾಯಣನ ಪದವನ್ನು ಧ್ಯಾನಿಸಿದಾಗ ಶಂಖ, ಚಕ್ರಗದಾಬ್ಜವನ್ನು ಧರಿಸಿದ ನಾರಾಯಣನು ಪ್ರತ್ಯಕ್ಷನಾದ ಎಲೈ ಬ್ರಾಹ್ಮಣನೇ ನೀನು ನನ್ನ ಅಂಶಸಂಭವ ನೀನು ಹೇಹಯ ರಾಜರನ್ನೆಲ್ಲ ಸದೆಬಡಿದು ಅಗ್ನಿಗಾಹುತಿ ಕೊಡು. ಕಾರ್ತವೀರ್ಯನನ್ನು ಸದೆ ಬಡಿ. ಇಪ್ಪತ್ತೊಂದು ಸಲ ಪೃಥ್ವಿಯನ್ನು ಸುತ್ತಿ ಕ್ಷತ್ರಿಯರನ್ನೆಲ್ಲ ನಾಶಪಡಿಸು. ನಾನು ತ್ರೇತಾಯುಗದಲ್ಲಿ ಸೂರ್ಯ ವಂಶದಲ್ಲಿ ದಶರಥನ ಮಗನಾಗಿ ಜನಿಸಿ ಬರುತ್ತೇನೆ. ನನ್ನ ಯೋಗಶಕ್ತಿಯಿಂದ ಪೃಥ್ವಿಯ ಭಾರವನ್ನು ನೀಗುತ್ತೇನೆ. ಆಗ ನೀನು ನನ್ನನ್ನು ಕಾಣಬಹುದು. ಎಂದು ಹೇಳಿದ್ದನು. ಆ ಪರಾತ್ಪರ ಬ್ರಹ್ಮನೇ ಈಗ ಶ್ರೀ ರಾಮನಾಗಿದ್ದಾನೆ. ರಾಮನೇ ನಿನ್ನ ದರ್ಶನದಿಂದ ನಾನು ಪಾವನನಾದೆ. ನನ್ನ ಜನ್ಮ ಸಫಲ

ವಾಯಿತು. ನಿನಗೆ ಜನನ ಮರಣಗಳಿಲ್ಲ. ಎಲ್ಲವುಗಳಿಗೂ ನೀನೇ ಕಾರಣ. ಚಿನುಮಯ ; ಪರಿಪೂರ್ಣ ; ನಿರ್ಮಲ ; ನಿರ್ವಿಕಾರ. ಆದರೆ ಮಾಯೆಯಿಂದ ಬೇರೆ ಬೇರೆಯಾಗಿ ಕಾಣುತ್ತೀ. ಈಗ ರಾಮನ ರೂಪದಿಂದ ಅವತರಿಸಿದ್ದೀ ವಿದ್ಯೆ ಅವಿದ್ಯೆಗಳೆರಡೂ ನಿನ್ನಲ್ಲಿವೆ. ನೀನೇ ಚೇತನಸ್ವರೂಪ. ಕರ್ತೃ ಭೋಕ್ತೃತ್ವ ಸ್ವರೂಪನೂ ನೀನೇ ಹೀಗೆ ಹಲವಾರು ವಿಧದಿಂದ ಆ ಶ್ರೀ ರಾಮನನ್ನು ಸ್ತುತಿಸಿದನು. ನೀನು ಸೂರ್ಯಪ್ರಕಾಶದ ಹಾಗೆ ನನಗೆ ಕರುಣೆಯನ್ನು ತೋರಿಸಲು ಬಂದಿದ್ದೀ. ನನ್ನನ್ನು ಪಾವನನನ್ನಾಗಿ ಮಾಡು ಎಂದು ಹೇಳಲು ನಿನ್ನಂತರಂಗದ ಚಿಂತಿತವನ್ನು ಸಲಿಸಿದ್ದೇನೆ. ನಾನೂ ನೀನೂ ಒಂದೇ. ಇದಕ್ಕೆ ಸಂಶಯುವೇ ಇಲ್ಲ. ಈಗ ನೀನು ನನ್ನ ಧ್ಯಾನ ನಿರತನಾಗಿ ಮಹೇಂದ್ರಪರ್ವತದಲ್ಲಿರು. ಎಂದು ಆಶ್ವಾಸಿಸಿ ಕಳುಹಿಸಿದನು. ಪರಶುರಾಮನ ನಿರ್ಗಮನದ ನಂತರ ದಶರಥನು ರಾಮನನ್ನು ಅತ್ಯಂತ ಆನಂದದಿಂದ ಬಿಗಿದಪ್ಪಿದನು. ನಂತರ ಅವರೆಲ್ಲರೂ ಅಯೋಧ್ಯೆಗೆ ಬಂದರು. ಅಯೋಧ್ಯಾಪಟ್ಟಣವು ನಾನಾ ಬಗೆಯಿಂದ, ರೀತಿಯಿಂದ ವಧೂ-ವರರ ಸ್ವಾಗತಕ್ಕಾಗಿ ಅಲಂಕರಿಸಲ್ಪಟ್ಟಿತು. ಜನರೆಲ್ಲರೂ ಶ್ರೀ ರಾಮನನ್ನು ಕುರಿತು ಜಯಜಯಕಾರ ಮಾಡಿದರು ರಾಮನನ್ನು ಸಂತೋಷದಿಂದ ಇದಿರುಗೊಂಡರು. ರಾಮ ಸೀತೆಯರನ್ನು ನೋಡಲು ಪುರಜನರೆಲ್ಲ ನಾಮುಂದೆ, ತಾಮುಂದೆ, ನಾಮೊದಲು, ನಾಮೊದಲು ಎಂದು ಮುಗಿಬಿದ್ದರು. ಎತ್ತರದ ಸ್ಥಳಗಳಲ್ಲೆಲ್ಲ ಏರಿ ರಾಮ ಸೀತೆಯರನ್ನು ಕಣ್ತುಂಬ ನೋಡಿ ಧನ್ಯರಾದರು. ಈ ರೀತಿ ಪ್ರಜೆಗಳಿಂದ ಪುರಸ್ಕೃತನಾಗಿ ಶ್ರೀ ರಾಮಚಂದ್ರನು ಪತ್ನಿಯೊಡಗೂಡಿ ಅಯೋಧ್ಯಾ ಪಟ್ಟಣವನ್ನು ಪ್ರವೇಶಿಸಿದನು. ಸೀತೆ ಸಹಿತ ಸಂತೋಷದಿಂದ ಇದ್ದನು. ಆ ಸಮಯದಲ್ಲಿ ಭರತನ ಮಾವನಾದ ಯುಧಾಜಿತನು ಬಂದು ಭರತ ಶತ್ರುಘ್ನರನ್ನು ತನ್ನ ಮನೆಗೆ (ಕೇಕೆಯ ರಾಜ್ಯಕ್ಕೆ) ಕರಕೊಂಡು ಹೋದನು. ಇತ್ತ ರಾಮನು ಸೀತೆಯೊಡಗೂಡಿ ತಾಯಿ ಕೌಸಲೆ ತಂದೆ ದಶರಥ ಇವರಿಗೆ ಮುದವನ್ನು ನೀಡುತ್ತ ಅತ್ಯಂತ ಸಂತೋಷದಿಂದ ಅಯೋಧ್ಯಾ ಪಟ್ಟಣದಲ್ಲಿದ್ದನು ಎಂಬಲ್ಲಿಗೆ ಎಂಟನೆಯ ಸಂಧಿ ಮುಗಿಯಿತು.

ರಾಮಾಯಣದಲ್ಲಿಯ ಬಾಲಕಾಂಡದ ವರ್ಣನೆಯು ಮುಕ್ತಾಯಗೊಂಡಿತು.

# ಅಯೋಧ್ಯಾಕಾಂಡ

**ಒಂಭತ್ತನೆಯ ಸಂಧಿ** :- ಎಲೈ ಗಿರಿರಾಜಸುತೆಯೇ ಮುಂದಿನ ಕಥಾಭಾಗದ ವಿವರವನ್ನು ಕೇಳುವಂಥವಳಾಗು. ಲಕ್ಷ್ಯಗೊಟ್ಟು ಕೇಳುವ-ವಳಾಗು.

ದಶರಥ ಮಹಾರಾಜನು ರಾಮನ ಕ್ಷೇಮಾಭ್ಯುದಯುವನ್ನೇ ಬಯಸುತ್ತ ತನ್ನ ಮಂತ್ರಿಜನ ಪರಿಜನ, ಪೌರಜನ ಮೊದಲಾದವರೊಂದಿಗೆ ಸುಖದಿಂದ ಇದ್ದನು ಹೀಗೆ ಇರುವಾಗ ಶ್ರೀ ರಾಮಚಂದ್ರನಾದರೋ ಅರಮನೆಯಲ್ಲಿ ಸುಖದಿಂದ ದಿನಕಳೆಯುತ್ತಿದ್ದನು. ಆ ಮನಮೋಹಕನಾದ ಶ್ರೀ ರಾಮಚಂದ್ರನ ವರ್ಣನೆ ಮಾಡಿದಷ್ಟೂ ಕಡಿಮೆಯೇ ! ಸುಂದರಾಂಗ, ಉತ್ತಮವಾದ ದಂತಪಂಕ್ತಿ, ವಿಶಾಲವಾದ ಹೃದಯ ಪ್ರದೇಶ; ಕುತ್ತಿಗೆಯಲ್ಲಿ ವೈಜಯಂತೀ ಮಾಲೆ; ನೀಳವಾದ ತೊಡೆ ತೋಳುಗಳು ಇತ್ಯಾದಿಯಾಗಿ ಸರ್ವಾಂಗ ಸುಂದರನಾಗಿ ಶೋಭಿಸುತ್ತಿದ್ದ ಆ ಶ್ರೀ ರಾಮಚಂದ್ರ. ಆತ ತನ್ನ ಸತಿಯಾದ ಸೀತಾದೇವಿಯೊಡನೆ ಸುಖದಿಂದ ಇರುತ್ತಿದ್ದನು. ಈ ರೀತಿ ದಿನಗಳು ಕಳೆಯುತ್ತಿರಲಾಗಿ ಒಂದು ದಿನ ನಾರದ ಮಹರ್ಷಿಯು ಅಯೋಧ್ಯಾ ಪಟ್ಟಣಕ್ಕೆ ಬರುವಂಥವನಾದನು. ತನ್ನ ಮಹತೀ ವೀಣೆಯನ್ನು ಸುಶ್ರಾವ್ಯವಾಗಿ ಬಾರಿಸುತ್ತ ಬರುವ ನಾರದರನ್ನು ಕಂಡು ಶ್ರೀ ರಾಮಚಂದ್ರನು ಕುಳಿತಲ್ಲಿಂದ ಧಿಗಿಲನೆ ಎದ್ದು ಬಂದು ಆಸನವನ್ನಿತ್ತು ಅರ್ಘ್ಯಪಾದ್ಯಾದಿ ಷೋಡಶೋಪ ಚಾರಗಳಿಂದ ಆ ನಾರದರನ್ನು ಸತ್ಕರಿಸಿದನು. ಆ ಸತ್ಕಾರವನ್ನು ಸ್ವೀಕರಿಸಿದ ನಾರದರೂ ಕೂಡ ಆ ಶ್ರೀ ರಾಮಚಂದ್ರನನ್ನು ಅನೇಕ ಪ್ರಕಾರವಾದ ರೀತಿಯಿಂದ ಸ್ತುತಿಸತೊಡಗಿದನು. ಹೇ ದೇವ ನಿನ್ನ ಪದದರುಶನವು ದುರ್ಲ-ಭವು. ನನ್ನ ಪೂರ್ವಜನ್ಮದ ಸುಕೃತದಿಂದಲೇ ನಿನ್ನ ದರ್ಶನವಾಯಿತು. ಈ ಸಂಸಾರದಲ್ಲಿ ಬಿದ್ದು ತೊಳಲುವವರಿಗೆ ನೀನೇ ದಾರಿದೀಪ. ಸಕಲರಿಗೂ ನಿನ್ನ ದರ್ಶನ ಸುಖಕಾರಕ ಎಂದು ಹೊಗಳಿ ಹಾಡಿ ಹರಸಿದನು. ಆಗ ಶ್ರೀ ರಾಮಚಂದ್ರನು ಅದನ್ನೆಲ್ಲ ಮುಗುಳುನಗೆಯಿಂದ ಸ್ವೀಕರಿಸಿ ಬಂದ ಕಾರ್ಯಾಕಾರಣವನ್ನು ವಿಚಾರಿಸಿದನು. ಆದರೂ ನಾರದನು ಹೊಗಳುವದನ್ನು ಬಿಡಲಿಲ್ಲ. ಜಗಕ್ಕೆ ಆದಿಕಾರಣಳಾದ ಮಾಯಾದೇವಿ ನಿನ್ನ ಅಧೀನಳು. ಸತ್ವರಜ ತಮೋಗುಣಗಳನ್ನು ಪಡೆದು ಈ ಸಂಸಾರವನ್ನು ನಡೆಸುವಳು.

ಸಕಲ ಲೋಕಗಳನ್ನೇ ಈ ತ್ರಿಗುಣಗಳು ಆವರಿಸಿವೆ. ರಾಮನೇ ನೀನು ಬ್ರಹ್ಮ ಸೀತೆ ವಾಣಿ; ನೀನು ಶಿವ ಸೀತೆ ಪಾರ್ವತಿ; ನೀನು ಚಂದ್ರ ಸೀತೆ ರೋಹಿಣಿ; ನೀನು ರವಿ ಸೀತೆ ಪ್ರಭೆ; ನೀನು ಇಂದ್ರ ಸೀತೆ ಶುಚೀದೇವಿ; ನೀನು ಅಗ್ನಿ ಸೀತೆ ಸ್ವಾಹಾದೇವಿ; ನೀನು ಯಮ ಸೀತೆ ಸಂಯಮಿ ಹೀಗೆ ಹೇಳುತ್ತ ಪುರುಷ ಪದವಾದವೆಲ್ಲವೂ ನೀನು ಸ್ತ್ರೀಪದವಾದ ವಸ್ತುಗಳೆಲ್ಲವೂ ಸೀತೆ. ಈಗ ಪುರುಷ ಪ್ರಕೃತಿಯರ ರೂಪವಲ್ಲಿ ಜನಿಸಿ ಈ ಸಂಸಾರವನ್ನು ಪಡೆದಿದ್ದೀರಿ. ಜಾಗರಣ, ಸುಷುಪ್ತಿ, ಸ್ಥೂಲ ಸೂಕ್ಷ್ಮ, ಪಂಚಭೂತ, ಪಂಚಪ್ರಾಣ. ಸುಖದುಃಖ, ಮೊದಲಾದವೆಲ್ಲವೂ ನೀನೇ. ಹೆಚ್ಚಿಗೆ ಇನ್ನೇನು ಹೇಳಲಿ? ಸಕಲವೂ ನೀನೇ ಆಗಿದ್ದೀ. ನಿನ್ನ ನಾಮವೇ ಸಕಲರಿಗೂ ತಾರಕವಾದದ್ದು ಎಂದು ಹೇಳುತ್ತ ಹಲವು ವಿಧದಿಂದ ಸ್ತುತಿಸಿದ ನಂತರ ಆ ಬ್ರಹ್ಮದೇವರು ತನಗೆ ವಹಿಸಿಕೊಟ್ಟ ಕಾರ್ಯವನ್ನು ರಾಮನಿಗೆ ನಿವೇದಿಸುವಂಥವನಾದನು.

ಆದಿಪುರುಷನೇ ನೀನು ಲೋಕ ಕಂಟಕರಾದ ರಾವಣಾದಿಗಳನ್ನು ವಧಿಸಲು ಶ್ರೀ ರಾಮಚಂದ್ರನಾಗಿ ಜನಿಸಿದ್ದೀ. ಭೂಭಾರ ಹರಣಾರ್ಥವಾಗಿಯೂ, ದೇವತೆಗಳನ್ನು ರಕ್ಷಿಸುವದಕ್ಕಾಗಿಯೂ ನೀನು ರಾಮನಾಗಿ ಬಂದಿದ್ದೀ. ನಾಳೆ ದಶರಥನು ನಿನಗೆ ಪಟ್ಟಾಭಿಷೇಕ ಮಹೋತ್ಸವವನ್ನು ಜರುಗಿಸಲು ನಿಶ್ಚಯಿಸಿದ್ದಾನೆ. ಒಂದು ವೇಳೆ ನೀನು ಪಟ್ಟಾಭಿಷಿಕ್ತನಾದರೆ ಆ ರಾಕ್ಷಸರನ್ನೆಲ್ಲ ಸಂಹರಿಸುವವರು ಯಾರು? ಶಿಷ್ಟರಿಗೆ ರಕ್ಷಕರಾರು? ಬ್ರಹ್ಮನೇ ಮೊದಲಾದ ದೇವತೆಗಳಿಗೆ ಕೊಟ್ಟ ಮಾತೇನು? ಇದಕ್ಕೆಲ್ಲ ನೀನೇ ಉಪಾಯವನ್ನು ಬಲ್ಲೆ! ಅತ್ಯಂತ ಸಲುಗೆಯಿಂದ ನಾನು ಈ ಮಾತನ್ನು ಆಡಿದ್ದೇನೆ. ಎನ್ನಲು ಶ್ರೀ ರಾಮಚಂದ್ರನು ಹೇಳಿದ್ದೇನೆಂದರೆ ನನಗೆ ಎಲ್ಲವೂ ನೆನಪಿನಲ್ಲಿದೆ. ನನ್ನ ಪ್ರತಿಜ್ಞೆ ಸತ್ಯ ಪ್ರತಿಜ್ಞೆ. ದನುಜರಿಗೆ ಪ್ರಾರಬ್ಧ ತೀರಿಬಂದಿದೆ. ಪ್ರಾರಬ್ಧವಳಿಯದೇ ಸಾವು ಉಂಟಾಗಲಾರದು. ದುಷ್ಟ ರಾವಣನನ್ನು ವಧಿಸಲು ತಾಪಸರ ವೇಷವನ್ನು ಧರಿಸಿ ನಾಳೆಯೇ ನಾನು ದಂಡಕಾರಣ್ಯಕ್ಕೆ ಹೋಗುವೆ. ಹದಿನಾಲ್ಕು ವರುಷ ಅಲ್ಲಿದ್ದು ಎಲ್ಲಾ ರಾಕ್ಷಸರನ್ನು ನಾಶಮಾಡಿ ಸರ್ವರಿಗೂ ಒಳ್ಳೆಯದನ್ನು ಮಾಡುತ್ತೇನೆ. ಈ ಮಾತನ್ನು ಕೇಳಿದ ನಾರದರು ಅತ್ಯಂತ ಸಂತೋಷದಿಂದ ದಿವವನ್ನಡರಿದನು

ಯಾರು ನಾರದ.ರಾಮ ಇವರ ಸಂವಾದವನ್ನು ಕೇಳುತ್ತಾರೋ ಶ್ರದ್ಧೆಯಿಂದ ಕೇಳಿಸುತ್ತಾರೋ ಅವರು ಮೋಕ್ಷವನ್ನು ಪಡೆಯುವರು ಎಂಬಲ್ಲಿಗೆ ಒಂಭತ್ತನೆಯ ಸಂಧಿ ಮುಕ್ತಾಯಗೊಂಡಿತು.

ಹತ್ತನೆಯ ಸಂಧಿ :- ಎಲೈ ಗಿರಿರಾಜಸುತೆಯೇ ಅತ್ಯಂತ ಕುತೂಹಲಕರವಾದ ಮುಂದಿನ ಕಥಾಭಾಗವನ್ನು ಕೇಳುವಂಥವಳಾಗು.

ದಶರಥ ಮಹಾರಾಜನು ಒಂದು ದಿನ ತನ್ನ ಕುಲಗುರುಗಳಾದ ವಸಿಷ್ಠ ಮಹರ್ಷಿಯನ್ನು ಕರೆಸಿ ಬಿನ್ನ ಮಾಡಿದನು. ರಘುರಾಮ ಹಿರಿಯ ಕುಮಾರ. ಅವನಿಗೆ ಪಟ್ಟಗಟ್ಟಬೇಕು. ನಾನು ವೃದ್ಧನಾದೆ. ಇದಲ್ಲದೆ ಈತನು ಸಕಲಧರ್ಮರಹಸ್ಯವನ್ನು ಅರಿತಿದ್ದಾನೆ. ಎಲ್ಲರಿಗಿಂತಲೂ ಮಿಗಿಲಾಗಿದ್ದಾನೆ. ಈತನಿಗೆ ಪಟ್ಟಕಟ್ಟುವದು ಎಲ್ಲ ಪೌರರಿಗೂ ಸಮ್ಮತವಾಗಿದೆ. ಆದುದರಿಂದ ಈ ಸುಕಾರ್ಯ ಬೇಗನೆ ಜರುಗಲಿ ಎಂದು ಆದೇಶಿಸಿದ. ನೀವೇ ನಿಂತು ಎಲ್ಲಾ ಕಾರ್ಯಗಳನ್ನು ನೆರವೇರಿಸಬೇಕು ಎಂದನು. ಪುರಗಳನ್ನೆಲ್ಲ ಶೃಂಗರಿಸಲು ತನ್ನ ಮಂತ್ರಿ ಸುಮಂತನಿಗೆ ಆಜ್ಞಾಪಿಸಿದ. ಆತನೆಂದಂತೆ ಪಟ್ಟಾಭಿಷೇಕದ ತಯಾರಿ ನಡೆಯಿತು. ಸಂಭ್ರಮವಾದ ಸನ್ನಾಹ ನಡೆಯಿತು. ಪ್ರತಿಯೊಬ್ಬರೂ ಅತ್ಯಂತ ಆನಂದದಿಂದ, ಸಂತೋಷದಿಂದ ಪ್ರತಿಯೊಂದು ಕೆಲಸ ಕಾರ್ಯಗಳನ್ನೆಲ್ಲ ತ್ವರಿತದಿಂದ ನೆರವೇರಿಸುತ್ತಿದ್ದರು. ಎಲ್ಲ ಕಡೆಗಳಲ್ಲೂ ಮಂಗಳ ಘೋಷ ಮೊಳಗುತ್ತಿರಬೇಕು. ಉತ್ತಮರು ಬಂದಿರಬೇಕು ಪ್ರತಿ-ಯೊಬ್ಬರೂ ಸಂತೋಷ ಸಂಭ್ರಮದಿಂದ ಇರಬೇಕು. ಸ್ತ್ರೀಯರು ಮಂಗಳಕರವಾದ ಹಾಡುಗಳನ್ನು ಹಾಡುತ್ತಿರಬೇಕು. ಇತ್ಯಾದಿಯಾಗಿ ಪ್ರತಿಯೊಂದು ವಿಷಯದಲ್ಲೂ ಇಡೀ ಪಟ್ಟಣಕ್ಕೆ ಪಟ್ಟಣವೇ ಸಂಭ್ರಮದಲ್ಲಿರಬೇಕು.

ಇತ್ತ ವಸಿಷ್ಠನು ಮುಂದಿನ ಕಾರ್ಯಕ್ಕಾಗಿ ರಾಮನ ಅರಮನೆಗೆ ಬಂದನು. ಬರುತ್ತಿರುವವಸಿಷ್ಠರನ್ನು ಕಂಡು ರಾಮನು ಗೌರವದಿಂದ ಅವರನ್ನು ಇದಿರುಗೊಂಡನು. ಪಾದತೊಳೆದು ಪಾದೋದಕವನ್ನು ಶಿರದಲ್ಲಿ ಧರಿಸಿದನು. ನಿಮ್ಮ ಪಾದೋದಕ ಧರಿಸಿದ ನಾನು ನಿಜವಾಗಿಯೂ ಧನ್ಯ ಎಂದು ಹೇಳಿದನು. ಇದನ್ನು ಕೇಳಿದ ವಸಿಷ್ಠನು ನೀನೇ ಪರಮಾತ್ಮನು ಮಾನವಾಕೃತಿಯನ್ನು ಧರಿಸಿ ಭಕ್ತರ ಅಭೀಷ್ಟವನ್ನು ಸಲಿಸಲೋಸುಗ ಈ ಧರೆಗೆ

ಬಂದಿದ್ದೀ. ರಾವಣಾದಿ ರಾಕ್ಷಸರನ್ನು ವಧಿಸಲು ನೀನು ಈ ಶರೀರವನ್ನು ಧರಿಸಿರುವಿ. ನೀನೇ ನಮಗೆ ಗುರು. ನೀನು ನರಶರೀರದಿಂದ ನಿನ್ನ ಲೀಲೆಯನ್ನು ತೋರಿಸುತ್ತಿದ್ದೀ. ಕಮಲಸಂಭವ ಹೇಳಿದ ಮಾತು ಈಗ ನಿಜವಾಗತೊಡಗಿದೆ. ರಾಮನೆಂಬ ಹೆಸರಿನಿಂದ ಪರಮಾತ್ಮನು ಜನಿಸುತ್ತಾನೆ. ಅಂದಿನಿಂದಲೇ ನಿನ್ನ ಬರವನ್ನು ಹಾರೈಸುತ್ತಿದ್ದೆ. ನಿನ್ನನ್ನು ನೋಡಿದ ನಾನು ಇಂದಿಗೆ ಧನ್ಯನಾದೆ ! ನಿನ್ನ ಮಾಯಾ ಶಕ್ತಿ ಅತ್ಯಂತ ಮೋಹಿಪಳು ಆಗಿದ್ದಾಳೆ. ಎಂದಾಗ ಶ್ರೀ ರಾಮಚಂದ್ರನು ವಸಿಷ್ಠರನ್ನು ಕೇಳಿಕೊಳ್ಳುತ್ತಾನೆ.— ಈ ಗೌಪ್ಯ ನಿಮ್ಮಲ್ಲಿಯೇ ಇರಲಿ ಇತ್ಯಾದಿ. ವಸಿಷ್ಠರು ಹೇಳುತ್ತಾರೆ— ಭೂಮಿಪತಿ ದಶರಥನ ಆಜ್ಞಾನುಸಾರವಾಗಿ ನಾನು ಇಲ್ಲಿಗೆ ಬಂದಿದ್ದೇನೆ. ನೀನು ಈ ಹೊತ್ತು ಸೀತೆಯೊಂದಿಗೆ ಶಾಸ್ತ್ರೋಕ್ತ ವಿಧಿಯಲ್ಲಿರಬೇಕು. ಎಂದು ಮುಂತಾದ ವಿಧಿ ವಿಧಾನಗಳನ್ನೆಲ್ಲ ಹೇಳಿ ಅಲ್ಲಿಂದ ಹೊರಟರು. ಗುರುಗಳ ಆಜ್ಞಾನುಸಾರವಾಗಿ ನಡೆಯಬೇಕು. ಎಂದು ತಮ್ಮ ಲಕ್ಷ್ಮಣನಿಗೂ ತಿಳಿಸಿದನು. ದೂತರು ಕೌಸಲ್ಯೆ ಸುಮಿತ್ರೆಯರಿಗೆ ಈ ಸಮಾಚಾರವನ್ನು ತಿಳಿಸಿದರು. ಅವರು ಹರುಷದಿಂದ ದೂತರಿಗೆ ನಾನಾತರದ ಹಾರಗಳನ್ನು ಉಡುಗೊರೆ ಯಾಗಿತ್ತರು. ಅವರು ರಾಮನಿಗೆ ಒಳ್ಳೆಯದಾಗುವದಕ್ಕಾಗಿ ದುರ್ಗಾಪೂಜೆ-ಯನ್ನು ಕೂಡ ಮಾಡಿದರು.

ಇತ್ತ ದೇವತೆಗಳು ವಾಣಿಯನ್ನು ಅಯೋಧ್ಯಾ ಪಟ್ಟಣಕ್ಕೆ ಬ್ರಹ್ಮ ಶಾಸನದಂತೆ ಕಳುಹಿದರು. ನೀನು ಮಂಥರೆಯಲ್ಲಿ ಸೇರಿ ಕೈಕೆಯ ಮುಖಾಂತರವಾಗಿ ರಾಮನ ಪಟ್ಟಕ್ಕೆ ವಿಘ್ನವನ್ನೆಸಗು. ಅಂತೆಯೇ ವಾಣಿಯು ಮಂಥರೆಯಲ್ಲಿ ಪ್ರವೇಶಿಸಿ ಕುಬ್ಜೆಯಾದಳು. ಪುರವೈಭವವನ್ನು ನೋಡಿದ ಆಕೆ ದಾಸಿಯನ್ನು ಕರೆದು ಈ ವೈಭವವೆಲ್ಲ ಯಾಕೆ ಎಂದು ಕೇಳುವಂಥವ-ಳಾದಳು. ದಾಸಿಯು ಹೇಳಿದಳು- ನಾಳೆ ಶ್ರೀ ರಾಮಚಂದ್ರನಿಗೆ ಪಟ್ಟಾಭಿಷೇಕ ಆ ಕಾರಣಕ್ಕಾಗಿಯೇ ಈ ಪುರಶೃಂಗಾರ, ಇದನ್ನು ಕೇಳಿಸಿಕೊಂಡ ಕುಬ್ಜೆಯು ಕೂಡಲೇ ಕೈಕೆಯ ಗೃಹಕ್ಕೆ ನಡೆತಂದಳು. ಕೈಕೆ ಏಕಾಂತದಲ್ಲಿ ಕುಳಿತಿರುವಾಗ -ಎಲೈಮೂರ್ಖೇ ! ಕಾರ್ಯಾಕಾರಣವರಿಯದೇ ಮೂಢೆಯಂತೆ ಯಾಕೆ ಬಿದ್ದೀಯೇ ? ಎದ್ದೇಳು ! ಎದ್ದೇಳು !! ನಿನಗೆ ಬುದ್ಧಿಯೇ ಇಲ್ಲ !!! ಎಂದು ಹೇಳಿದಳಲ್ಲದೇ ನಾಳೆಯೇ ಶ್ರೀ ರಾಮಚಂದ್ರನಿಗೆ ಪಟ್ಟಾಭಿಷೇಕ, ಎಂದಳು.

ಈ ಮಾತನ್ನು ಕೇಳಿದ ಕೈಕೆ ಸಂತೋಷದಿಂದ ತನ್ನ ಕೊರಳ ಹಾರವನ್ನು ತೆಗೆದು ಕಾಣಿಕೆಯಾಗಿ ಆಕೆಗೆ ನೀಡಿದಳು. ರಾಮನು ನನಗೆ ಭರತನಿಗಿಂತಲೂ ಹೆಚ್ಚು ಪ್ರಿಯನು. ನನಗೆ ರಾಮನ ಭಯವೇ ಇಲ್ಲ ಎಂದಳು. ಅದನ್ನು ಕೇಳಿದ ಕುಬ್ಜೆ ಸಿಟ್ಟಿನಿಂದ ಈ ಮಾತನ್ನು ನುಡಿದಳು – ರಾಮನಿಂದಲೇ ನಿನಗೆ ಕೇಡು. ಆ ದಶರಥ ಮಾತಿನ ಮೋಡಿಯಿಂದಲೇ ನಿನ್ನನು ಮೋಹಿಸಿದ್ದಾನೆ. ನಿನ್ನನ್ನು ವಂಚಿಸಿದ್ದಾನೆ. ಭರತನನ್ನು ಅತ್ತ ಮಾವನ ಮನೆಗೆ ಕಳುಹಿಸಿ ಇತ್ತ ಶ್ರೀ ರಾಮಚಂದ್ರನಿಗೆ ಪಟ್ಟವೆಸಗುತ್ತಿದ್ದಾನೆ. ಲಕ್ಷ್ಮಣ ಅವನನ್ನು ಓಲೈಸುತ್ತಿದ್ದಾನೆ. ಕೌಸಲ್ಯೆ ಸುಮಿತ್ರೆಯರಿಗೆ ಸಂತೋಷವೇ ಸಂತೋಷ !!! ಆ ದಶರಥನಿಗೆ ಭರತನಿಗೆ ಒಳ್ಳೆಯದನ್ನು ಮಾಡುವ ಇಚ್ಛೆಯಿದ್ದುದಾದರೆ ಅವನನ್ನು ಇಲ್ಲಿಯೇ ಇಟ್ಟುಕೊಳ್ಳುತ್ತಿದ್ದನಲ್ಲವೇ ? ಇನ್ನು ಮೇಲೆ ನೀನು ಕೌಸಲ್ಯೆಯ ಪರಿಚರ್ಯೆಯನ್ನು ಮಾಡುತ್ತ ದಾಸಿಯಾಗಿ ಬಿದ್ದಿರು. ನಿನ್ನ ಬಾಳುವೆಯನ್ನು ಬದುಕನ್ನು ಸುಡು ! ಸುಡು !! ನಿನ್ನ ಬುದ್ಧಿಗಿಷ್ಟು ಮಂಕು ಕವಿಯಿತು. ಇದಕ್ಕೆ ಉಪಾಯವನ್ನು ನನ್ನಿಂದ ಕೇಳು. ಹೇಳುತ್ತೇನೆ. ಭರತನನ್ನು ಬೇಗ ಕರೆಸು. ಅವನಿಗೆ ಪಟ್ಟವಾಗಲಿ. ರಾಮ ಹದಿನಾಲ್ಕು ವರುಷ ವನದಲ್ಲಿರಲಿ. ನಿನಗೆ ಯುಕ್ತಿಯನ್ನು ಹೇಳುತ್ತೇನೆ ಎಂದು ಈ ಹಿಂದೆ ದೇವಾಸುರರ ಯುದ್ಧದಲ್ಲಿ ದಶರಥನು ಕೊಟ್ಟ ವರಗಳೆರಡನ್ನು ನೆನಪು ಮಾಡಿದಳು. ನೀನು ಬೇಕಾದಾಗ ತೆಗೆದುಕೊಳ್ಳುತ್ತೇನೆ ಎಂದು ಮಾತು ಕೊಟ್ಟೆ. ಈಗ ಸರಿಯಾದ ಸಮಯ. ವರಗಳನ್ನು ಕೇಳು. ಕೂಡಲೇ ಕೋಪಾಗಾರವನ್ನು ಸೇರು, ದುಃಖವನ್ನು ತಾಳು. ಆಭರಣಗಳನ್ನೆಲ್ಲ ಅತ್ತಿತ್ತ ಬೀಸಾಡು. ಆ ಎರಡು ವರಗಳನ್ನು ಕೊಡುವಲ್ಲಿಯ ತನಕವೂ ರಾಜನನ್ನು ಬಿಡಬೇಡ. ಎಂದು ನಾನಾವಿಧವಾಗಿ ಉಪದೇಶಿಸಿದಳು. ದೈವವಶೆಯಾದ ಕೈಕೆಯು ಕುಬ್ಜೆಯ ಸಂಸರ್ಗದಿಂದ ದುರ್ನಯಾಂಗನೆಯಾದಳು. ಭರತನಿಗೆ ರಾಜ್ಯವಾದರೆ ನಿನಗೆ ಒಂದುನೂರು ಗ್ರಾಮಗಳನ್ನು ಉಂಬಳಿಯಾಗಿ ಕೊಡುವೆ ಎಂದು ಆಕೆಗೆ ಹೇಳಿ ಕೂಡಲೇ ಕೋಪಮಂದಿರವನ್ನು ಪ್ರವೇಶಿಸಿದಳು. ದುಃಸಂಗವು ಯಾರನ್ನು ಕೆಡಿಸದೇ ಇರದು ? ನೀತಿವಂತನಾಗಿರಲಿ, ಉದಾರ ಗುಣದವನಾಗಿರಲಿ, ವಿಚಾರಪರನಿರಲಿ ಯಾವನನ್ನೇ ಆದರೂ ಕೆಡಿಸುತ್ತದೆ. ದುರ್ಜನರು ಪ್ರತಿಯೊಬ್ಬರನ್ನೂ

ತಮ್ಮಂತೆ ಮಾಡುತ್ತಾರೆ. ಆದುದರಿಂದ ದುಷ್ಟರ ಸಂಸರ್ಗ ಮಾಡಬಾರದು. ಯಾವ ಕಾಲಕ್ಕೂ ಇದು ಸತ್ಯ. ದಯಾ, ದಾಕ್ಷಿಣ್ಯ, ಸದ್ಗುಣ, ಕುಲಾಚಾರ, ಶಮ, ದಮ, ಪಾಪಭಯ, ಅಕ್ರೋಧ ವೈರಾಗ್ಯ,ನಿತ್ಯಕರ್ಮ, ಮೃದುನುಡಿ ಮೊದಲಾದವನ್ನು ಸಜ್ಜನರು ಎಂದೂ ಬಿಡಬಾರದು ಎಂಬಲ್ಲಿಗೆ ಹತ್ತನೆಯ ಸಂಧಿಯು ಪೂರ್ಣಗೊಳ್ಳುತ್ತದೆ.

ಹನ್ನೊಂದನೆಯ ಸಂಧಿ :- ಎಲೈ ಪಾರ್ವತಿಯೇ ಮುಂದಿನ ಕಥೆಯನ್ನು ಸಾವಧಾನದಿಂದ ಆಲಿಸುವವಳಾಗು. ದಶರಥ ತನ್ನ ಪ್ರೀತಿಯ ಪತ್ನಿಯಾದ ಕೈಕೈಗೆ ಆಕೆಯ ಇಚ್ಛಿತವನ್ನು ಸಲಿಸಿ ತನ್ನ ಕೇಡನ್ನು ತಂದು ಕೊಂಡದ್ದರ ವಿವರವನ್ನು ಕೇಳುವಂಥವಳಾಗು.

ಹೀಗೆ ರಾಮಪಟ್ಟಾಭಿಷೇಕದ ಕಾರ್ಯವು ವಿಜೃಂಭಣೆಯಿಂದ ಸಾಗುತ್ತಿರಲು, ಈ ಸಂಭ್ರಮದಲ್ಲಿ ಕೈಕೆಯು ಪಾಲ್ಗೊಳ್ಳದಿರುವದನ್ನು ಕಂಡು ದಶರಥನು ಚಿಂತಾಕ್ರಾಂತನಾದನು. ಪ್ರಾಣವಲ್ಲಭೆಯಾದ ಈಕೆ ಯಾಕೆ ಬರಲಿಲ್ಲ ? ಎಂದು ಚಿಂತಿಸಿದನು. ದಾಸಿಯರನ್ನು ವಿಚಾರಿಸಲಾಗಿ ಆಕೆ ಕ್ರೋಧಾಗಾರದಲ್ಲಿರುವಳು ಎಂಬ ವಿಚಾರ ತಿಳಿದುಬಂತು. ಈ ವಿಷಯವನ್ನು ತಿಳಿದು ಭಯಭ್ರಾಂತನಾದ ದಶರಥನು ಕೂಡಲೇ ಕೈಕಾ-ದೇವಿಯಿದ್ದಲ್ಲಿಗೆ ತೆರಳಿದನು. ನೆಲದಲ್ಲಿ ಬಿದ್ದು ಹೊರಳಾಡುತ್ತಿರುವ ಆಕೆಯನ್ನು ಕಂಡು ಇದೇನು ನಿನ್ನ ವೇಷ ಭೂಷಣ ! ಯಾಕೆ ಈ ರೀತಿ ಹೊರಳಾಡು-ತ್ತಿರುವೆ ? ಹೇಳು ನಿನ್ನ ವಾಂಛಿತವೇನು ? ಹೇಳು ಎಂದನು. ಸ್ತ್ರೀಯರೋ ಪುರುಷರೋ ಯಾರಿಂದ ನಿನಗೇನು ಸಂಭವಿಸಿತು ? ಹೇಳು ಎಂದು ಪರಿಪರಿಯಾಗಿ ಸಾಂತ್ವನಗೊಳಿಸಿದನು. ನಿನ್ನ ಪ್ರಿಯರಿಗೆ ಏನು ಬೇಕೋ ಅದನ್ನು ಕೊಡುವೆ. ನಾನು ಸತ್ಯ ಪ್ರತಿಜ್ಞ. ರಾಮನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಿನಗೇನಾಗಬೇಕೆಂದು ತಿಳಿಸು. ಎಂದು ಕೇಳಲಾಗಿ ಆಕೆ ದಶರಥನೊಂದಿಗೆ ಈ ರೀತಿ ಹೇಳಿದಳು. ಸತ್ಯವಂತನಾಗಿದ್ದರೆ ಪ್ರತಿಜ್ಞಾ ಪಾಲಕನಾಗಿದ್ದರೆ ನೀನು ನಾನು ಕೇಳಿದ ವರವನ್ನು ಸಲಿಸುವವನಾಗು. ಈ ಹಿಂದೆ ದೇವಾಸುರರ ಯುದ್ಧದಲ್ಲಿ ನೀನು ನನಗೆ ಎರಡು ವರವನ್ನು ದಯಪಾಲಿಸಿದ್ದೆ. ಅವನ್ನೇ ಈಗ ಕೊಡುವವನಾಗು. ಮೊದಲನೆಯ ವರದಿಂದ ಭರತನಿಗೆ ಅಯೋಧ್ಯಾ ರಾಜ್ಯದ ಪಟ್ಟವನ್ನು ಕಟ್ಟು ಎರಡನೇ ವರದಿಂದ

ಶ್ರೀ ರಾಮಚಂದ್ರನನ್ನು ಹದಿನಾಲ್ಕು ವರ್ಷಗಳ ವರೆಗೆ ವನವಾಸಕ್ಕೆ ಅಟ್ಟು (ಕಳುಹಿಸು) ನಾಳೆ ಬೆಳಗಿನ ಹೊತ್ತಿನಲ್ಲಿಯೇ ರಾಮನು ವನವಾಸಕ್ಕೆ ಹೋಗದಿದ್ದರೆ ನಾನು ನನ್ನ ಪ್ರಾಣ ಕಳೆದುಕೊಳ್ಳುವೆನು. ಈ ವಾಕ್ಯ-ಗಳನು ಕೇಳಿದ ದಶರಥನು ಬುಡವನ್ನು ಕಡಿದು ಕೆಡಹಿದ ಬಾಳೆಯಂತೆ ಧೊಪ್ಪನೆ ಭೂಮಿಯ ಮೇಲೆ ಬಿದ್ದು ರೋದಿಸತೊಡಗಿದನು. ಮೂರ್ಛಾ ಪನ್ನನಾದ ದಶರಥನು ಕೆಲಸಮಯದಲ್ಲಿಯೇ ಮೂರ್ಛೆಯಿಂದ ಎಚ್ಚತ್ತು ರೋದಿಸತೊಡಗಿದನು. ಇದೇನು ? ನನ್ನ ಚಿತ್ತವಿಕಾರವೋ ! ದುಃಸ್ವ-ಪ್ನವೋ!! ಏನೆಂದು ತಿಳಿಯುವದಿಲ್ಲ. ಎಲೈ ಕೈಕಾದೇವಿಯೇ ಶ್ರೀ ರಾಮಚಂದ್ರ ನಿನಗೇನು ಕೆಡುಕು ಮಾಡಿದ ? ಅಪರಾಧ ಮಾಡಿದ ? ಹೇಳು. ತಾಯಿಯಾದ ಕೌಸಲೆಗಿಂತಲೂ ಹೆಚ್ಚಾಗಿ ನಿನ್ನ ಸೇವೆಯನ್ನು ಆ ರಾಮ ಪ್ರೀತಿಯಿಂದ ಮಾಡುತ್ತಿದ್ದನಲ್ಲವೇ ? ನಿನ್ನಿಷ್ಟದಂತೇ ಭರತನಿಗೆ ಪಟ್ಟವನ್ನು ಕಟ್ಟುವೆ. ಆದರೆ ಆ ರಾಮಚಂದ್ರನನ್ನು ಕಾಡಿಗೆ ಅಟ್ಟಬೇಡ. ಮನೆಯ-ಲ್ಲಿಯೇ ಓಡಾಡಿಕೊಂಡಿರಲಿ. ಎಂದು ಪರಿಪರಿಯಾಗಿ ಬೇಡಿಕೊಂಡನು. ಕೈಕೆ ಇದಾವುದಕ್ಕೂ ಸೊಪ್ಪು ಹಾಕಲಿಲ್ಲ. ರಾಮ ಅಡವಿಗೆ ಹೋಗಲೇ ಬೇಕು. ಹೋಗದಿದ್ದರೆ ನಾನು ಕೊರಳಿಗೆ ನೇಣನ್ನಾದರೂ ಹಾಕಿಕೊಳ್ಳುವ ವಿಷವನ್ನಾದರೂ ತಿನ್ನುವೆ. ದಶರಥ "ಸುಳ್ಳುಗಾರ" ಎನ್ನುವ ವಿಷಯ ಎಲ್ಲ ಕಡೆಯಲ್ಲಿಯೂ ಪ್ರಚಾರವಾಗಲಿ. ಜನಜನಿತವಾಗಲಿ ಎಂದು ನುಡಿದಳು. ಈ ಕರ್ಣಕಠೋರವಾದ ಮಾತನ್ನು ಕೇಳಿ ಮತ್ತೆ ದಶರಥನು ಮೂರ್ಛಾ-ಕ್ರಾಂತನಾದನು. ಹಲವು ಯುಗದಂತೆ ಆ ರಾತ್ರಿಯನ್ನು ಕಳೆದನು. ವಂಧಿಮಾಗ್ಯಧ್ವರು ಸ್ವಸ್ತಿವಾಚನಕ್ಕೆ ಬರಲಾಗಿ "ದಶರಥನಿಗೆ ಸ್ವಸ್ಥವಿಲ್ಲ" ಎಂದು ಹೇಳಿ ಅವರನ್ನು ಕೈಕೆ ತಿರುಗಿ ಕಳುಹಿದಳು.

ಪಟ್ಟಣದ ಆಬಾಲವೃದ್ಧರಾದಿಯಾಗಿ ಎಲ್ಲರೂ ಅತ್ಯಂತ ಸಂತೋಷ-ದಿಂದ ಇದ್ದರು. ರಾಮಚಂದ್ರನು ಎಂದಿಗೆ ಪಟ್ಟಾಭಿಷಿಕ್ತನಾಗಿ ನಮ್ಮನ್ನೆಲ್ಲ ಕಾಪಾಡುವನೋ ಎಂಬ ಕಾತುರದಿಂದ ಇದ್ದರು. ರಾಮನ ಸುಗುಣಗಳನ್ನೆಲ್ಲ ಹಾಡಿ ಹೊಗಳುತ್ತಿದ್ದರು. ಮೂರ್ಧಾಭಿಷಿಕ್ತನಾಗುವ ಶ್ರೀ ರಾಮಚಂದ್ರನನ್ನೇ ನೆನೆಯುತ್ತಿದ್ದರು. ರೀತಿ-ನೀತಿ, ದಯಾದಾಕ್ಷಿಣ್ಯ ಮೊದಲಾದ ಸದ್ಗುಣ-ಗಳಿಂದ ಕೂಡಿದ ರಾಮಚಂದ್ರನನ್ನೇ ಧ್ಯಾನಿಸುತ್ತಿದ್ದರು. ಈ ಪ್ರಕಾರವಾಗಿ

ಪುರಜನರು ತಮತಮಗೆ ತೋಚಿದ ರೀತಿಯಲ್ಲಿ ರಾಮನ ಗುಣಗಾನ ಮಾಡುತ್ತ ಆ ರಾತ್ರಿಯನ್ನು ಸಂತೋಷದಿಂದ ಕಳೆದರು. ಸೂರ್ಯೋದಯದಲ್ಲಿಯೇ ಎದ್ದ ವಸಿಷ್ಠನು ತನ್ನ ಕೆಲಸಗಳನ್ನೆಲ್ಲ ಮುಗಿಸಿ ರಾಜನ ಬಳಿ ಬಂದನು. ರಾಜನು ಇನ್ನೂ ಯಾಕೆ ಎದ್ದಿಲ್ಲ ಎಂದು ಆಲೋಚಿಸುತ್ತ ನೃಪನ ಮನೆಯನ್ನು ಹೊಕ್ಕನು. ಆಗ ಅಲ್ಲಿದ್ದ ಕೈಕೆ- ಇಡೀ ರಾತ್ರಿ ದಶರಥನು ರಾಮಾ ರಾಮಾ ಎಂದು ಹಲುಬುತ್ತಿದ್ದನು; ಜಾಗರಣೆ ಮಾಡಿದನು; ಏನೋ ದುಗುಡದಿಂದ ಇದ್ದಾನೆ. ರಾಮನನ್ನು ಕರೆಸು ಎಂದು ಹೇಳಿದಳು. ರಾಜನೂ ಕೂಡ ತನಗೆ ರಾಮನನ್ನು ಕಾಣುವ ತವಕ ಎಂದು ನುಡಿದನು. ವಸಿಷ್ಠನ ಆಣತಿಯಂತೆ ರಾಮನು ಕೂಡಲೇ ದಶರಥನಿದ್ದಲ್ಲಿಗೆ ಬಂದನು. ತಂದೆಯನ್ನು ಕರೆಯಲು ಇದಕ್ಕೆ ಮೌನವೇ ಉತ್ತರವಾಯಿತು. ಬಿದ್ದು ದುಃಖಿಸುತ್ತಿರುವ ತನ್ನ ತಂದೆಯನ್ನು ತೊಡೆಯ ಮೇಲಿಟ್ಟುಕೊಂಡು ದುಃಖದ ಕಾರಣವೇನು ಎಂದು ವಿಚಾರಿಸಿದನು. ಕೈಕೆಯಿಯೇ ಅದಕ್ಕೆ ಉತ್ತರವನ್ನು ನೀಡಿದಳು. ದಶರಥ ನಿನ್ನ ಬಗ್ಗೆಯೇ ದುಃಖಿಸುತ್ತಿದ್ದಾನೆ. ಆ ದುಃಖವನ್ನು ನೀನೇ ದೂರಮಾಡಬೇಕು. ಆತ ಹಿಂದೆ ನನಗೆ ಎರಡು ವರಗಳನ್ನು ಕೊಟ್ಟಿದ್ದ. ಆ ವರದ ವಿವರ ಹೇಳಲು ನಾಚುತ್ತಿದ್ದಾನೆ. ಅಪ್ಪೇ! ಆ ತಂದೆಯನ್ನು ಸತ್ಯ ಪ್ರತಿಜ್ಞನನ್ನಾಗಿ ಮಾಡುವದು ನಿನ್ನ ಕರ್ತವ್ಯ. ಹುಟ್ಟಿದ ಮಕ್ಕಳಿಗೆ ತಂದೆಯ ಆಜ್ಞೆಯನ್ನು ಪಾಲಿಸುವದೇ ಕರ್ತವ್ಯ. ನೀನು ಅದನ್ನು ನೆರವೇರಿಸು ಎಂದು ಹೇಳಿದಳು. ರಾಮನು ತಂದೆಯ ಮಾತನ್ನು ಪೂರೈಸುವದೇ ನನ್ನ ಕರ್ತವ್ಯ ಎಂದು ಹೇಳಿದನು. ಹಾಗಾದರೆ ಭರತನಿಗೆರಾಜ್ಯ ಒಪ್ಪಿಸಿ ನೀನು ಹದಿನಾಲ್ಕು ವರ್ಷ ವನವಾಸಕ್ಕೆ ಈ ಕ್ಷಣವೇ ಹೋಗಬೇಕು. ಈ ಮಾತನ್ನು ಹೇಳಲು ನಿನ್ನ ತಂದೆ ನಾಚುತ್ತಿದ್ದಾನೆ. ಅಪ್ಪೇ! ಶ್ರೀ ರಾಮನು "ಮಹದಾಜ್ಞೆ" ಎಂದು ಹೇಳಿ ಅರಣ್ಯಕ್ಕೆ ಹೋಗಲು ತಯಾರಾದನು. ದಶರಥ ಮತ್ತೆ ದುಃಖಕ್ಕೆ ಈಡಾದನು. ರಾಮನ ಗುಣಗಾನ ಮಾಡತೊಡಗಿದನು. ರಾಮ ದಶರಥನನ್ನು ಸಂತೈಸತೊಡಗಿದ. ಎಲ್ಲಿಯೂ ಭೇದದ ಸೊಲ್ಲು ಬೇಡ. ಬಲ್ಲ ತನಗೆ ಮನೆಯೇ ಸುಖಕರವಾದ ಮನೆ. ಇಲ್ಲದಿದ್ದರೆ ಮನೆಯೇ ಅಡವಿಯಾಗುವದು. ಹೋದ ಬಂದ ನೋವುಗಳಾದಲಾದವುಗಳೆಲ್ಲ ಪ್ರಕೃತಿಯ ಆಟದ ಖೇಲ ಅಷ್ಟೇ! ಕಾರಣ ಆತ್ಮನೊಬ್ಬನೇ ಎಂದು ತಿಳಿ.

ಅವನಲ್ಲಿ ಯಾವ ಭೇದವೂ ಇಲ್ಲ. ನಾನು ಹದಿನಾಲ್ಕು ವರುಷ ವನವಾಸ ಕಳೆದು ಪುನಃ ಇಲ್ಲಿಗೆ ಬರುತ್ತೇನೆ. ಸತ್ಯವುಳಿದದ್ದಾದರೆ ಕೀರ್ತಿ ಉಳಿಯುತ್ತದೆ. ಲೋಕ ಉಳಿಯುತ್ತದೆ. ಅರ್ಥ, ಬಲ, ಐಶ್ವರ್ಯ ಮೊದಲಾದವೆಲ್ಲ ಸೇರುತ್ತವೆ, ಸತ್ಯವಿಲ್ಲದೇ ಇದ್ದರೆ ಯಾವುದೂ ಇಲ್ಲ. ಎಲ್ಲವೂ ವ್ಯರ್ಥ ಹೀಗೆ ಹಿತವಹ ಮಾತನ್ನು ತಂದೆಗೆ ಹೇಳಿ ಸಂತಯಿಸಿದನು. ಈ ವಿಷಯವನ್ನು ಸೀತೆಗೂ ತಿಳಿಸಿ ಆಕೆಯನ್ನು ಸಮಾಧಾನಪಡಿಸುವೆ ಎಂದು ಅಲ್ಲಿಂದ ತೆರಳಿದನು. ತಾಯಿಗೂ ಈ ವಿಷಯ ತಿಳಿಸಲು ಅತ್ತ ತೆರಳಿದ ಎಂಬಲ್ಲಿಗೆ ಹನ್ನೊಂದನೆಯ ಸಂಧಿ ಮುಕ್ತಾಯ ಗೊಂಡಿತು.

ಹನ್ನೆರಡನೆಯ ಸಂಧಿ :- ಎಲೈ ಪಾರ್ವತಿಯೇ ಮುಂದಿನ ಕಥೆಯ ಸಂಗತಿಯನ್ನು ತಿಳಿಯುವಂಥವಳಾಗು ಹೇಳುತ್ತೇನೆ ಕೇಳು ಎಂದು ಹೇಳಿ ಮುಂದಿನ ಕಥೆಯ ವಿವರವನ್ನು ಹೇಳಲುಪಕ್ರಮಿಸಿದನು.

ರಾಮ ಬಂದ ಸಂಗತಿಯನ್ನು ಸುಮಿತ್ರೆಯು ಕೌಸಲೆಗೆ ತಿಳುಹುತ್ತಾಳೆ. ಆಕೆ ಅತ್ಯಂತ ಹರುಷದಿಂದ ಎದ್ದು ಬಂದು ಮಗನನ್ನು ತಕ್ಕೈಸಿದಳು. ತಾಯಿಗೆ ತಂದೆಯ ಸತ್ಯ ಪ್ರತಿಜ್ಞೆಯನ್ನೂ ವರದ ವಿವರವನ್ನೂ ತಿಳಿಸಿ ಈಗ ಭರತ ಪಟ್ಟಾಭಿಷಿಕ್ತನಾಗುತ್ತಾನೆ ನಾನು ಹದಿನಾಲ್ಕು ವರ್ಷಗಳ ತನಕ ವನವಾಸಕ್ಕೆ ಹೋಗಬೇಕಾಗಿದೆ. ಅಲ್ಲಿ ಹದಿನಾಲ್ಕು ವರುಷ ಉಳಿದು ತಿರುಗಿ ಬರುತ್ತೇನೆ. ಇದೆಲ್ಲ ದೈವಾಧೀನ. ಈ ಮಾತನ್ನು ಕೇಳಿದ್ದೇ ತಡ ಕೌಸಲೆಯು ಎದೆಗೆ ಅಲಗು ಹೊಕ್ಕಿ ಮುರಿದಂತೆ ಮೂರ್ಛೆ ಹೊಂದಿ ಬಿದ್ದಳು. ರಾಮನನ್ನು ಬಿಟ್ಟು ತಾನು ಬದುಕಲಾರೆ ಎಂದು ಹಲುಬಿದಳು. ಭರತ ಬೇಕಾದರೆ ರಾಜ್ಯವಾಳಲಿ ನೀನು ನನ್ನನ್ನು ಬಿಟ್ಟು ಹೋಗಬೇಡ. ಮುಂದೆ ತನಗೆ ಗತಿ ಯಾರು ? ಎಂದು ಹಲುಬುತ್ತ ನಾನಾ ಪ್ರಕಾರವಾಗಿ ಗೋಳಿಟ್ಟಳು. ಈ ವರದ ಸಂಗತಿಯನ್ನು ಕೇಳಿ ರೌದ್ರಾವತಾರವನ್ನು ತಾಳಿದ ಲಕ್ಷ್ಮಣನು ನನ್ನ ಶೌರ್ಯವನ್ನಾದರೂ ನೋಡು ! ನೀನು ರಾಜ್ಯಕಾರಭಾರ ಮಾಡು, ಇದಕ್ಕೆ ವಿಘ್ನ ತರುವವರನ್ನು ನಾನು ದಂಡಿಸುತ್ತೇನೆ. ಎಂದು ಹೇಳಿದನು. ಇದನ್ನು ಕೇಳಿದ ರಾಮನು ಲಕ್ಷ್ಮಣನನ್ನು ಸಮಾಧಾನಗೊಳಿಸಿದನು. ನಿನ್ನ ಈ ಶೌರ್ಯ

ಈಗ ಪ್ರಯೋಜನವಿಲ್ಲ. ನಾನು ಧನ, ವೈಭವ, ರಾಜ್ಯ ಇವುಗಳ ಮೋಹಕ್ಕೆ ಒಳಗಾಗುವವನಲ್ಲ. ಅವುಗಳಿಗೆ ಆಶೆ ಮಾಡುವವನೂ ಅಲ್ಲ. ನಾವೆಲ್ಲರೂ ಕಾಲವಶರಾದವರು. ಕಾಲಕ್ಕೆ ತಕ್ಕಂತೆ ನಡೆಯಲೇಬೇಕು. ವಿಷಯ ಸುಖಕ್ಕಾಗಿ ಎಳಸಬಾರದು. ಅವರವರ ಕರ್ಮಾನುಸಾರವಾಗಿ ತಂದೆ ತಾಯಿ, ಬಾಂಧವರು ಎಲ್ಲಾ. ಒಮ್ಮೆ ಎಲ್ಲರೂ ಒಟ್ಟಾಗುತ್ತಾರೆ. ನಂತರ ಅಗಲು-ತ್ತಾರೆ. ಈ ಸಂಸಾರ ಕನಸಿನಲ್ಲಿಯ ಇಂದ್ರಜಾಲದಂತೆ, ಜರೆ, ಮರಣ, ಹಸಿವು, ನೀರಡಿಕೆ, ಶೋಕ, ಮೋಹ, ಮತ್ಸರ ಮೊದಲಾದವೆಲ್ಲವೂ ಈ ಸಂಸಾರದಲ್ಲಿ ಇರುಹಂತಹುದೇ ! ನಮ್ಮ ಆಯುಷ್ಯವು ತೀರಿದ ಕೂಡಲೇ ಎಲವೂ ಬಟ್ಟ ಬಯಲೇ. ಈ ದೇಹ ಹಲವು ರೋಗಗಳ ತವರುಮನೆ. ಅಮೇಧ್ಯಗಳ ಗೂಡು, " ಈ ಶರೀರ ನಾನು " ಎಂದು ಲೋಕದ ಜನರು ನುಡಿಯುತ್ತಾರೆ. ಆದರೆ ಇದನ್ನು ಮರೆತು " ಆತ್ಮನೇ ನಾನು " ಎಂದು ಆಲೋಚಿಸಿದರೆ ಒಳ್ಳೆಯದು. ಅವಿದ್ಯೆಯಿಂದ ವಿದ್ಯೆಯನ್ನು ಪಡೆಯಬೇಕು. ಕಾಮ ಕ್ರೋಧಾದಿ ಷಡ್ವೈರಿಗಳನ್ನು ಬಿಡಬೇಕು. ಶಮ ದಮ ಮೊದಲಾದವು-ಗಳನ್ನು ಗಳಿಸಬೇಕು. ಆದ್ದರಿಂದ ಇಂದಿನಿಂದಲೇ ನೀನು ಶಾಂತನಾಗುವದನ್ನು ಅಭ್ಯಸಿಸಬೇಕು. ಆತ್ಮದ ಬುದ್ಧಾನಂದವನ್ನು ಪಡೆಯಬೇಕು. ಪ್ರಾರಬ್ಧವನ್ನು ಅನುಭೋಗಿಸಲೇಬೇಕು. ಅದರಿಂದ ಕರ್ತೃವಿಗೆ ಬಂಧವಿಲ್ಲದಂತೆ ಇರಬೇಕು. ನಾನು ಹೇಳಿದ ಈ ಮಾತನ್ನು ಸ್ವಾನುಭವದಿಂದ ಅನುಭವಿಸಿ ತಿಳಿಯಬೇಕು. ನನ್ನ ಈ ಹದಿನಾಲ್ಕು ವರುಷಗಳು ಒಂದು ಕ್ಷಣದಂತೆಯೇ ಕಳೆದು ಹೋಗುವದು. ಇವೆಲ್ಲವನ್ನು ಕೇಳಿದ ತಾಯಿ ಕೌಸಲೆಯು ಸಮಾಧಾನಪಟ್ಟು ರಾಮನನ್ನು ಆಲಂಗಿಸಿ ಆತನನ್ನು ಆಶೀರ್ವದಿಸಿ ಕಳುಹಿಸಿದಳು. ನಿನ್ನ ರಕ್ಷಣೆಗೆ ಸರ್ವ ದೇವತೆಗಳೂ ಇರಲಿ ಎಂದು ಹಾರೈಸಿದಳು. ಲಕ್ಷ್ಮಣ ಸೀತೆ ತಾವಿಬ್ಬರೂ ರಾಮನೊಡನೆ ಬರುತ್ತೇನೆಂದು ಹೇಳಿದರು. ರಾಮ ಸೀತೆಗೆ ಹೀಗೆ ಹೇಳಿದನು - ಅದು ಕಾಡು ಘೋರಾರಣ್ಯ, ಕಾಡು ಮೃಗಗಳ ಬೀಡು ಬಹಳ ಕಷ್ಟಪಡ ಬೇಕಾದೀತು, ಅಲ್ಲದೇ ಅಲ್ಲಿ ರಾಕ್ಷಸರಿದ್ದಾರೆ, ಅವರಿಂದ ಬಹಳ ಭಯ, ಕಾರಣ ನೀನು ಇಲ್ಲಿಯೇ ಕೌಸಲೆಯ (ಅತ್ತೆಯ) ಸೇವೆ ಮಾಡಿಕೊಂಡಿರು. ರಾಮನ ಮಾತನ್ನು ಕೇಳಿದ ಸೀತೆಯು ಹೀಗೆ ಹೇಳಿದಳು-ನಿನ್ನ ಬಿಟ್ಟಗಲಿ ನಾನು ಇರಲಾರೆ. ನೀನು ನನ್ನ ಹತ್ತಿರ ಇದ್ದರೆ ಒಳ್ಳೆಯದು.

ನೀವು ತಿನ್ನುವ ಆಹಾರವೇ ನನಗೆ ಆಹಾರ. ನಿಮ್ಮೊಡನಿದ್ದರೆ ಅಡವಿಯಲ್ಲಿಯ ಕಲ್ಲು ಮುಳ್ಳುಗಳೆಲ್ಲವೂ ಅರಳಿದ ಮಲ್ಲಿಗೆಯಂತೆಯೇ. ಇದಲ್ಲದೇ ನಾನು ಬಾಲೆ ಯಾಗಿದ್ದಾಗ ನನ್ನ ಕೈ ನೋಡಿದ ಜ್ಯೋತಿಷ್ಯರು "ಈಕೆ ಪತಿಯೊಡನೆ ವನವಾಸ ಮಾಡುವಳು" ಎಂದಿದ್ದಾರೆ. ಇದಲ್ಲದೇ ಈ ಹಿಂದೆ ಎಷ್ಟೋ ರಾಮಾಯಣವನ್ನು ಕವಿಗಳು ಹೇಳಿದ್ದಾರೆ. ಆ ರಾಮಾಯಣಗಳಲ್ಲಿ ರಾಮನು ಸೀತೆಯನ್ನು ಬಿಟ್ಟು ಅಡವಿಗೆ ಹೋದ ಸಂದರ್ಭ (ಪ್ರಸಂಗ) ಗಳಿಲ್ಲ. ಇವೆಲ್ಲ ಕಾರಣಗಳಿಂದ ನಾನು ನಿಮ್ಮೊಡನೆ ಬರುವವಳೇ ಸರಿ ಎಂದು ಬಿನ್ನ ವಿಸಿದಳು. ರಾಮನು ಸೀತೆಯ ಮಾತನ್ನು ಕೇಳಿ ಹಾಗಾದರೆ ನನ್ನೊಟ್ಟಿಗೆ ಬಾ ಎಂದು ಹೇಳಿದನು. ಕೂಡಲೇ ಸೀತೆಯು ಅರುಂಧತಿಯೇ ಮೊದಲಾದ ಋಷಿಪತ್ನಿಯರಿಗೆ ತನ್ನ ಆಭರಣಗಳನ್ನೆಲ್ಲ ದಾನಮಾಡಿದಳು. ಸುಮಿತ್ರೆಯೂ ಲಕ್ಷ್ಮಣನಿಗೆ ನೀನು ರಾಮನೊಡನೆ ಇರು ಎಂದು ಆದೇಶಿಸಿದಳು. ಹೀಗೆ ರಾಮ ಲಕ್ಷ್ಮಣ ಸೀತೆಯರು ಅಡವಿಗೆ ಹೋಗಲು ತಯಾರಾಗಿ ಪುರವನ್ನೇ ಬಿಟ್ಟು ಹೊರನಂಟರು. ಈ ದೃಶ್ಯವನ್ನು ನೋಡಿದ ಪೌರಜನರು ಬಹಳ ದುಃಖಿಸುತ್ತಿದ್ದರು. ಅಲ್ಲದೇ ಹಾಹಾಕಾರ ಮಾಡುತ್ತಿದ್ದರು ಎಂಬಲ್ಲಿಗೆ ಹನ್ನೆ-ರಡನೆಯ ಸಂಧಿ ಮುಕ್ತಾಯಗೊಂಡಿತು.

ಹದಿನೂರನೆಯ ಸಂಧಿ :- ಎಲೈ ನಗರಾಜ ಪುತ್ರಿಯೇ ಮುಂದಿನ ರಾಮಾಯಣದ ಕಥೆಯನ್ನು ಚಿತ್ತಗೊಟ್ಟು ಆಲಿಸುವಂಥವಳಾಗು.

ಶ್ರೀ ರಾಮಚಂದ್ರನು ತನ್ನ ತಾಯಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ತನ್ನ ತಂದೆಯ ಬಳಿ ಬಂದು ಆತನ ಅಪ್ಪಣೆಗಾಗಿ ಕಾದುನಿಂತನು. ಅಪ್ಪಣೆ ಯನ್ನು ಪಡೆದು ಹೊರಡುವಂಥವನಾದನು. ರಾಮಚಂದ್ರನು ರಾಜಬೀದಿಯಲ್ಲಿ ಬರಿಗಾಲಿನಿಂದ ನಡೆಯುವದನ್ನು ಕಂಡು ಪುರಜನರು ತಮ್ಮ ತಮ್ಮಲ್ಲಿ ಈ ರೀತಿ ಹೇಳಿಕೊಳ್ಳತೊಡಗಿದರು. ದಶರಥ ಮಹಾರಾಜನು ಸತ್ಯಸಂಧನು. ಆ ಕೈಕಾದೇವಿಯ ಮಾತಿಗಾಗಿ ರಾಮನನ್ನು ಪಟ್ಟಣದಿಂದ ಹೊರವಡಿಸಿದನು. ಸತ್ಯಗುಣಸಂಪನ್ನನಾದ ಆ ಶ್ರೀ ರಾಮಚಂದ್ರನನ್ನು ಹೊರವಡಿಸಿದ ಮೇಲೆ ಆತನ ಸಂಗಡಲೇ ನಾವು ಹೋಗುವದು ಲೇಸು. ಆ ಸುಕುಮಾರಿಯಾದ ಸೀತಾದೇವಿಯನ್ನು ನೋಡಿರಿ! ಹ್ಯಾಗೆ ಅತಿಕಷ್ಟದಿಂದ ಬರಿಗಾಲಿನಲ್ಲಿ

ನೆಲದ ಮೇಲೆ ನಡೆಯುತ್ತಿರುವದನ್ನು ನೋಡಿ !! ಆನೆ, ಕುದುರೆ, ರಥ ಯಾವದೂ ಇಲ್ಲದೆ ನಡೆಯುವ ರಾಮನನ್ನೂ ಕೂಡ ನೋಡಿರಿ !!! ಅಂತೂ ವಿಧಿಯು ಬಹುಬಲಾಢ್ಯನು ಎಂದು ನಾನಾಪ್ರಕಾರವಾಗಿ ಹೇಳಿ ಮರುಗುತ್ತಿರುವ ಜನರನ್ನು ನೋಡಿ ಮುನಿಶ್ರೇಷ್ಠನಾದ ವಾಮದೇವನು ಅವರಿಗೆ ಈ ರೀತಿ ಹೇಳಿದನು.

ನೀವಾರೂ ಮರುಗುವ, ದುಃಖಪಡುವ ಕಾರಣವಿಲ್ಲ. ರಾಘವನಾರು ? ಜಾನಕಿ ಯಾರು ? ಎಂಬಿತ್ಯಾದಿ ವಿಷಯಗಳನ್ನು ಕೇಳಿರಿ. ಶ್ರೀ ರಾಮನು ಸಾಕ್ಷಾತ್ ನಾರಾಯಣನು. ಸೀತೆಯು ಸಾಕ್ಷಾತ್ ಲಕ್ಷ್ಮೀದೇವಿ. ರಾಮನೊಡನೆ ಇರುವ ಲಕ್ಷ್ಮಣನು ಸಾಕ್ಷಾತ್ ಶೇಷನೇ ಸರಿ. ಇವನ್ನು ನೆನಪಿನಲ್ಲಿ ಇಡಿರಿ.

ಪೂರ್ವದಲ್ಲಿ ಈತನು ಮತ್ಸ್ಯಾವತಾರವನ್ನು ತಾಳಿ ಸಮುದ್ರ ಮಧ್ಯದಲ್ಲಿದ್ದ ವಿವಸ್ವತ ಮನುವನ್ನು ಪಾರುಮಾಡಿದನು. ಸಮುದ್ರ ಮಥನದ ಕಾಲದಲ್ಲಿ ಮೇರು ಪರ್ವತ ( ಮಂದರ ಪರ್ವತ ) ವು ಕ್ಷೀರ ಸಾಗರದಲ್ಲಿ ಮುಳುಗಲು ಕೂರ್ಮಾವತಾರವನ್ನು ತಾಳಿ ಅದನ್ನು ಮೇಲಕ್ಕೆತ್ತಿದನು. ವರಾಹಾವತಾರವನ್ನು ತಾಳಿ ಹಿರಣ್ಯಾಕ್ಷನನ್ನು ಕೊಂದು ಧರೆಯನ್ನು ಮೇಲಕ್ಕೆತ್ತಿ ಉದ್ಧರಿಸಿದನು. ನರಸಿಂಹಾವತಾರವನ್ನು ತಾಳಿ ಹಿರಣ್ಯಕಶಿಪುವನ್ನು ಕೊಂದು ಪ್ರಲ್ಹಾದನನ್ನು ರಕ್ಷಿಸಿದನು ಪರಶುರಾಮಾವತಾರವನ್ನು ತಾಳಿ ಇಪ್ಪತ್ತೊಂದು ಸಲ ಪೃಥ್ವಿಯನ್ನು ಸಂಚರಿಸಿ ದುಷ್ಟ ಕ್ಷತ್ರಿಯರನ್ನೆಲ್ಲ ಸದೆಬಡಿದು ಜನರನ್ನು ಕಾಪಾಡಿದನು. ಈಗ ಆ ಶ್ರೀಮನ್ನಾರಾಯಣನೇ ರಾಮಾವತಾರವನ್ನು ತಾಳಿದ್ದಾನೆ. ದಶರಥನು ವರ ಬೇಡಿಕೊಂಡಂತೆ ಆತನಲ್ಲಿ ಜನಿಸಿ ಬಂದಿದ್ದಾನೆ. ರಾಮನು ಸಾಕ್ಷಾತ್ ವಿಷ್ಣು, ಸೀತೆ ಸಾಕ್ಷಾತ್ ಮಾಯೆಯಾಗಿದ್ದಾಳೆ. ರಾವಣನನ್ನು ವಧಿಸಲೋಸುಗ ಅಡವಿಗೆ ಹೊರಟಿದ್ದಾನೆ. ಅರಸನಾಗಲಿ ಕೈಕೆಯಾಗಲಿ ಏನು ಮಾಡಲು ಶಕ್ಯ ? ನೀವೆಲ್ಲ ಚಿಂತೆಯನ್ನು ಬಿಟ್ಟು ಬಿಡಿ. ರಾಮ ರಾಮ ಎಂದು ಧ್ಯಾನಮಾಡಿರಿ. ಸಾಕು. ನಿಮ್ಮ ಪಾಪವೆಲ್ಲ ದೂರವಾಗುವದು. ಈ ಕಲಿ ಕಾಲದಲ್ಲಿ ರಾಮನಾಮವೇ ತಾರಕಮಂತ್ರ. ಮುಂದೆ ಕಲಿಯುಗದಲ್ಲಿ

ಜನಿಸಿದವರು ಕಾಮಾದಿ ಷಡ್ವೈರಿಗಳಿಂದ ಪೀಡಿತರಾಗುವರು. ಅಂಥವರಿಗೆ ರಾಮನೇ ತಾರಕ. ರಾಮನಾಮ ಜಪದಿಂದಲೇ ಈ ಸಂಸಾರಸಾಗರವನ್ನು ದಾಟುವರು. ರಾಮನಾಮ ಎಲ್ಲ ದುಃಖಗಳನ್ನು ಹೋಗಲಾಡಿಸುವದಲ್ಲದೇ ಎಲ್ಲ ಸಿದ್ಧಿಗಳೂ ದೊರಕುವಂತೆ ಮಾಡುವದು. ರಾವಣನನ್ನು ಸಂಹರಿಸಲು ವನಕ್ಕೆ ಹೊರಟ ಶ್ರೀ ರಾಮನ ಬಗ್ಗೆ ಯಾರೂ ದುಃಖಿಸಬೇಕಾಗಿಲ್ಲ. ಎಂದು ವಾಮದೇವ ಮುನಿ ಎಲ್ಲರಿಗೂ ಹೇಳಿ ಅವರನ್ನೆಲ್ಲ ಸಮಾಧಾನ ಪಡಿಸಿದನು. ಇದನ್ನು ಕೇಳಿ ಸಕಲರೂ ಸಂತೋಷದಿಂದ ನಲಿದಾಡಿದರು.

ಇತ್ತ ರಾಮನು ಕೈಕಾದೇವಿಯಿದ್ದಲ್ಲಿಗೆ ಬಂದು ನಾವು ಮೂವರು ವನಕ್ಕೆ ಹೊರಟಿದ್ದೇವೆ. ಎಂದು ಹೇಳಲಾಗಿ ಕೈಕೇಯು ಆತನಿಗೆ ಚೀರವಸನ (ನಾರುಬಟ್ಟೆ) ವನ್ನು ಕೊಟ್ಟಳು. ಅವನ್ನು ಧರಿಸಿ ಮೂವರೂ ಅಲ್ಲಿಂದ ಹೊರಟರು. ದಶರಥನು ಸುಮಂತನಿಗೆ ಆದೇಶಿದ್ದೇನೆಂದರೆ-- ಸುಮಂತನೇ ಇವರನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋಗಿ ಬಿಟ್ಟು ಬಾ. ನಂತರ ಅವರು ರಥವನ್ನೇರಿ ಧನುರ್ಬಾಣ ಸಹಿತರಾಗಿ ಹೊರವಂಟರು. ಇತ್ತ ದಶರಥನು ದುಃಖದ ಆವೇಗದಲ್ಲಿ ಮೂರ್ಛಿತನಾದನು. ಜನಸಮೂಹವೂ ಪುರಜನರೂ ಕೂಡ ರಾಮನೆಲ್ಲಿದ್ದಾನೋ ಅಲ್ಲಿಗೆ ನಾವೂ ಬರುತ್ತೇವೆ ಎಂದು ಅವನ ಹಿಂದೆಯೇ ಹೊರಟರು. ಇತ್ತ ಅರಸ ದಶರಥನು ತನ್ನನ್ನು ಕೌಸಲೆದೇವಿಯ ಮನೆಗೆ ತೆಗೆದುಕೊಂಡು ಹೋಗಿರಿ ಎಂದು ಹೇಳಿ ಅಳುತ್ತ ಮೂರ್ಛಾಕ್ರಾಂತನಾದನು. ರಥವೇರಿದ ಶ್ರೀ ರಾಮನು ತಮಸಾ ನದಿಯ ದಡಕ್ಕೆ ಬಂದು ತಲುಪಿದನು. ಅಲ್ಲಿ ಜಲಾಹಾರವನ್ನು ಸೇವಿಸಿ ರಾತ್ರಿ ಮರದ ಬುಡದಲ್ಲಿಯೇ ಮಲಗಿದನು. ಲಕ್ಷ್ಮಣನು ಕಾವಲಿಗಾಗಿ ಧನುರ್ಬಾಣಗಳನ್ನು ಧರಿಸಿ ಎಚ್ಚರದಿಂದ ಇದ್ದನು. ಪೌರಜನರೂ ಕೂಡ ಅಲ್ಲಿಯೇ ನೆಲಸಿದರು. ತಾವು ರಾಮನೊಟ್ಟಿಗೇ ಇರುವೆವು ಎಂದು ತಮ್ಮ ತಮ್ಮಲ್ಲಿ ಮಾತನಾಡಿ ಕೊಳ್ಳುತ್ತಿದ್ದರು. ಇದನ್ನು ಕೇಳಿದ ಶ್ರೀ ರಾಮನು ಸುಮಂತನಿಗೆ ಹೇಳಿದನು- ಈ ರಾತ್ರಿಯೇ ಇಲ್ಲಿರದೆ ಪಯಣಿಸೋಣ. ಊರಮುಖವಾಗಿ ರಥನಡೆಸುತ್ತ ಬೇರೆ ಕಡೆಗೆ ತಿರುಗಿ ಮುಂದುವರಿದರು. ಬೆಳಗಾಗೆದ್ದ ಪೌರಜನರು ರಾಮ ಪುನಃ ಅಯೋಧ್ಯೆಗೆ ಹೋದ ಎಂದು ತಿಳಿದು ಅವರೂ ಅಯೋಧ್ಯೆಗೆ ಹೋದರು. ಇತ್ತ ರಾಮನು ಗಂಗಾನದಿಯ ದಂಡೆಯ ಮೇಲಿದ್ದ ಶೃಂಗವೇರಿಗೆ

ಹೋಗಿ ತಲುಪಿದನು. ಅಲ್ಲಿ ಗಂಗಾನದಿಯಲ್ಲಿ ಸ್ನಾನಮಾಡಿ ಅಲ್ಲಿಯ ವೃಕ್ಷದ ಮೂಲದಲ್ಲಿ ಕುಳಿತು ದಣಿವಾರಿಸಿಕೊಳ್ಳುತ್ತಿರುವಾಗ ಈ ವಿಷಯವನ್ನು ಕಿರಾತರು ತಮ್ಮ ರಾಜನಾದ ಗುಹನಿಗೆ ತಿಳಿಸಿದರು. ಇದನ್ನು ಕೇಳಿದ ಗುಹನು ಅತ್ಯಂತ ಸಂತೋಷದಿಂದ ರಾಮನ ಬಳಿಗೆ ಬಂದನು. ರಾಮನಿಗೆ ದಂಡಪ್ರಣಾಮ ಮಾಡಿದನು. ರಾಮನು ಆತನನ್ನು ಪ್ರೀತಿಯಿಂದ ಹಿಡಿದೆತ್ತಿ ತಕ್ಕೈಸಿಕೊಂಡನು. ನಮ್ಮ ಈ ನಿಷಾದ (ಬೇಡ) ಜಾತಿ ಪರಮ ಪಾವನ ವಾಯಿತು. ನಾನು ಧನ್ಯನಾದೆ ನನ್ನ ರಾಜ್ಯವನ್ನು ನೀವೇ ಆಳಿರಿ ಎಂದು ರಾಮನಿಗೆ ಹೇಳಿದನು. ಇದನ್ನು ಕೇಳಿದ ರಾಮನು ಹೀಗೆಂದನು- ಎಲೈ ಗುಹನೇ ನಾನು ಹದಿನಾಲ್ಕು ವರುಷ ಗ್ರಾಮವನ್ನು ಸೇರಬಾರದು. ನನ್ನ ಆಹಾರ ಗಡ್ಡೆ ಗೆಣಸುಗಳೇ. ನೀನೇ ನನ್ನ ಗೆಳೆಯ. ನೀನು ನಿನ್ನ ರಾಜ್ಯವನ್ನು ಪರಿಪಾಲಿಸು. ನಮಗೆ ಜಟೆ ಕಟ್ಟಿಕೊಳ್ಳಲು ವಟ ವೃಕ್ಷದ ಹಾಲನ್ನು ತರಿಸಿಕೊಡು. ಎಂದು ಹೇಳಿ ಅದನ್ನು ತರಿಸಿಕೊಂಡು ಜಟೆಯನ್ನು ಕಟ್ಟಿಕೊಂಡರು. ಲಕ್ಷ್ಮಣ ಧರ್ಭಾಸನವನ್ನು ಹಾಸಿದ ಮೇಲೆ ಅದರ ಮೇಲೆ ಸೀತಾ ರಾಮರು ವಿಶ್ರಾಂತಿ ಪಡೆದರು. ಲಕ್ಷ್ಮಣ ಗುಹ ಇಬ್ಬರೂ ಸಂಭಾಷಣೆ ನಡೆಸುತ್ತ ರಾತ್ರಿ ಅವರಿಗೆ ಕಾವಲಾಗಿದ್ದರು ಎಂಬಲ್ಲಿಗೆ ಹದಿಮೂರನೆಯ ಸಂಧಿ ಮುಕ್ತಾಯಗೊಂಡಿತು.

**ಹದಿನಾಲ್ಕನೆಯ ಸಂಧಿ** :- ಎಲೈ ಗಿರಿರಾಜ ಪುತ್ರಿಯೇ ಮುಂದಿನ ಕುತೂಹಲಕರವಾದ ಸಂಗತಿಯನ್ನು ಕೇಳುವಂಥವಳಾಗು. ಎಂದು ಹೇಳುತ್ತಾ ಮುಂದಿನ ಕಥೆಯನ್ನು ಹೇಳಲುಪಕ್ರಮಿಸಿದನು.

ರಾಮ ಸೀತೆಯರು ನಿದ್ರಾಪರವಶರಾಗಿರುವಾಗ ಲಕ್ಷ್ಮಣ ಗುಹರು ತಮ್ಮ ತಮ್ಮಲ್ಲಿ ಈ ರೀತಿ ಮಾತನಾಡಿಕೊಳ್ಳುತ್ತಿದ್ದರು. ಗುಹನು ಹೇಳಿದನು- ಕೈಕೆಯ ಮಾತಿನಿಂದಲೇ ರಾಮನಿಗೆ ಈ ರೀತಿ ದುಃಖವುಂಟಾಯಿತು. ಕೈಕೆಯಿಯೇ ನಿಜವಾದ ಪಾತಕಿ. ಎನಲು ಲಕ್ಷ್ಮಣನು ಹೇಳಿದ್ದೇನೆಂದರೆ- ವಿಚಾರಮಾಡಿ ನೋಡಿದರೆ ಸುಖದುಃಖಕ್ಕೆಲ್ಲ ನಾವೇ ಕಾರಣರು. ನಮ್ಮ ಪೂರ್ವಾರ್ಜಿತದ ಕರ್ಮಫಲವೇ ಕಾರಣ. ಅವೇ ಸುಖ ದುಃಖರೂಪವಾ

ಕಾಣಿಸಿಕೊಳ್ಳುತ್ತವೆ. ಆದರೆ ನಾವು ಅನ್ಯರಿಂದ ಸುಖದುಃಖ ಪ್ರಾಪ್ತಿ ಯಾಯಿತು ಎನ್ನುತ್ತೇವೆ. ಯಾವಕಾಲದಲ್ಲಿ ಯಾವುದು ಬರುತ್ತದೆಯೋ ಅದನ್ನು ನಾವು ಅನುಭೋಗಿಸಲೇ ಬೇಕು. ದೇವತೆಗಳಿಗೂ ಇದನ್ನು ಮೀರಲು ಶಕ್ಯವಿಲ್ಲ. ಈ ಶರೀರವು ಸುಖದುಃಖದಿಂದಲೇ ಬಂದದ್ದಾಗಿದೆ. ಸುಖದುಃಖ ಗಳೆರಡೂ ಹಗಲು ರಾತ್ರಿಗಳಂತೆ ಒಂದಾದನಂತರ ಮತ್ತೊಂದು ಬರುವದು ಸಹಜ. ಸುಖದುಃಖ ಆರು ಭಾವಷಡ್ವಿಕಾರಗಳು ಮೊದಲಾದವುಗಳನ್ನು ಮೀರಿ ನಿಂದಾತನೇ ಯೋಗ್ಯನು ಎಂದು ಅರಿಯಬೇಕು. ಸಚ್ಚಾರಿತ್ರ್ಯದಿಂದ, ಸಾಧು ಸಜ್ಜನರ ಸಂಪರ್ಕ (ಸಹವಾಸ) ದಿಂದ, ವೈರಾಗ್ಯ ನಿಷ್ಠೆಯಿಂದ ಇದ್ದ ವನೇ ಯಾವಗಲೂ ಸಚ್ಚಿದಾನಂದದಲ್ಲಿ ನಿಲ್ಲಬಲ್ಲನು. ಜಗವನ್ನು ಕನಸಿನಂತೆ ನೋಡುತ್ತಿರಬೇಕು. ಪ್ರತಿಯೊಂದೂ ಪ್ರಾರಬ್ಧ ಕರ್ಮ ಎಂದು ಬಂದುದನ್ನು ಸ್ವೀಕರಿಸಿ ಮುಂದುವರಿಯಬೇಕು. ಹಿರಿಯರ ರಕ್ಷಣೆಯಲ್ಲಿರಬೇಕು. ಎಂದು ಮುಂತಾಗಿ ಲಕ್ಷ್ಮಣನು ಗುಹನಿಗೆ ವಿವರಿಸಿದನು. ಈ ಪ್ರಕಾರವಾಗಿ ತಿಳಿ ಹೇಳಲು ಗುಹನ ಮನಸ್ಸಿನಲ್ಲಿದ್ದ (ಹೃದಯದಲ್ಲಿದ್ದ) ಕಲ್ಮಷವೆಲ್ಲ ತೊಳೆದು ಹೋಯಿತು. ಇದೇ ಕಾಲಕ್ಕೆ ಸೂರ್ಯೋದಯವೂ ಆಯಿತು. ರಾಮನೆದ್ದು ತನ್ನ ಪ್ರಾತರ್ ವಿಧಿಗಳನ್ನೆಲ್ಲ ತೀರಿಸಿದನು. ದೋಣಿತಂದು ನಮ್ಮನ್ನು ಆಚೆ ದಾಟಿಸಬೇಕೆಂದು ಗುಹನ ಹತ್ತಿರ ಕೇಳಿಕೊಂಡನು. ಆ ಪ್ರಕಾರವಾಗಿ ಸೀತಾ ರಾಮ ಲಕ್ಷ್ಮಣರು ನಾವೆಯ ಸಹಾಯದಿಂದ ಗಂಗಾನದಿಯನ್ನು ದಾಟಿದರು. ದಾಟುವಾಗ ಸೀತೆಯು ಗಂಗಾನದಿಯನ್ನು ಕುರಿತು ಈ ರೀತಿ ಪ್ರಾರ್ಥನೆ ಮಾಡಿಕೊಂಡಳು. ತಾಯಿ ಗಂಗಾದೇವಿಯೇ ! ನಾವು ಸುಖದಿಂದ ವನವಾಸವನ್ನು ಕಳೆದು ಬಂದದ್ದಾದರೆ ನಿನಗೆ ಉಪಹಾರ ಬಲಿ ಮೊದಲಾದ ವುಗಳನ್ನು ನೀಡಿ ನಿನ್ನನ್ನು ಸಂತೋಷಗೊಳಿಸುವೆ ಎಂದಳು. ಅಂತೂ ಗಂಗಾ ನದಿಯನ್ನು ದಾಟಿ ಮುಂದುವರಿದರು. ವೃಕ್ಷಮೂಲದಲ್ಲಿ ಮಲಗಿ ರಾತ್ರಿಯನ್ನು ಕಳೆದರು. ಬೆಳಗಾಗೆದ್ದು ಭರದ್ವಾಜಾಶ್ರಮದ ಸಮೀಪಕ್ಕೆ ಬಂದು ಒಬ್ಬ ವಟುವಿನ ಮೂಲಕ ಋಷಿವರ್ಯರಿಗೆ ತಾವು ಬಂದ ಸಮಾಚಾರವನ್ನು ಹೇಳಿ ಕಳುಹಿಸಿದರು. ಈ ಸುದ್ದಿಯನ್ನು ಕೇಳಿದ ಭರದ್ವಾಜನು ತನ್ನ ಶಿಷ್ಯರಿಂದೊಡಗೂಡಿ ಬಂದು ರಾಮನನ್ನು ಸ್ವಾಗತಿಸಿ ಇದಿರುಗೊಂಡನು. ನನ್ನ ಪರ್ಣಶಾಲೆಯನ್ನು ನಿನ್ನ ಪಾದಧೂಳಿಯಿಂದ ಪಾವನಮಾಡಬೇಕು

ಎಂದು ಬಿನ್ನವಿಸಿಕೊಂಡನು. ನನ್ನ ಪೂರ್ವಾರ್ಜಿತದ ತಪಸ್ಸಿನ ಫಲದಿಂದಲೇ ನೀನು ನನ್ನಲ್ಲಿಗೆ ಬಂದಿದ್ದೀ. ನೀನು ವಿಷ್ಣು, ಜ್ಞಾನಮೂರುತಿ ಸಚ್ಚಿದಾನಂದ ನಿರೀಹ ನಿರ್ದ್ವಂದ್ವ, ರಾಕ್ಷಸರ ನಾಶಕ್ಕಾಗಿ ಮಾನವಾಕೃತಿ ಧರಿಸಿ ಬಂದಂಥ ನೀನು ಮಹಾಪುರುಷ. ದಶರಥನಿಗೆ ಮಗನಾಗಿ ಜನಿಸಿದೆ. ವಿಶ್ವಾಮಿತ್ರನ ಯಜ್ಞ ರಕ್ಷಿಸಿದೆ. ದನುಜರನ್ನು ಹಣಿದೆ. ಅಹಲ್ಯೆಯ ಶಾಪೋದ್ಧಾರ ಮಾಡಿದೆ. ಜನಕರಾಜನಲ್ಲಿದ್ದ ಶಿವಧನುಸ್ಸನ್ನು ಮುರಿದೆ. ತಂದೆಯ ಸತ್ಯ ಪಾಲನೆಗಾಗಿ ವನಕ್ಕೆ ಹೊರಟಿರುವಿ. ಇನ್ನು ಈಗ ನೀನು ಮುನಿಗಳ ಪರ್ಣ ಶಾಲೆಗಳನ್ನು ಸಂದರ್ಶಿಸಿ ಅದನ್ನು ಪಾವನಮಾಡು. ವಿರಾಧ, ಶೂರ್ಪಣಖಿ, ಖರ, ದೂಷಣ, ಮಾಯಾವಿ ಮಾರೀಚ ಮೊದಲಾದವರನ್ನೆಲ್ಲ ನಾಶ-ಮಾಡದ್ದೀ. ರಾವಣನು ಮಾಯಾ ಸೀತೆಯನ್ನು ಕದ್ದೊಯ್ಯಲು ನೀನು ಜಟಾಯುವಿಗೆ ಮೋಕ್ಷವನ್ನು ನೀಡುವೆ. ಶಬರಿಯನ್ನು ಕಾಣುವೆ. ವಾಲಿಯ ಸಂಹಾರಮಾಡುವೆ. ಕಪಿಗಳನ್ನೆಲ್ಲ ಕೂಡಿಸಿ ಶರಧಿಗೆ ಸೇತುವೆ ಕಟ್ಟಿ ರಾವಣ ಕುಂಭಕರ್ಣ ಮೊದಲಾದ ರಾಕ್ಷಸರನ್ನೆಲ್ಲ ಸದೆಬಡಿದು (ಸಂಹರಿಸಿ) ಎಲ್ಲರಿಗೂ ಸಂತೋಷವನ್ನುಂಟು ಮಾಡುವೆ. ನಂತರ ಸೀತಾದೇವಿಯೊಡಗೂಡಿ ಅಯೋಧ್ಯಾ ಪಟ್ಟಣಕ್ಕೆ ಬಂದು ರಾಜ್ಯಕಾರಭಾರ ಮಾಡುವೆ. ನಿನ್ನ ಪಾದ ಸೇವೆಯಿಂದ ನಾವು ಪಾವನರಾಗಿದ್ದೇವೆ. ಎಂದು ಮುಂತಾಗಿ ಹೇಳಲು ರಾಮನು ಇದೆಲ್ಲ ನಿಮ್ಮ ಕೃಪೆಯ ಬಲದಿಂದಲೇ ನಡೆಯುವಂಥಾದ್ದು ಎಂದು ತನ್ನ ವಿಷಯವನ್ನು ಪ್ರಕಟಿಸಿದನು. ರಾಮನು ಆ ರಾತ್ರಿ ಅಲ್ಲಿಯೇ ತಂಗಿದನು. ಉದಯಕಾಲವಾಯಿತು. ರಾಮನು ತನ್ನ ಪೂರ್ವಾಹ್ನಿಕವನ್ನೆಲ್ಲ ತೀರಿಸಿದನು. ಮುನಿಗಳನ್ನೆಲ್ಲ ಭೆಟ್ಟಿಯಾದನು. ನಂತರ ಯಮುನಾನದಿಯನ್ನು ದಾಟಿ ಸೀತಾ ಲಕ್ಷ್ಮಣ ಸಹಿತವಾಗಿ ವಾಲ್ಮೀಕಿ ಮಹರ್ಷಿಗಳ ಆಶ್ರಮಕ್ಕೆ ಬರುವಂಥವ-ನಾದನು. ಚಿತ್ರಕೂಟದಲ್ಲಿರುವ ಅತ್ಯಂತ ರಮಣೀಯವಾದ, ನಾನಾತರದ ಗಿಡಮರಗಳಿಂದ ಕೂಡಿದ ವಾಲ್ಮೀಕಿಯಾಶ್ರಮದಲ್ಲಿ ರಾಮನು ವಾಲ್ಮೀಕಿ ಮಹರ್ಷಿಗಳನ್ನು ಕಂಡನು ಎಂಬಲ್ಲಿಗೆ ಹದಿನಾಲ್ಕನೆಯ ಸಂಧಿ ಪೂರ್ಣ **ಗೊಂಡಿತು.**

**ಹದಿನೈದನೆಯ ಸಂಧಿ** :- ಪಾರ್ವತಿಯೇ ಮುಂದಿನ ಕಥೆಯನ್ನು ಕೇಳುವಂಥವಳಾಗು ಎಂದು ಶಂಕರನು ನುಡಿದು ಮುಂದಿನ ವೃತ್ತಾಂತವನ್ನು ಹೇಳಲುಪಕ್ರಮಿಸಿದನು.

ಎದುರು ಬಂದ ಸೀತ ಶ್ರೀರಾಮನನ್ನು ಕಂಡು ವಾಲ್ಮೀಕಿಗೆ ಬಹಳ ಸಂತೋಷವಾಯಿತು. ರಾಮನನ್ನು ಆಲಂಗಿಸಿದನು. ಆತನನ್ನು ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿದನು. ಫಲ ಮೂಲಗಳಿಂದ (ಗೆಡ್ಡೆಗೆಣಸುಗಳಿಂದ) ಭೋಜನ ಮಾಡಿಸಿದನು. ಹೀಗಿರುವಾಗ ರಾಮನು ವಾಲ್ಮೀಕಿ ಮಹರ್ಷಿಗಳಲ್ಲಿ ಈ ರೀತಿ ವಿನಂತಿ ಮಾಡಿಕೊಂಡನು. ತಂದೆಯ ಆಜ್ಞೆಯನ್ನು ಪರಿಪಾಲಿಸುವದಕ್ಕೋಸ್ಕರ ನಾವು ದಂಡಕಾವನಕ್ಕೆ ಹೋಗಲು ಬಂದಿದ್ದೇವೆ. ಎಲ್ಲಿ ಸುಖವಾಗಿರಲು ಸ್ಥಳವಿದೆ ಎಂದು ತಿಳಿಸಿರಿ. ಕಿಂಚಿತ್ಕಾಲ ಅಲ್ಲಿ ಕಳೆವೆನು ಎನ್ನಲು ವಾಲ್ಮೀಕಿ ಅದನ್ನು ಕೇಳಿ ನೀನೆಲ್ಲವನ್ನೂ ಬಲ್ಲೆ. ಆದರೂ ಲೋಕೋಪಕಾರಕ್ಕಾಗಿ ನನ್ನನ್ನು ಕೇಳುತ್ತಿರುವೆ. ನಾನು ಈ ವಿಷಯವಾಗಿ ಹೇಳುವೆ. ಸಾವಧಾನದಿಂದ ಕೇಳು-- ನಿನ್ನ ನಾಮವೇ ಅತ್ಯಂತ ಪವಿತ್ರತಮವಾದುದು. ಸೀತೆ ಸಹಿತ ವಾಸಮಾಡುವ ಸ್ಥಳವೇ ಅತ್ಯಂತ ರಮ್ಯವಾದ ಸ್ಥಳವಾಗಿದೆ. ನಿನ್ನ ನಾಮವನ್ನು ಅಹರ್ನಿಶಿ ಜಪಿಸುವವರು ಹೊನ್ನು, ಮನೆ, ಪಶು, ಧನಧಾನ್ಯಾದಿಗಳಿಂದ ಸಂಪನ್ನರಾಗುವರು. ಯಾರು ಶಾಂತರಾಗಿರುತ್ತಾರೋ ಹಮ್ಮು ಅಹಂಕಾರ ಬಿಟ್ಟವರಾಗಿರುತ್ತಾರೋ ಅವರ ಹೃದಯವೇ ನಿನ್ನ ವಾಸಸ್ಥಳ ಯಾವುದನ್ನೂ ಆಶಿಸದೆ ನಿನ್ನ ಧ್ಯಾನ ನಿರತರಾಗಿರುತ್ತಾರೋ ಅವರ ಹೃದಯವೇ ನಿನ್ನ ಮನೆ, ನೀನೇ ಲೋಕ, ನೀನೇ ಲೋಕ ಚೇಷ್ಟಕ, ನೀನೇ ತನು ಮನ ಪ್ರಾಣೇಂದ್ರಿಯಂಗಳು, ನೀನೇ ಈ ಸಂಸಾರವನ್ನು ದಾಟಿಸುವ ನಾವೆ. ಹೀಗೆಂದು ನಾನಾ ಪ್ರಕಾರವಾಗಿ ರಾಮನನ್ನು ಸ್ತುತಿಸಿದನು. ನಿನ್ನ ನಾಮವೇ ನನ್ನನ್ನು ಉದ್ಧರಿಸಿತು ಎಂದು ಹೇಳುತ್ತ ತನ್ನ ಹಿಂದಿನ ಕಥೆಯನ್ನು ಹೇಳತೊಡಗಿದನು.

ಈ ಹಿಂದೆ ನಾನು ಕಿರಾತನಾದೆನು. ದ್ವಿಜಾತಿಯಲ್ಲಿ ಜನಿಸಿದ್ದರೂ ಕೂಡ ಅನ್ಯಜಾತಿಯ ಶೂದ್ರಿತಿಯೊಡನೆ ಸೇರಿ ರಮಿಸಿದೆ. ಅನೇಕ ಮಕ್ಕಳು

ಜನಿಸಿದರು. ನಾನು ಕಾಮಾಸಕ್ತನಾಗಿ ತಂದೆ ತಾಯಿ ಬಂಧು ಬಾಂಧವರನ್ನು ತ್ಯಜಿಸಿದೆ. ತಾಮಸ ವೃತ್ತಿಯಿಂದ ಕೊಲೆ, ದರೋಡೆ, ಹಿಂಸೆ ಮೊದಲಾದವುಗಳಿಗೆ ಅಂಜದವನಾದೆ. ಚೋರನಾದೆ. ಶೂದ್ರಿತಿಯ ಸಂಸರ್ಗದಿಂದ ಪಟ್ಟಣ, ಊರು, ಕೇರಿ ಮೊದಲಾದವುಗಳನ್ನು ಸುಲಿದು ಜನರಿಗೆ ಪೀಡೆ ಕೊಡುತ್ತಿದ್ದೆ. ನನ್ನ ಮನಸ್ಸು ಯಾವುದಕ್ಕೂ ಹೇಸದಾಯಿತು. ಒಂದು ದಿನ ದಾರಿಯಲ್ಲಿ ಬರುತ್ತಿರುವ ಸಪ್ತರ್ಷಿಗಳನ್ನು ಕಂಡು ಿಂದು ಮುಂದೆ ವಿಚಾರಮಾಡದೆ ಅವರನ್ನು ಸುಲಿಯಲು ದೋಚಲು ಮುಂದಾದೆ. "ಗಂಟುಗಿಂಟುಗಳೇನಾದರೂ ಇದ್ದರೆ ಕೊಡಿರಿ. ನನ್ನ ಹೆಂಡಿರು ಮಕ್ಕಳನ್ನು ಪರಿಪಾಲಿಸಬೇಕು" ಎಂದು ಅವರೊಡನೆ ಹೇಳಿದೆನು. ಅವರು ಹೇಳಿದ್ದೇನೆಂದರೆ "ನಮ್ಮ ವಸ್ತುಗಳನ್ನೆಲ್ಲ ನಿನಗೇ ಕೊಡುವೆವು. ಆದರೆ ಈ ಸುಲಿದು ದೋಚಿ ತರುವ ವಸ್ತುಗಳಿಗೆ ನೀವೆಲ್ಲ ಪಾಲುದಾರರು. ಹಾಗೆಯೇ ನನ್ನ ಪಾಪದಲ್ಲಿಯೂ ನೀವು ಪಾಲು-ದಾರರೇ ಎಂದು ಹೆಂಡತಿ ಮಕ್ಕಳನ್ನು ಕೇಳಿ ಬಾ" ಅಲ್ಲಿಯ ತನಕ ನಾವೆಲ್ಲ ಇಲ್ಲಿಯೇ ಇರುವೆವು. "ಮನೆಗೆ ಹೋಗಿ ಹೆಂಡತಿ ಮಕ್ಕಳನ್ನು ಕೇಳಿದಾಗ ಅವರೆಂದರು-"ಆ ಪಾಪಗೀಪದ ಗೊಡವೆ ನಮಗಿಲ್ಲ. ತಂದು ಹಾಕುವದು ನಿನ್ನ ಕೆಲಸ. ನೀನೆ ನರಕದಲ್ಲಿ ಬೀಳುವವ. ನಮಗೆ ಅದರ ದೋಷವು ಸ್ವಲ್ಪವೂ ಇಲ್ಲ" ಅದನ್ನು ಕೇಳಿದ ಆತನಿಗೆ ಬಹಳ ದುಃಖವಾಯಿತು. ಕೂಡಲೇ ಮುನಿಗಳಿದ್ದಲ್ಲಿಗೆ ಬಂದನು. ಅವರ ದರ್ಶನಮಾತ್ರದಿಂದಲೇ ಶುದ್ಧಾಂತಃಕರಣನಾದನು. ಅವರ ಪಾದಗಳ ಮೇಲೆ ಬಿದ್ದು ಕೊರಳಿ (ನಮಸ್ಕರಿಸಿ) ನನ್ನನ್ನು ಉದ್ಧರಿಸಬೇಕು ಎಂದು ಬೇಡಿಕೊಂಡನು. ಸಾಧು ಸಂಗದಿಂದ ನಿನಗೆ ಒಳ್ಳೆಯದಾಗುವದು ಎಂದು ಹೇಳಿದ್ದಲ್ಲದೇ ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡು ಇವನನ್ನು ರಕ್ಷಿಸಬೇಕು ಮೋಕ್ಷವೀಯಬೇಕು ಎಂದರಲ್ಲದೇ ರಾಮ ಶಬ್ದವನ್ನು ವ್ಯತ್ಯಸ್ತವಾಗಿ (ಮರಾ) ಅವನಿಗೆ ಉಪದೇಶಿಸಿದರು. ಇದನ್ನು ಬಿಡದೇ ಜಪಿಸುತ್ತಿರು. ನಿನಗೆ ಒಳ್ಳೆಯದಾಗು-ವದು. ಎಂದು ಹೇಳಿ ಹೋದರು. ಇತ್ತ ಆ ಬೇಡನು ಅಲ್ಲಿಯೇ ಕುಳಿತು ಬಾಹ್ಯವನ್ನು ಮರೆತು ರಾಮಧ್ಯಾನನಿರತನಾದನು. ಅಲ್ಲಿಯೇ ಆತನ ಶರೀರದ ಮೇಲೆ ಹುತ್ತು ಬೆಳೆಯಿತು. ಹೀಗೆ ಹಲವು ಸಹಸ್ರ ವರ್ಷಗಳು ಕಳೆಯಲು ಆ ಮುನಿಶ್ರೇಷ್ಠರು ಪುನಃ ಆ ಮಾರ್ಗವಾಗಿ ಅಲ್ಲಿಗೆ ಬಂದರು. ನನ್ನ

ಬಾಯಿಂದ ಬರುವ ರಾಮನಾಮವನ್ನು ಆಲಿಸಿದರು. ಅವರು ಕರೆಯಲಾಗಿ ನಾನು ಈ ದಿವ್ಯ ಶರೀರವನ್ನು ಪಡೆದು ಬಂದೆನು ನಿನಗೆ "ವಾಲ್ಮೀಕಿ" ಎಂದು ಹೆಸರಿಟ್ಟಿದ್ದೇವೆ. ಇದು ನಿನಗೆ ಎರಡನೆಯ ಜನ್ಮ ಎಂದು ಹೇಳಿ ನಡೆದರು. ಎಲೈ ರಾಮಚಂದ್ರನೇ ನಾನು ನಿನ್ನ ನಾಮದ ಬಲದಿಂದಲೇ ಹಿರಿಯ ಮುನಿಯಾದೆ. ಇಂದು ನೀನು ನಮ್ಮಾಶ್ರಮಕ್ಕೆ ಬಂದಿದ್ದೀ. ನೀನು ನನ್ನ ಮುಕ್ತಿಗೆ ಕಾರಣನಾಗಿದ್ದೀ. ನೀನೆ ನನ್ನ ಕಲ್ಪತರು ಎಂದಿತ್ಯಾದಿಯಾಗಿ ರಾಮನನ್ನು ಬಹುವಾಗಿ ಸ್ತುತಿಸಿದನು. ನಿನಗೆ ಹತ್ತಿರದಲ್ಲಿಯೇ ಉತ್ತಮವಾದ ಸ್ಥಳವೊಂದನ್ನು ತೋರಿಸುವೆ ಎಂದು ಹೇಳಿ ಆ ಶ್ರೀ ರಾಮನಿಗೆ ಉತ್ತಮ ಸ್ಥಳವಾದ ಶೃಂಗಗಿರಿಯನ್ನು ತೋರಿಸಿದನು. ಅಲ್ಲಿಯೇ ರಾಮನು ಪರ್ಣಶಾಲೆಯನ್ನು ಕಟ್ಟಿ ಸತಿ ಸೀತಾದೇವಿಯ ಸಹಿತ ಲಕ್ಷ್ಮಣನೊಡನೆ ಸುಖದಿಂದ ಇದ್ದನು ಎಂಬಲ್ಲಿಗೆ ಹದಿನೈದನೆಯ ಸಂಧಿ ಮುಗಿಯಿತು.

ಹದಿನಾರನೆಯ ಸಂಧಿ :– ಎಲೈ ಪಾರ್ವತಿಯೇ ಪವಿತ್ರತಮವಾದ ಶ್ರೀ ರಾಮಚಂದ್ರನ ಮುಂದಿನ ಕಥೆಯನ್ನು ಕೇಳುವಂಥವಳಾಗು. ಸಾವಧಾನದಿಂದ ವಿವರಿಸುವಂಥವನಾಗುತ್ತೇನೆ.

ಇತ್ತ ಶ್ರೀ ರಾಮಚಂದ್ರನು ಸತಿಯಾದ ಸೀತಾದೇವಿಯೊಡನೆಯೂ ತಮ್ಮನಾದ ಲಕ್ಷ್ಮಣನೊಡನೆಯೂ ಸುಖದಿಂದ ಚಿತ್ರಕೂಟದಲ್ಲಿ ವಾಸವಾಗಿದ್ದನು. ಪಾರ್ವತಿಯೇ ಅತ್ತ ಅಯೋಧ್ಯಾ ಪಟ್ಟಣದಲ್ಲಿ ನಡೆದ ವಿದ್ಯಮಾನಗಳನ್ನು ಕೇಳುವಂಥವಳಾಗು. ರಾಮಲಕ್ಷ್ಮಣರು ವನಕ್ಕೈದಿದ ಕೂಡಲೇ ದಶರಥನು ಬಹಳ ಚಿಂತಾಕ್ರಾಂತನಾದನು. ಸುಮಂತನು ಪುನಃ ಬಂದ ಬಳಿಕ ಆತನನ್ನು ಪ್ರಶ್ನಿಸಿದನು– "ಸುಮಂತನೇ ರಾಮಲಕ್ಷ್ಮಣರನ್ನು ಎಲ್ಲಿ ಬಿಟ್ಟು ಬಂದೆ ? ಅವರು ಏನು ಹೇಳಿದರು ?" ಸುಮಂತನು ಹೇಳಿದ್ದೇನೆಂದರೆ— "ತಾನು ಅವರನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಗಂಗಾನದಿಯ ತಟದಲ್ಲಿರುವ ಶೃಂಗವೇರಿಗೆ ಬಿಟ್ಟು ಬಂದೆ. ಗುಹನು ಬಂದು ನಮ್ಮನ್ನು ಸನ್ಮಾನಿಸಿದ. ರಾಮ ಆತನ ಕಡೆಯಿಂದ ವಟದ ಹಾಲನ್ನು ತರಿಸಿಕೊಂಡು ಜಟೆ ಕಟ್ಟಿಕೊಂಡ. ತಂದೆ ತಾಯಂದಿರನ್ನು ಸಮಾಧಾನಪಡಿಸುವ ಕೆಲಸ ನಿನ್ನದು ಎಂದುಸುರಿದ. ಸೀತೆಯಾದರೋ ತನ್ನನ್ನು ಏಕಾಂತದಲ್ಲಿ

ಕರೆದು ನಾನು ಅತ್ತೆಮಾವಂದಿರಿಗೆ ನಮಸ್ಕಾರ ಮಾಡಿದ್ದೇನೆ ಎಂಬುದನ್ನು ತಿಳಿಸು. ನಂತರ ಅವರು ಗಂಗಾನದಿಯನ್ನು ದಾಟಿದರು. ನಾನು ಇತ್ತ ಬಂದೆ." ಇವೆಲ್ಲವನ್ನೂ ಕೇಳಿದ ದುಃಖಿತೆಯಾದ ಕೌಸಲೆಯು ದಶರಥನನ್ನು ಮೂದಲಿಸಿದಳು. ಆ ಮೂದಲಿಕೆಯ ಮಾತನ್ನು ಕೇಳಿ ದಶರಥನು "ಉರಿಯುವ ಗಾಯಕ್ಕೆ ಉಪ್ಪನ್ನು ಯಾಕೆ ಸುರಿಯುತ್ತೀ ?" ಎಂದು ಕೇಳಿದನು. ನನ್ನ ವಿಷಯವನ್ನು ಕೇಳು. ನನ್ನ ಬಾಲ್ಯದಲ್ಲಿಯೇ ನನಗೆ ಮುನಿಶಾಪ ಬಂದಿಹುದು. ಒಂದು ದಿನ ಬೇಟೆಗೆ ಹೋದಾಗ ಧನುರ್ಬಾಣಗಳನ್ನು ಹಿಡಿದು ವನದ ಮಧ್ಯದಲ್ಲಿ ರಾತ್ರಿಯನ್ನು ಕಳೆಯುತ್ತಿರಲು, ಅರ್ಧ ರಾತ್ರಿಯ ಸುಮಾರಿಗೆ ಸರೋವರದಲ್ಲಿ ಗುಳು ಗುಳು ಎಂಬ ಶಬ್ದವಾಯಿತು. ಮೃಗವೇ ಬಂದಿದೆ ಎಂದು ತಿಳಿದು ನನ್ನ ಶಬ್ದವೇಧಿ ಬಾಣವನ್ನು ಬಿಟ್ಟೆನು. ಆಗ ನಾ ಬಿದ್ದೆ ! ಹಾ ವಿಧಿಯೇ !! ನಾನೇನು ಉಪದ್ರವ ಮಾಡಿದ್ದೇನೆ !!! ತಂದೆ ತಾಯಂದಿರು ಬಾಯಾರಿದ್ದಾರೆ ಎಂಬ ಹಾಹಾಕಾರ ಕೇಳಿ ಭಯದಿಂದ ಅಲ್ಲಿಗೆ ಹೋಗಿ ನೋಡಿ ರಕ್ತಸಿಕ್ತನಾಗಿ ಬಿದ್ದ ವ್ಯಕ್ತಿಯನ್ನು ನೋಡಿದೆ. ನಾನು ಅಪರಾಧಿ ಎಂದು ವಿವರಿಸಿದೆ. ಎಲೈ ರಾಜನೇ ಸಂಶಯಪಡಬೇಡ ! ನಾನು ವೈಶ್ಯ. ನಿನಗೆ ಬ್ರಹ್ಮಹತ್ಯೆ ದೋಷವಿಲ್ಲ. ನನ್ನ ತಂದೆ ತಾಯಂದಿರು ನೀರಡಿಕೆಯಿಂದ ಬಾಯಿ ಬಾಯಿ ಬಿಡುತ್ತಿದ್ದಾರೆ. ಅವರಿಗೆ ನೀರುಣಿಸು. ಆತನ ಅಣತಿಯ ಪ್ರಕಾರ ಕುರುಡರಾದ ಆತನ ತಂದೆ ತಾಯಂದಿರಿಗೆ ವಿಷಯ ತಿಳಿಸಿ ತನ್ನ ತಪ್ಪನ್ನು ಕ್ಷಮಿಸಲು ಕೇಳಿಕೊಂಡೆನು. ತಮ್ಮ ಮಗನು ಯಾಕೆ ತಡ ಮಾಡಿದನೋ ಎಂದು ಅವರು ಕಾದುಕೊಂಡಿದ್ದರು. ಶಬ್ದವನ್ನು ಕೇಳಿದ ಅವರು ಸಂತೋಷದಿಂದ ನೀರನ್ನು ಕೇಳಿ ಕುಡಿದರು. ತಮ್ಮ ತೃಷೆಯಾರಿಸಿಕೊಂಡರು. ಬಂದವನು ಸುತನಲ್ಲ. ನಾನು ದಶರಥ ಎಂದು ಹೇಳಿ ನಡೆದ ಘಟನೆಯನ್ನು ವಿವರಿಸಿದೆನು. ಅದನ್ನು ಕೇಳಿದ ಅವರು ಬಹಳ ದುಃಖಿತ-ರಾದರು. ಕೂಡಲೇ ರಾಜನಿಂದಲೇ ಚಿತೆಯನ್ನು ರಚಿಸಿಕೊಂಡು ಪ್ರಾಣ ನೀಗುವ ಸಮಯದಲ್ಲಿ "ಪುತ್ರವಿಯೋಗದಿಂದಲೇ ನಿನಗೆ ಮರಣವಾಗಲಿ" ಎಂದು ಶಪಿಸಿ ಚಿತೆಯಲ್ಲಿ ಪ್ರಾಣಬಿಟ್ಟರು. ಆ ಶಾಪವೇ ಈಗ ಫಲನೀಡುತ್ತಿದೆ ಎನ್ನುತ್ತ ಗತಪ್ರಾಣನಾದನು. ಕೌಸಲ್ಯೆ ಸುಮಿತ್ರೆಯರೆಲ್ಲರಾದಿಯಾಗಿ ಬಹು ವಾಗಿ ದುಃಖಿಸಿದರು. ದುಃಖದ ವಿಷಯವನ್ನು ಕೇಳಿ ತಿಳಿದ ವಸಿಷ್ಠ

ಸುಮಂತ್ರಾದಿಗಳು ಅಲ್ಲಿಗೆ ಧಾವಿಸಿಬಂದರು. ಕೂಡಲೇ ದಶರಥನ ಶರೀರವನ್ನು ತೈಲಕಟಾಹದಲ್ಲಿರಿಸಿ ಭರತನಿಗೆ ಹೇಳಿ ಕಳುಹಿಸಿದರು. ಭರತ ಶತ್ರುಘ್ನರು ತಡಮಾಡದೇ ಬಂದರು. ರಾಮನಿಗೇನಾಯಿತು ? ದಶರಥ ಹೇಗಿದ್ದಾನೆ ? ಪಟ್ಟಣವೆಲ್ಲ ಹಾಳು ಸುರಿಯುತ್ತಿದೆ. ಯಾಕೆ ? ಇತ್ಯಾದಿ ಪ್ರಶ್ನೆ ಕೇಳುತ್ತ ಬಂದ ಭರತನನ್ನು ಕಂಡು ಕೈಕೆ ಸಂತೋಷಿತಳಾದಳು. ತಂದೆಯೆಲ್ಲಿ ? ಎಂದು ಕೇಳಲಾಗಿ ಆತ ಸುರಲೋಕಕ್ಕೆ ಸಂದ ಎಂಬ ವಿಷಯ ತಿಳಿಸಿದಳು. ಅದನ್ನು ಕೇಳಿದ ಭರತನು ಮೂರ್ಛಾಕ್ರಾಂತನಾದನು. ರಾಮಚಂದ್ರನಿಗೆ ಪಟ್ಟ ಕಟ್ಟದೇ ತನ್ನಯ್ಯನಳಿದನೇ ? ಎಂದು ದುಃಖಿಸುತ್ತಿರಲು ಕೈಕೆ ಹೇಳಿದಳು – ಮಗನೇ ನಿನಗಾಗಿಯೇ ಎಲ್ಲವನ್ನೂ ಮಾಡಿಟ್ಟಿದ್ದೇನೆ. ರಾಮನಿಗೆ ಪಟ್ಟಾಭಿಷೇಕ ಮಾಡಬೇಕೆಂದು ಸಂಭ್ರಮಿಸುತ್ತಿರುವಾಗ ದಶರಥನಿಗೆ ಈ ಹಿಂದೆ ನನಗೆ ಕೊಟ್ಟ ವರವೆರಡನ್ನು ನೆನಪಿಸಿದೆ. ರಾಮನಿಗೆ ಹದಿನಾಲ್ಕು ವರಷ ವನವಾಸವಾಗಬೇಕು. ಭರತನಿಗೆ ಪಟ್ಟಾಭಿಷೇಕವಾಗಬೇಕು ಎಂದು. ಅದೇ ಪ್ರಕಾರ ಸತ್ಯಕ್ಕೆ ಕಟ್ಟುಬಿದ್ದು ರಾಮನನ್ನು ಅಡವಿಗೆ ಅಟ್ಟಿದ. ರಾಮನೊಡನೆ ಲಕ್ಷ್ಮಣ ಸೀತೆಯರೂ ಸಹ ಹೋದರು. ನಿನಗೆ ಆಗತಕ್ಕ ತೊಡಕನ್ನು ನಿವಾರಣೆ ಮಾಡಿದ್ದೇನೆ. ರಾಜ್ಯವಾಳು ಎಂದು ಸಂತೈಸಿದಳು. ಈ ಹೃದಯ ಬಿರಿಯುವ ಮಾತನ್ನು ಕೇಳಿ ಭರತ ಬಹಳ ದುಃಖಿತನಾದ. ಅವಳನ್ನು ದುರುಗುಟ್ಟಿಕೊಂಡು ನೋಡಿ ದುಷ್ಟೆ ! ದುರಾತ್ಮೆ !! ಗಂಡನನ್ನಿರಿದ ಪಾತಕಿ !!! ಯಾತಕ್ಕಾಗಿ ನಿನ್ನ ಹೊಟ್ಟೆಯಲ್ಲಿ ಹುಟ್ಟಿದೆನೋ ನಾನು ಅರಿಯೆ. ಈಗಲೇ ವಿಷ ಸೇವಿಸುವೆ. ಅಗ್ನಿಯನ್ನು ಹೊಗುವೆ. ಈಗಾಗಲೇ ನಾನು ಯಾವ ರೀತಿಯಿಂದಲಾದರೂ ಯಮ ಪಟ್ಟಣವನ್ನು ಸೇರುವೆ. ಇನ್ನಿದ್ದು ಫಲವೇನು ? ಎಂದು ಮುಂತಾಗಿ ಹಲುಬುತ್ತ ಕೌಸಲೆಯ ಮನೆಗೆ ಬಂದನು. ಅವಳ ಪಾದದಡಿಯಲ್ಲಿ ಬಿದ್ದು ದುಃಖಿಸಿದನು. ನಿನಗೆ ಬಹಳ ಒಳ್ಳೆಯದಾಯಿತಲ್ಲವೇ ? ಎಂದು ಮೂದಲಿಸಿದಳು. ಆ ರಾಮ ವಲ್ಕಲವನ್ನುಟ್ಟು ವನಕ್ಕೆ ಹೋಗುವದನ್ನು ನಾನು ಹೇಗೆ ನೋಡಲಿ ! ದೇವರೇ ತನಗೆ ಮಗನಾಗಿ ಹುಟ್ಟಿದ್ದ ಎಂದು ತಿಳಿದಿದ್ದೆ. ಆದರೆ ದೈವ ದಾಟವದೆಲ್ಲಿ ? ಎಂದು ಹಲುಬಿದಳು. ತಾನು ನಿರಪರಾಧಿ ತನಗಾವ ಸಂಗತಿಯೂ ಗೊತ್ತಿಲ್ಲ ಎಂದು ಹೇಳಿ ಆಕೆಯ ಪಾದದಡಿಯಲ್ಲಿ ಬಿದ್ದು

ಮೊರೆಯಿಟ್ಟನು. ಆಗ ಕೌಸಲೆಯು ಆತನನ್ನು ಹಿಡಿದೆತ್ತಿ ಸಮಾಧಾನ ಪಡಿಸಿದಳು. ಅಷ್ಟರಲ್ಲಿ ವಸಿಷ್ಠ ಸುಮಂತರು ಬಂದು ಭರತನನ್ನು ಸಮಾ-ಧಾನ ಪಡಿಸಿದರು. ಹುಟ್ಟಿದವನಿಗೆ ಸಾವು ತಪ್ಪಿದ್ದಲ್ಲ ಎಂಬುದನ್ನು ತಿಳಿಸಿ ಮುಂದಿನ ಕಾರ್ಯಕ್ಕೆ ಸಜ್ಜುಗೊಳಿಸಿದರು. ರಾಮ ಯಜ್ಞಪ್ರಸಾದದಿಂದ ಹುಟ್ಟಿದವ. ನಿನ್ನ ತಂದೆ ಈಗ ಇಂದ್ರನ ಅರ್ಧಾಸನವನ್ನು ಏರಿದ. ಪ್ರತಿಯೊಬ್ಬರಿಗೂ ನೀಡಬೇಕಿದ್ದಾರೆ. ಎಲೈ ಭರತನೇ ನೀನು ಯಾತಕ್ಕಳುವೆ ? ರಾಮನು ನಿರುಪಮನು ಶುದ್ಧನು ನಿರ್ಮಲನು. ನಿತ್ಯನು ನಿರ್ವಿಕಾರನು. ಆತನಿಗೆ ನಾಶವೆಂಬುದೇ ಇಲ್ಲ. ಈ ಸಂಸಾರದಲ್ಲಿ ತಾತ, ತಾಯಿ, ಪತ್ನಿ, ಮಾವ ಮೊದಲಾದ ಸಂಬಂಧವೆಲ್ಲ ಮಾಯೆಗೆ ಸಂಬಂಧಪಟ್ಟಿದ್ದು. ಎಂದು ತಿಳಿಯಲೇಬೇಕು. ಈ ಸಂಸಾರದಲ್ಲಿ ಸಾರವಿಲ್ಲ ಎಂದು ತಿಳಿಯಬೇಕು. ತಿಳಿದವನಿಗೆ ವಿರತಿ, ವಿಚಾರ, ಶಾಂತಿ, ಕ್ಷಾಂತಿ ದಯೆ, ಧೃತಿ, ಸತ್ಯ ನಿಷ್ಠೆ ಮೊದಲಾದವುಗಳೇ ಸಾರಭೂತವಾಗಿರುವವು. ಜನಿಸಿದವರಿಗೆ ಮರಣ ಕಟ್ಟಿಟ್ಟದ್ದು. ಪ್ರಾರಬ್ಧ ಕರ್ಮ ತೀರಿದ ಕೂಡಲೇ ಮತ್ತೊಂದು ದೇಹ ವನ್ನು ಧರಿಸುವರು ಅಷ್ಟೇ ! ಹ್ಯಾಗೆ ಹಳೆಯ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರ ಧರಿಸುವರೋ ಹಾಗೆ. ಆದುದರಿಂದ ನೀನು ಶೋಕವನ್ನು ಬಿಡು. ಪಿತೃಕಾರ್ಯವನ್ನು ನೆರವೇರಿಸು. ಎಂದು ಹೇಳಿದನು. ವಸಿಷ್ಠರ ಮಾತಿನಂತೆ ಪಿತೃಕಾರ್ಯವನ್ನೆಲ್ಲ ಸಾಂಗವಾಗಿ ನೆರವೇರಿಸಿದನು. ನಂತರ ರಾಮನ ಬಳಿಗೆ ಇಂದೇ ಹೋಗುವೆ ಆತನನ್ನೊಮ್ಮೆ ಸೇರುವೆ ಎಂದು ಮನಸ್ಸಿನಲ್ಲಿ ಚಿಂತಿಸುತ್ತಿರುವಲ್ಲಿಗೆ ಹದಿನಾರನೆಯ ಸಂಧಿ ಮುಗಿಯಿತು.

**ಹದಿನೇಳನೆಯ ಸಂಧಿ** :- ಅಗಜೆಯೇ ಮುಂದಿನ ಕಥೆಯನ್ನು ಕೇಳುವಂಥವಳಾಗು.

ಮರುದಿನ ಭರತನು ಶತ್ರುಘ್ನನೊಡಗೂಡಿ ಇರುವಾಗ ವಸಿಷ್ಠರು ಬಂದು ರಾಜ್ಯಾಭಿಷೇಕದ ವಿಷಯವಾಗಿ ಮಾತನಾಡಲು- ನನಗೆ ಅರಸುತನ ಬೇಡ. ರಾಮನ ಬಳಿಗೆ ಹೋಗಿ ಅವನನ್ನೇ ಕರೆತರುತ್ತೇನೆ. ಎಂದು ಹೇಳಿದನು. ಮತ್ತು ತನ್ನೆಲ್ಲ ಪತ್ನಿಯರಿಗೆ ರಾಮನ ಬಳಿಗೆ ಹೋಗಲು

ಸನ್ನದ್ಧರಾಗಿರಿ ಎಂದು ತಿಳಿಸಿದನು. ಅವರನ್ನೆಲ್ಲ ಕರಕೊಂಡು ಮಾತೆಯರು ಸಹಿತ ವಸಿಷ್ಠ ಸುಮಂತಾದಿಗಳೊಂದಿಗೆ ಪುರದಿಂದ ಹೊರಟನು. ಶೃಂಗವೇರಿ ಪುರಕ್ಕೆ ಬಂದನು.

ಭರತನು ಸೈನ್ಯ ಸಹಿತನಾಗಿ ಬಂದುದನ್ನು ಕಂಡು ಗುಹನಿಗೆ ಬಹಳ ಶಂಕೆ ಉತ್ಪನ್ನವಾಯಿತು. ಸೇನಾಸಹಿತ ಭರತ ಯಾಕೆ ಬಂದ ? ಎಂದು. ಆದುದರಿಂದ ತನ್ನ ಸೇನೆಗೆ ತಯಾರಿರಲು ಹೇಳಿ (ತಿಳಿಸಿ) ತಾನು ಕಪ್ಪ ಗಾಣಿಕೆಗಳೊಂದಿಗೆ ಭರತನಿದ್ದಲ್ಲಿ ಬಂದು ರಾಮಧ್ಯಾನದಲ್ಲಿ ನಿರತನಾಗಿರುವ ಭರತನನ್ನು ಕಂಡು ಚಕಿತನಾದ. ಗುಹನು ಬಂದು ವಂದಿಸಲು ಅವನನ್ನು ತಕ್ಕೈಸಿಕೊಂಡು ರಾಮನ ವಿಚಾರವಾಗಿ ಕೇಳಿದ. ರಾಮ ಎಲ್ಲಿ ಮಲಗಿದ್ದ ? ಏನು ಮಾಡಿದ್ದ ? ಎಂಬ ಎಲ್ಲಾ ವಿಚಾರವನ್ನು ಕೇಳಿ ತಿಳಿದ. ಸೀತಾ ಮಾತೆಯ ಆಭರಣಗಳು ಉದುರಿಬಿದ್ದ ಸ್ಥಳವನ್ನು ನೋಡಿ ಭರತ ಬಹು ದುಃಖಿಸಿದ. ತನ್ನ ಕಾರಣದಿಂದಲೇ ಸೀತೆಗೆ ಈ ಪರಿ ಕಷ್ಟ ಬಂತು. ಪಲ್ಲಂಗದಲ್ಲಿ ಪವಡಿಸುವ ಸೀತೆ ಕಲ್ಲುನೆಲದ ಮೇಲೆ ಮಲಗುವಂತಾಯಿತು. ಎಂದು ದುಃಖಿಸುತ್ತ ರಾಮನಿರುವ ತಾಣದ ಬಗ್ಗೆ ಕೇಳಿದನು. ಶ್ರೀ ರಾಮ ಚಂದ್ರನು ಚಿತ್ರಕೂಟದಲ್ಲಿ ಮುನಿಗಳ ನಡುವೆ ಸುಖದಿಂದ ಇದ್ದಾನೆ ಎಂಬ ವಿಷಯವನ್ನು ಗುಹನು ತಿಳಿಸಿದನು. ನಾವೆಲ್ಲ ಅಲ್ಲಿಗೆ ಹೋಗೋಣ ಎನ್ನಲು ಗುಹನು ಅವರೆಲ್ಲರನ್ನು ತನ್ನ ನಾವೆಯ ಮೂಲಕ ದಾಟಿಸಿದನು. ಅವರೆಲ್ಲರೂ ಭರದ್ವಾಜಾಶ್ರಮಕ್ಕೆ ಬಂದರು. ತನ್ನ ಸೈನ್ಯವನ್ನೆಲ್ಲ ದೂರವಿರಿಸಿ ತಾನೊಬ್ಬನೇ ತಾಯಂದಿರೊಡಗೂಡಿ ಮುಂದೆ ಹೊರಟನು. ಅಲ್ಲಿ ತೇಜೋ ನಿಧಿಯಾದ ಮುನಿಯನ್ನು ಕಂಡನು. ಭರತನು ಮುನಿಯನ್ನು ಕಂಡು ನಮಸ್ಕರಿಸಿದನು. ಮುನಿಯಾದರೋ ಅವನನ್ನು ಸತ್ಕರಿಸಿದನು. ಮತ್ತು ಬಂದ ಕಾರಣವನ್ನು ಕೇಳಿದನು. ನೀವೆಲ್ಲವನ್ನೂ ಬಲ್ಲಿರಿ. ಆದರೆ ನನ್ನ ಬಾಯಿಯಿಂದ ಕೇಳಬೇಕೆಂದು ಆಶಿಸಿದ್ದೀರಿ. ಕೈಕೆಯ ಕಾರಣದಿಂದ ನಾನು ರಾಮರಾಜ್ಯಕ್ಕೆ ಕಂಟಕನಾಗಿದ್ದೇನೆ. ಕಾಯಾ ವಾಚಾ ಮನಸಾ ನಾನು ರಾಮನಿಗೆ ಅಪಚಾರವೆಸಗಿದವನಲ್ಲ. ನೀವೇ ತಿಳಿದು ನೋಡಿ ನಾನು ಕ್ಷುದ್ರನೋ ಅಥವಾ ಶುದ್ಧನೋ ಎಂದು. ರಾಮನನ್ನು ಕಂಡು ಆತನನ್ನು ಅಯೋಧ್ಯಾ ಪಟ್ಟಣಕ್ಕೆ ಕರಕೊಂಡು ಹೋಗಿ ಪಟ್ಟಾಭಿಷೇಕ ಮಾಡಿದ ಹೊರತು ನನಗೆ

ಸಮಾಧಾನವಿಲ್ಲ ಎಂದನು. ಇದನ್ನು ಕೇಳಿದ ಭರದ್ವಾಜರು ಹೇಳಿದರು-- ಇದರಲ್ಲಿ ನಿನ್ನ ಕೈವಾಡವೇನೂ ಇಲ್ಲ. ದೈವತಂತ್ರವೇ ಇದು. ಇದನ್ನು ನಾನು ಅಂತಜ್ಞಾ್ನನದೃಷ್ಟಿಯಿಂದ ತಿಳಿದಿದ್ದೇನೆ. ನಾಳೆ ನೀನು ಅವನನ್ನು ನೋಡಬಹುದು. ಈ ರಾತ್ರಿ ನಿನ್ನ ಸೇನಾಸಮೇತನಾಗಿ ಈ ಆಶ್ರಮದಲ್ಲೇ ನೀನು ಇರು ಎಂದು ಹೇಳಿ ಆತನ ಸೈನ್ಯಕ್ಕೆ ಕಾಮಧೇನುವಿನ ಪ್ರಸಾದ ದಿಂದ ಸತ್ಕಾರವನ್ನು ನಡೆಸಿದನು. ನಿಮ್ಮ ಮಾತನ್ನು ಮೀರಲಾರೆ ಎಂದು ಉಸುರಿದ ಭರತನು ಆ ರಾತ್ರಿಯನ್ನು ಅಲ್ಲಿಯೇ ಕಳೆದನು. ಮರುದಿನ ಅವರೆಲ್ಲರೂ ಚಿತ್ರಕೂಟಕ್ಕೆ ನಡೆದರು. ಮುನಿಗಳಾಶ್ರಮಗಳಲ್ಲೆಲ್ಲೂ ರಾಮ-ನನ್ನು ಕಾಣದೆ ಋಷಿಪುಂಗವರನ್ನು ಭರತನು ಕೇಳಿದನು. ಅವರು ಗಂಗಾ ತೀರದ ಉತ್ತರದ ತಟದಲ್ಲಿ ನಾನಾಫಲಭರಿತವಾದ ವನದಲ್ಲಿ ಶ್ರೀ ರಾಮನು ಇದ್ದಾನೆ ಎಂದು ಹೇಳಿದರು. ಅವರ ಹೇಳಿಕೆಯಂತೆ ಮುಂದುವರಿದು ಬರುತ್ತಿರುವಾಗ ನೆಲದ ಮೇಲೆ ರಾಮಪಾದಚಿಹ್ನೆಯನ್ನು ಕಂಡನು. ಅದನ್ನು ನೋಡಿದ ಅವನು ತಾನು ಧನ್ಯನಾದೆ ಎಂದು ಭಾವಿಸಿದ. ತಾನು ಬಂದುದಕ್ಕೆ ಒಳ್ಳೆಯ ಫಲವಾಯ್ತು. ಶ್ರೀ ರಾಮಪಾದ ಲಾಂಛನದ ದರುಶನವಾಯ್ತು ಮುಂದೆ ಬರಬರುತ್ತ ಸುಶೋಭಿತನಾದ, ಲಕ್ಷ್ಮಣನಿಂದ ಸೇವ್ಯನಾದ ಶ್ರೀ ರಾಮಚಂದ್ರನನ್ನು ಭರತನು ಕಂಡನು. ಎಂಬಲ್ಲಿಗೆ ಹದಿ-ನೇಳನೆಯ ಸಂಧಿಯು ಮುಕ್ತಾಯಗೊಳ್ಳುತ್ತದೆ.

**ಹದಿನೆಂಟನೆಯ ಸಂಧಿ :-** ಎಲೈ ಗಿರಿರಾಜಸುತೆಯೇ ಮುಂದಿನ ಘಟನೆಯ ವಿವರವನ್ನು ಕೇಳುವಂಥವಳಾಗು ಹೇಳುತ್ತೇನೆ ಎಂದು ಹೇಳುತ್ತ ಕಥೆಯನ್ನು ಮುಂದುವರಿಸಿ ಹೇಳಲುಪಕ್ರಮಿಸಿದನು.

ಆ ಮಹಾಪುರುಷನಾದ ಶ್ರೀ ರಾಮಚಂದ್ರನನ್ನು ಕಂಡಕೂಡಲೇ ಭರತನು ಅತಿ ವೇಗದಿಂದ ಓಡೋಡಿ ಬಂದು ರಾಮಚಂದ್ರನ ಚರಣಾರ ವಿಂದಗಳಲ್ಲಿ ಶ್ರೀ ರಾಮಚಂದ್ರನೇ ಕಾಪಾಡು ಕಾಪಾಡು ಎನ್ನುತ್ತ ಬಿದ್ದನು. ಬಂದು ಬಿದ್ದಂಥ ಭರತನನ್ನು ಹಿಡಿದೆತ್ತಿ ಶ್ರೀ ರಾಮನು ಆಲಂಗಿಸಿಕೊಂಡನು. ಅಷ್ಟರಲ್ಲಿ ಅಲ್ಲಿಗೆ ಸುಮಿತ್ರೆ ಕೈಕೆ ಕೌಸಲೆ ಮೊದಲಾದವರೆಲ್ಲ ಬಂದು ತಲುಪಿದರು. ತಾಯಂದಿರನ್ನು ಕಂಡ ಸಿರಿರಾಮನು ಎದ್ದು ಬಂದು ಅವರ

ಪಾದಗಳಿಗೆ ವಂದಿಸಿದನು. ತಾಯಂದಿರು ಆತನನ್ನು ಆಲಂಗಿಸಿಕೊಂಡರು. ಗುರು ವಸಿಷ್ಠರನ್ನು ಕಂಡ ರಾಮನು ಅವರಿಗೂ ಸಾಷ್ಟಾಂಗ ನಮಸ್ಕಾರ ಮಾಡಿದ. ನಿಮ್ಮನ್ನೆಲ್ಲ ಕಂಡು ನನಗೆ ಬಹಳ ಆನಂದವಾಯಿತು. ಅರಸನ ಪರಿಸ್ಥಿತಿ ಏನು ? ಭರತ ಯಾಕೆ ದುಃಖಿತ ? ಎಂಬಿತ್ಯಾದಿ ಪ್ರಶ್ನೆಗಳಿಗೆ ವಸಿಷ್ಠರು ಉತ್ತರವಿತ್ತರು – ನಿನ್ನ ವಿರಹದಿಂದ "ರಾಮ ರಾಮ" ಎನ್ನುತ್ತ ದಶರಥ ದಿವಂಗತನಾದ. ಇದನ್ನು ಕೇಳಿದ ರಾಮ ಬಹುದುಃಖಿತನಾದ. ಪ್ರಾಕೃತ ಮನುಷ್ಯರಂತೆ ಮತ್ತಷ್ಟು ದುಃಖಿಸಿದ. ತಂದೆಯೇ ; ನನ್ನನ್ನು ಬಿಟ್ಟು ಹೊರಟುಬಿಟ್ಟೆಯಾ ? ಇನ್ನು ನನಗೆ ಗತಿ ಯಾರು ? ಇದನ್ನು ಕಂಡು ಸೀತಾ ಲಕ್ಷ್ಮಣರೂ ಸಹ ದುಃಖಪೀಡಿತರಾದರು. ರಾಮ ಮಾತೆಯರು, ಇಷ್ಟಮಿತ್ರರು, ಬಂಧು ಬಾಂಧವರೆಲ್ಲ ದುಃಖಿಸತೊಡಗಿದರು. ಆಗ ವಸಿಷ್ಠರು ಶ್ರೀ ರಾಮಚಂದ್ರನನ್ನು ಸಮಾಧಾನಮಾಡತೊಡಗಿದರು. ಲೋಕ ಸಂಗ್ರಹನಾದ ನಿನಗೆ ಈ ದುಃಖ ನಿನ್ನ ಆತ್ಮಕ್ಕೋ ? ದೇಹಕ್ಕೋ ? ಬರಿದೇ ಮಾಯಾ ಮೋಹಿತನಾಗಬೇಡ. ಆತ್ಮನು ನಿರವಯನು. ಅದ್ವಯನು. ಸುಖದುಃಖ ಜರೆನರೆ ಮೊದಲಾದವುಗಳು ಇವಾವುದೂ ಆತ್ಮನಿಗೆ ಸಂಬಂಧ ಕಲ್ಪಿಸಲಾರದು. ಕನಸಿನ ಹಾಗೆ ಮಾಯೆ ನಮ್ಮನ್ನು ಸುತ್ತುವರಿದಿದ್ದಾಳೆ. ಹೀಗೆ ನಾನಾ ರೀತಿಯಿಂದ ರಾಮನಿಗೆ ಆತ್ಮತತ್ವವನ್ನು ತಿಳಿಸುತ್ತಾನೆ. ಆತ್ಮನಿಗೆ ಇದಾವುದರ ಲೇಪವೂ ಇಲ್ಲ. ಆದ್ದರಿಂದ ನೀನು ಇದೆಲ್ಲವನ್ನೂ ಬಿಟ್ಟು ಮುಂದಿನ ಕರ್ತವ್ಯಕ್ಕೆ ಮನಮಾಡು ಎಂದು ತಿಳಿಸಿದನು. ವಸಿಷ್ಠರ ಅಣತಿಯಂತೆ ತಾನು ತಿನ್ನುವ ಆಹಾರದಿಂದಲೇ (ಕಂದ ಮೂಲ ಫಲಗಳಿಂದಲೇ) ಪಿಂಡವನ್ನು ಮಾಡಿ ತಂದೆಗೆ ತಿಲೋದಕವನ್ನು ನೀಡಿದನು. ಎಲ್ಲರೂ ಸ್ನಾತರಾಗಿ ಪರ್ಣಶಾಲೆಗೆ ಬಂದು ವಿಶ್ರಮಿಸಿದರು. ಮರುದಿನ ಎಲ್ಲರೂ ಕುಳಿತಿರುವಾಗ ಭರತನು ರಾಮನ ಬಳಿ ಬಂದು ಈ ರೀತಿ ಹೇಳಿದನು— ಅಣ್ಣನೇ ನೀನು ಅಯೋಧ್ಯಾ ಪಟ್ಟಣಕ್ಕೆ ಬಂದು ರಾಜ್ಯದ ಧುರವನ್ನು ವಹಿಸು. ತಂದೆಯ ನಂತರ ಹಿರಿಯಣ್ಣನೇ ರಾಜ್ಯಕ್ಕೆ ಅಧಿಕಾರಿ. ಧರ್ಮ ನೀತಿ ತಪ್ಪದೇ ರಾಜ್ಯವನ್ನು ನಡೆಸು. ನಾವೆಲ್ಲ ನಿನ್ನ ಅಧೀನರಾಗಿರುತ್ತೇವೆ. ಕೈಕೆ ಹೇಳಿದ ಮಾತನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಡ. ಎನ್ನುತ್ತ ಚರಣಕಮಲದ ಮೇಲೆ ಬಿದ್ದನು. ಭರತನನ್ನು ಎತ್ತಿ ಆಲಂಗಿಸಿಕೊಂಡ

ರಾಮನು ಆತನಿಗೆ ಈ ರೀತಿ ಹೇಳಿದನು— ನಾನು ಹದಿನಾಲ್ಕು ವರುಷ ವನದಲ್ಲಿದ್ದು ನಂತರ ತಿರುಗಿ ಬರುತ್ತೇನೆ. ಅಲ್ಲಿಯ ತನಕ ನೀನು ರಾಜ್ಯವಾಳು. ಇದು ಕೈಕೆಯ ಇಚ್ಛೆ ದಶರಥನ ಆಣತಿ. ಅವರ ಇಷ್ಟದಂತೆ ನಾವು ವರ್ತಿಸ ಬೇಕು. ಸ್ವೇಚ್ಛಾಚಾರಿಗಳಾಗಬಾರದು. ನಾವು ಪಿತೃಗಳ ವಶವರ್ತಿಗಳು. ಕಾರಣ ಪಿತೃ ಆಜ್ಞೆಯನ್ನು ಪರಿಪಾಲಿಸಲೇಬೇಕು. ಆಗ ಭರತನೆಂದನು— ತಂದೆ ಕಾಮುಕ, ಸ್ತ್ರೀಜಿತನು. ಆತನ ಈ ಮಾತು ಆಚರಣೆಗೆ (ನಡೆಸಲು) ತರಲು ಯೋಗ್ಯವಾಗಿಲ್ಲ. ರಾಮ ನುಡಿದನು— ತಂದೆ ಹೆಂಡತಿಗೆ ಒಲಿದು ಕೊಟ್ಟ ಮಾತಿದು. ಇಲ್ಲಿ ಪಾಪಕ್ಕೆ ಅವಕಾಶವಿಲ್ಲ. ತಂದೆಯ ಮಾತಿಗೆ ತಪ್ಪಿದರೆ ನಾನೇ ಪಾಪಿಷ್ಠನಾಗುತ್ತೇನೆ. ಸತ್ಯವನ್ನು ಮೀರಿ ನಡೆದರೆ ಲೋಕವೇ ನನ್ನನ್ನು ನಿಂದಿಸುತ್ತದೆ.

ಆಗ ಭರತನು ಹೇಳಿದ್ದೇನೆಂದರೆ— ನಾನೂ ಸಹ ನಿನ್ನಂತೆ ಜಟೆ ವಲ್ಕಲಗಳನ್ನು ಧರಿಸಿ ನಿನ್ನ ಹಿಂದೆಯೇ ಬರುತ್ತೇನೆ. ನಾನು ವನದಲ್ಲಿರು ತ್ತೇನೆ. ನೀನು ರಾಜ್ಯವಾಳು. ಆಗ ತಂದೆಯ ವಚನದ ಭ್ರಷ್ಟರಾದಂತಾ ಗುವದಿಲ್ಲ. ಈ ರೀತಿ ಹೇಳುತ್ತ ತಾನೇ ದರ್ಭೆಯನ್ನು ನೆಲದ ಮೇಲೆ ಹಾಸಿ ಅಲ್ಲಿಯೇ ಕುಳಿತುಬಿಟ್ಟನು. ತಾನು ಇಲ್ಲಿಯೇ ಪ್ರಾಯೋಪವೇಶ ವ್ರತವನ್ನು ಕೈಕೊಳ್ಳುವೆ ಎಂತಲೂ ಬಿನ್ನವಿಸಿದನು. ಇದನ್ನು ಅರಿತ ರಾಮನು ವಸಿಷ್ಠರ ಕಡೆ ಸಂಜ್ಞೆ ಮಾಡಲು ವಸಿಷ್ಠರು ಭರತನನ್ನು ಕರೆದು ತಿಳಿ ಹೇಳಿದರು. ಭರತನೇ ಇಲ್ಲಿ ಬಾ. ನಿನಗೊಂದು ಗೌಪ್ಯದ ವಿಷಯ ಹೇಳು ತ್ತೇನೆ ಕೇಳು. ಎಲೈ ಭರತನೇ ಶ್ರೀ ರಾಮನು ಸಾಕ್ಷಾತ್ ನಾರಾಯಣನು ಆತನೇ ರಾಮಸ್ವರೂಪವನ್ನು ಪಡೆದು ಧರೆಗೆ ಅವತರಿಸಿದ್ದಾನೆ. ಕಮಲಜನು ಬೇಡಿಕೊಂಡಂತೆ ರಾವಣಾದಿಗಳನ್ನು ವಧಿಸಲೋಸುಗ ದಶರಥನಿಗೆ ಮಗನಾಗಿ ಹುಟ್ಟಿದ್ದಾನೆ. ಮಾಯೆಯೇ ಆತನ ಹೆಂಡತಿಯಾದ ಸೀತಾದೇವಿ. ಜನಕ ಭೂಪತಿಯ ಮಗಳಾಗಿ ಜನಿಸಿದ್ದಾಳೆ. ರಾಮನ ಪತ್ನಿಯಾಗಿದ್ದಾಳೆ. ಶೇಷನೇ ಲಕ್ಷ್ಮಣನು. ಹೀಗಾಗಿ ಅವರು ಒಟ್ಟಿಗೆ ಇದ್ದಾರೆ. ದೇವಕಾರ್ಯಕ್ಕೋಸುಗ ರಾವಣನನ್ನು ವಧಿಸಲು ರಾಮನು ವನಕ್ಕೆ ಬಂದಿದ್ದಾನೆ. ಕೈಕಾದೇವಿ ಪಡೆದ ವರವು ದೇವತೆಗಳ ಕಪಟ ನಾಟಕವೇ ಹೊರತು ಬೇರಾವುದೂ ಅಲ್ಲ.

ರಾಮನು ತನ್ನ ಕೆಲಸ ಪೂರೈಸಿದ ಹೊರತು ಮನೆಗೆ ತಿರುಗಿ ಬರಲಾರ ತಿಳಿದುಕೋ. ಆದ್ದರಿಂದ ನಾವೆಲ್ಲ ಪುನಃ ಪಟ್ಟಣಕ್ಕೆ ತೆರಳಿ ನಮ್ಮನಮ್ಮ ಕೆಲಸ ಕಾರ್ಯಗಳಲ್ಲಿ ನಿರತರಾಗೋಣ. ರಾವಣನನ್ನು ಬಂಧು ಬಾಂಧವರ ಸಹಿತ ಸಂಹಾರಮಾಡಿ ರಾಮ ತಿರುಗಿ ಬರುತ್ತಾನೆ. ಇತ್ಯಾದಿವಿಷಯಗಳನ್ನೆಲ್ಲ ಭರತನು ಗುರುಮುಖದಿಂದ ಕೇಳಿ ತಿಳಿದ. ಶ್ರೀ ರಾಮಚಂದ್ರನು ಪರಮಾತ್ಮನೆಂದೇ ತಿಳಿದು ಆತನಿಗೆ ಒಂದು ವಿನಂತಿಯನ್ನು ಮಾಡಿಕೊಳ್ಳಲು ಮುಂದಾದನು ಎಂಬಲ್ಲಿಗೆ ಹದಿನೆಂಟನೆಯ ಸಂಧಿ ಮುಗಿಯಿತು.

**ಹತ್ತೊಂಭತ್ತನೆಯ ಸಂಧಿ :-** ಎಲೈ ಗಿರಿರಾಜಸುತೆಯೇ ಮುಂದಿನ ಕಥೆಯನ್ನು ಆಲಿಸುವವಳಾಗು ಹೇಳುತ್ತೇನೆ ಕೇಳುವವಳಾಗು.

ಮುನಿಯ ಮಾತಿನಿಂದ ರಾಮನ ವಿಷಯವನ್ನು ತಿಳಿದ ಭರತನು ರಾಮನಲ್ಲಿ ಈ ರೀತಿಯಾಗಿ ವಿನಂತಿಸಿಕೊಂಡನು. ನಿನ್ನ ಇಷ್ಟದಂತೆ ಆಗಲಿ. ನಿನ್ನ ಪಾದುಕೆಯನ್ನಾದರೂ ಕೊಡು. ಇದನ್ನು ಪೂಜಿಸುತ್ತ (ನಿನ್ನ ಸೇವೆಯೀ)ಎಂದು ದಿನವನ್ನು ಕಳೆಯುತ್ತೇನೆ. ನೀನು ಬರುವ ವರೆಗೂ ನಿನ್ನದೇ ಧ್ಯಾನದಲ್ಲಿದ್ದು ರಾಜ್ಯಕಾರಭಾರವನ್ನು ನಿನ್ನದೇ ಸೇವೆ ಎಂದು ನಡೆಸುತ್ತೇನೆ. ಹೀಗೆ ವಿನಂತಿಸಿಕೊಂಡು ಆತನ ದಿವ್ಯ ಪಾದುಕೆಗಳನ್ನು ಸ್ವೀಕರಿಸಿದನು. ಮತ್ತೆ ಹೇಳಿದನು - "ಹದಿನಾಲ್ಕು ವರುಷಗಳು ಕಳೆದ ಮರುದಿನವೇ ನೀನು ಬರದೇ ಇದ್ದರೆ ನಾನು ಅಗ್ನಿಪ್ರವೇಶ ಮಾಡುತ್ತೇನೆ." ನಂತರ ಪಾದುಕೆಗಳನ್ನು ತೆಗೆದುಕೊಂಡು ತನ್ನ ಎಲ್ಲ ಸೈನಿಕರು, ಬಂಧು ಬಾಂಧವರೊಡನೆ ಅಯೋಧ್ಯಾ ಪಟ್ಟಣಕ್ಕೆ ತಿರುಗಿ ಹೊರಟನು. ಆ ಸಮಯ ದಲ್ಲಿ ಕೈಕಾದೇವಿಯು ರಾಮನಲ್ಲಿಗೆ ಬಂದು ತನ್ನ ತಪ್ಪನ್ನು ಒಪ್ಪಿಕೊಂಡು ಕ್ಷಮಾಪಣೆ ಕೇಳಿದಳು. ಈ ವಿಷ್ಣು ಮಾಯೆಯನ್ನು ಯಾರಿಂದ ಗೆಲ್ಲಲು ಸಾಧ್ಯ ? ನೀನೇ ಸಾಕ್ಷಾತ್ ವಿಷ್ಣು, ಜ್ಞಾನಮಯ, ಅವ್ಯಕ್ತ, ಅನಾದಿ, ಸನಾತನನು, ಪರಿಪೂರ್ಣನು ಎಂದಿತ್ಯಾದಿಯಾಗಿ ನಾನಾರೀತಿಯಿಂದ ಸ್ತುತಿಸಿದಳು. ದೇವಕಾರ್ಯಕ್ಕೋಸುಗ ನನ್ನನ್ನು ಪ್ರೇರಿಸಿ ನನ್ನಿಂದ ಈ (ಕೆಲಸ) ಕಾರ್ಯವನ್ನು ಮಾಡಿಸಿಕೊಂಡೆ. ಸಂಸಾರ ಎನ್ನುವಂಥಾದ್ದು ಅತ್ಯಂತ ದುಃಖಮಯವಾದದ್ದು. ನಾನು ನಿನ್ನನ್ನು ಮರೆ ಹೊಕ್ಕಿದ್ದೇನೆ.

ಕಾಪಾಡು ಕಾಪಾಡು ಎಂದು ಬೇಡಿಕೊಂಡಳು. ತಾಯಿಯೇ ನೀನಾಡಿದ್ದ ಮಾತುಗಳು ಒಂದೂ ತಪ್ಪುವದಿಲ್ಲ. ದೇವತೆಗಳ ಕಾರ್ಯಸಾಧನೆಗಾಗಿಯೇ ವಾಣಿಯೇ ನಿನ್ನಲ್ಲಿ ಬಂದು ಈ ರೀತಿ ನುಡಿಸಿದ್ದಾಳೆ. ನೀನು ಬರೇ ನಿಮಿತ್ತ ಮಾತ್ರ ಅಷ್ಟೇ! ನೀನು ಯಾವಾಗಲೂ ನನ್ನನ್ನೇ ಧ್ಯಾನಿಸುತ್ತಿರು ಸುಖ ದಿಂದಿರು ಎಂದಿತ್ಯಾದಿಯಾಗಿ ಹೇಳಿ ಸಮಾಧಾನಪಡಿಸಿ ಕಳುಹಿಸಿದನು. ಇತ್ತ ಭರತನು ಅಯೋಧ್ಯಾ ಪಟ್ಟಣದ ಹೊರಬದಿಯಲ್ಲಿರುವ ನಂದಿಗ್ರಾಮಕ್ಕೆ ಬಂದು ರಾಮಪಾದುಕೆಯನ್ನು ಪೂಜಿಸುತ್ತ, ರಾಮನನ್ನೇ ಸ್ಮರಿಸುತ್ತ, ರಾಮನಂತೆಯೇ ನಾರು ಬಟ್ಟೆ ಮೊದಲಾದವನ್ನು ಉಟ್ಟು ಕಂದ ಮೂಲ ಫಲಗಳನ್ನು ಮೆಲ್ಲುತ್ತಿದ್ದನು. ಪ್ರತಿಯೊಂದು ಕೆಲಸವನ್ನು, ಕಾರ್ಯವನ್ನು ರಾಮಪಾದುಕೆಗೆ ಬಿನ್ನವಿಸಿ ಮಾಡುತ್ತಿದ್ದನು. ಇತ್ತ ಶ್ರೀ ರಾಮಚಂದ್ರನು ಚಿತ್ರಕೂಟದಲ್ಲಿ ಕೆಲವು ಕಾಲ ಸುಖದಿಂದ ಕಳೆದನು. ಆಗ ಅಯೋಧ್ಯೆಯ ಜನರೆಲ್ಲ ಅಲ್ಲಿಗೆ ಬಂದು ರಾಮನನ್ನು ನೋಡಿಕೊಂಡು ಹೋಗುತ್ತಿದ್ದರು. ಈ ಜನರ ಕಾಟವನ್ನು ತಪ್ಪಿಸಿಕೊಳ್ಳುವ ಸಲುವಾಗಿಯೂ, ರಾಕ್ಷಸರ ವಧೆ ಗೋಸುಗವಾಗಿಯೂ ಸೀತಾಲಕ್ಷ್ಮಣರ ಸಹಿತ ಮುಂದೆ ಹೋಗಲು ನಿಶ್ಚಯಿಸಿ ಅತ್ರಿಮಹರ್ಷಿಗಳ ಆಶ್ರಮಕ್ಕೆ ಬಂದನು. ಅಲ್ಲಿ ಮಹರ್ಷಿಗಳನ್ನು ಕಂಡು— ನಾನು ರಾಮ ಬಂದಿದ್ದೇನೆ. ತಮಗೆ ಅಭಿವಾದನೆ ಮಾಡುತ್ತಿದ್ದೇನೆ ಎಂದು ಹೇಳಿ ನಮಸ್ಕರಿಸಿದನು. ಶ್ರೀ ರಾಮಚಂದ್ರನೇ ಮಹಾವಿಷ್ಣು ಎಂದರಿತ ಅತ್ರಿಮುನಿಯು ಕೂಡಲೇ ಎದ್ದು ಬಂದು ಆತನಿಗೆ ಅರ್ಘ್ಯಪಾದ್ಯಾದಿ ಉಪಚಾರಗಳಿಂದ ಸತ್ಕರಿಸಿದನು. ನನ್ನ ಪತ್ನಿ ಅನಸೂಯೆ ಮುಪ್ಪಿನವಳು. ಆಕೆಯ ಬಳಿ ಸೀತೆಯನ್ನು ಕಳುಹಿಸು. ಎಂದು ಹೇಳಿ ಸೀತೆಯನ್ನು ಪರ್ಣ ಶಾಲೆಯ ಒಳಗೆ ಕಳುಹಿಸಿದನು. ದಂಡಪ್ರಣಾಮ ಮಾಡಿದ ಸೀತೆಯನ್ನು ಅನಸೂಯೆಯು ಬಿಗಿದಪ್ಪಿ ಸಮಾಧಾನಗೊಳಿಸಿದಳು. ಮಗಳೇ ಇಲ್ಲಿ ಬಾ ಎಂದು ಸೀತೆಯನ್ನು ಕರೆದು ಸೌಭಾಗ್ಯ ಸೂಚಕವಾದ ಕುಂಡಲದ್ವಯ-ಗಳನ್ನೂ ಆಕೆಗೆ ನೀಡಿದಳು. ಭಕ್ತಿ ಪ್ರೇಮದಿಂದ ಯಾವಾಗಲೂ ಮಾಸದಿರುವ ವಸ್ತ್ರಗಳೆರಡನ್ನೂ ಕೊಟ್ಟಳು. ಪಾತಿವ್ರತ್ಯದಿಂದ ಬಾಳು. ರಾಮನಲ್ಲಿ ಸದಾ ಮನಸ್ಸನ್ನಿಡು. ವನವಾಸ ಕಳೆದ ಕೂಡಲೇ ನೀನು ಮನೆಗೆ ಹೋಗಿ

ಸುಖದಿಂದ ಬಾಳು ಎಂದು ಹರಸಿದಳು. ಇತ್ತ ರಾಮ ಹಾಗೂ ಅತ್ರಿ-ಮಹರ್ಷಿಗಳು ಲೋಕಾಭಿರಾಮವಾಗಿ ಮಾತನಾಡುತ್ತ ಇದ್ದರು ಎಂಬಲ್ಲಿಗೆ ಹತ್ತೊಂಭತ್ತನೆಯ ಸಂಧಿ ಮುಕ್ತಾಯಗೊಂಡಿತು

## ಅಯೋಧ್ಯಾಕಾಂಡ ಮುಗಿಯಿತು

## ಗ್ರಂಥಾಂತರಂಗ

ಕವಿಯು ಅಧ್ಯಾತ್ಮ ರಾಮಾಯಣವನ್ನು ಭಾಮಿನೀ ಷಟ್ಪದಿಯಲ್ಲಿ ಬರೆಯುವಾಗ ಮೂಲ ಸಂಸ್ಕೃತದ ಅಧ್ಯಾತ್ಮ ರಾಮಾಯಣವನ್ನು ಅನು-ಸರಿಸಿದ್ದಾನೆ. ಸಂಸ್ಕೃತ ರಾಮಾಯಣದಲ್ಲಿ ಬಾಲಕಾಂಡದಲ್ಲಿ ಏಳು ಅಧ್ಯಾಯ ಗಳಿವೆ. ಆದರೆ ಕನ್ನಡ ರಾಮಾಯಣದಲ್ಲಿ ಎಂಟು ಸಂಧಿಗಳು ಇವೆ. ಹಾಗೆಯೇ ಸಂಸ್ಕೃತದ ಅಧ್ಯಾತ್ಮ ರಾಮಾಯಣ ಅಯೋಧ್ಯಾ ಕಾಂಡದಲ್ಲಿ ಒಂಭತ್ತು ಅಧ್ಯಾಯಗಳಿದ್ದರೆ ಕನ್ನಡದ ಅಧ್ಯಾತ್ಮ ರಾಮಾಯಣದಲ್ಲಿ ಹನ್ನೊಂದು ಸಂಧಿಗಳು ಇವೆ. ಸಂಸ್ಕೃತದಲ್ಲಿರುವ ವಿಷಯವನ್ನು ಕನ್ನಡಕ್ಕೆ ಅನುವರ್ತನೆ ಮಾಡುವಾಗ ಈ ರೀತಿ ಆಗುವದು ಸಹಜ. ಇದು ವೇದಾಂತದ ಅಧ್ಯಾತ್ಮಿಕ ವಿಷಯವನ್ನು ಸುಲಭ ಕನ್ನಡದಲ್ಲಿ ತಿಳಿಸತಕ್ಕ ಗ್ರಂಥವಾಗಿದೆ. ಪಾರ್ವತಿಯ ಕೇಳಿಕೆ ಈಶ್ವರನ ಹೇಳಿಕೆ ಹೀಗೆ ಅವರ ಸಂವಾದದ ರೂಪದಲ್ಲಿದೆ.

ಕವಿಯು ತನ್ನ ಅಧ್ಯಾತ್ಮ ರಾಮಾಯಣದ ಪ್ರಾರಂಭದಲ್ಲಿ ತನ್ನ ಗುರು, ಗಣಪತಿ, ಶಾರದೆ ಮೊದಲಾದ ದೇವಾಧಿದೇವರನ್ನೂ ಪರಮ ಭಾಗವತೋತ್ತಮರುಗಳಾದ ಶುಕ, ಸನಕ ನಾರದ ಮೊದಲಾದವರನ್ನೂ ಸ್ತುತಿಸಿದ್ದಾನೆ. ನಂತರ ತನ್ನ ಆರಾಧ್ಯ ದೇವರಾದ ಶ್ರೀ ಲಕ್ಷ್ಮೀನರಸಿಂಹ ನನ್ನು ಸ್ತುತಿಸಿ ನಂತರರಾಮನನ್ನು ಧ್ಯಾನಿಸಿದ್ದಾನೆ. ಯಾವ ಮನುಜನಿಗೂ ಸ್ವೇಚ್ಛೆ ಎಂಬುದೇ ಇಲ್ಲ. ಪ್ರತಿಯೊಂದೂ ಆ ಪರಾತ್ಪರನಾದದೇವನ ಅಧೀನ ವಾಗಿಯೇ ನಡೆಯುವದು. ಮಾಯಾಶಕ್ತಿಯಿಂದಲೇ ಸಕಲವೂ ನಡೆಯುವದು.

ಅಂಬು ನಡೆವುದು ಬೊಂಬೆ ಕುಣಿವುದು | ಕೊಂಬು ನುಡಿವುದು ಜೆಂಬು ಕೊಗೆವುದು |
ರೆಂಬೆ ಮಾತಾಡುವದು ಸ್ವೇಚ್ಛಾಮಾತ್ರವವಕುಂಟೆ ||
ಹಂಬಲಲ್ಲದೆ ಧಿಟವೆಯಾ ಪರಿ | ಬೆಂಬಳಿಯಲೆನ್ನೊಳಗೆ ಸಿರಿ ಮೂ |
ಕಾಂಬೆ ನುಡಿಗಲಿಸಿದಂದದಿ ನುಡಿದು ಶುದ್ಧನಹೆ || ೧೪-೧ ||

ಇದರಂತೆಯೆ ಹಿರಿಯರ ಬಗ್ಗೆ ಗೌರವ ತೋರುವ ಮಾತು-

ಮೂಕ ನುಡಿಯನು ಹೆಳವ ನಡೆಯನು | ಜೋಕೆಯರಿಯನು ಹೆಡ್ಡನೆಂದು ವಿ |
ವೇಕಿಗಳು ಗಜರುವದೊ ಮೇಣು ಸ್ವಭಾವಗುಣವೆಂದು ||
ಸಾಕುವರೊ ವಾ ಪರಿಯಲೆನ್ನಯ | ಕಾಕುಗುಣವನು ಮರೆದು ಪಾಲಿಸ |
ಬೇಕು ಬೇಡುವೆನೆರಗಿ ಸಾಷ್ಟಾಂಗದಲಿ ಹಿರಿಯರಿಗೆ || ೧೬-೧ ||

ತನ್ನ ಗ್ರಂಥವು ಸಕಲ ಜನರಿಗೂ ಉಪಯೋಗಕಾರಿಯಾಗಿದೆ ಮಹತ್ವಪೂರ್ಣವಾಗಿದೆ ಎಂಬ ವಿಷಯವನ್ನು ಈ ರೀತಿ ಹೇಳಿದ್ದಾನೆ.

ಭಕ್ತಿರಸ ಭಕುತರಿಗೆ ವಿಷಯ ವಿ | ರಕ್ತಿರಸ ವಿರತರಿಗೆ ಕರ್ಮಾರ್ಗ |
ಸಕ್ತರಿಗೆ ಸನ್ಮಾರ್ಗ ಯೋಗಾಭ್ಯಾಸನಿರತರಿಗೆ ||
ಮುಕ್ತರಿಗೆ ವಿಜ್ಞಾನ ಮಾರ್ಗವೆ | ಗುಕ್ತ ತಪಾಸವಿವನು ಕೇಳದ |
ಮರ್ತ್ಯರಿಗೆ ಗತಿಯಿಲ್ಲವೆಂತೆನಲದನು ವಿವರಿಸುವೆ || ೧೯-೧ ||

ಈ ಪದ್ಯವು ಕುಮಾರ ವ್ಯಾಸಭಾರತದ ಭಾರತ ಕಥಾಮಂಜರಿಯಲ್ಲಿಯ ಪದ್ಯವನ್ನು ನೆನಪಿಗೆ ತರುತ್ತದೆ. ಕುಮಾರವ್ಯಾಸ ತನ್ನ ಭಾರತದ ಹಿರಿಮೆಯನ್ನು ಈ ರೀತಿ ಹೇಳಿದ್ದಾನೆ.

ಅರಸುಗಳಿಗಿದು ವೀರ ದ್ವಿಜರಿಗೆ | ಪರಮ ವೇದದ ಸಾರ ಯೋಗೀ |
ಶ್ವರರ ತತ್ವವಿಚಾರ ಮಂತ್ರಿಜನಕ್ಕೆ ಬುದ್ಧಿಗುಣ ||
ವಿರಹಿಗಳ ಶೃಂಗಾರ ವಿದ್ಯಾ | ಪರಿಣತರಲಂಕಾರ ಕಾವ್ಯಕೆ |
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ||

ಇನ್ನು ಈ ಅಧ್ಯಾತ್ಮ ರಾಮಾಯಣದ ಫಲಶ್ರುತಿ ಏನೆಂದರೆ

ಅದು ಕೇಲರಧ್ಯಾತ್ಮ ಸಂಯುತ | ಸಾರ ಸರ್ವಪುರಾಣ ಸಮ್ಮತ |
ವೇದವಾದಿದ ಕೇಳಿ ಹೇಳುವರನ್ಯವನು ಬಿಸುಟು ||
ಘೋರ ಪಾತಕ ಕಳೆದು ಕಪಿಲೆಯ | ಧಾರೆಯೆರೆದಾ ಕೋಟಿ ಫಲವನು |
ಮಾರಿ ಮುಕ್ತಿಯ ಪಡೆವರಿದನನವರತ ಕೇಳಿದಡೆ || ೨೧-೧ ||

ಸಂಸಾರದಲ್ಲಿ ಬಿದ್ದು ತೊಳಲಾಡುವ ಈ ಜೀವರಾಶಿಗಳಿಗೆ ಮುಕ್ತಿಯನ್ನು ಕರುಣಿಸುವ ಉದ್ದೇಶದಿಂದ ಗಿರಿಜೆಯು ತನ್ನ ಪತಿಯಾದ ಈಶ್ವರನಲ್ಲಿ ಕೇಳುವಂಥವಳಾಗುತ್ತಾಳೆ- ದೇವರೇ ಇವರಿಗೆ ಸಂಸಾರವನ್ನು ದಾಟುವ, ಮುಕ್ತಿ ಮಾರ್ಗವನ್ನು ಪಡೆಯುವ ದಾರಿ ಯಾವುದು ? ಅದನ್ನು ನೀನು ಕರುಣಿಸುವದು. ಎಂದು.

ಸಾರವಾದತಿ ಗೌಪ್ಯವಾದ ಹಿ । ತಾರಯುತ ವೈರಾಗ್ಯವಾದುದ ।
ನಾರಿಗೆನ್ನರಿಗೆನ್ನದಿದ್ದುದ ಸೂರಿ ಸಮ್ಮತವ ॥
ಪಾರಪರಿಕಿನ ನಿಜದರಿವ ನಿಜ । ನಾರಿ ಮುಗುಧೆಗೆ ತಿಳಿವ ಪರಿಯಲಿ ।
ವಾರಿಜಾಕ್ಷ ತ್ರಿಯಕ್ಷ ಕರುಣಿಪುದಿದನು ನೀನೆನಗೆ ॥ ೧೯ - ೧ ॥

ಎಂದು ಕೇಳಿದಕೂಡಲೇ ಈಶ್ವರನು ರಾಮಚರಿತವನ್ನು ರಾಮ ತತ್ವವನ್ನು ನಿನಗೆ ಕರುಣಿಸುತ್ತೇನೆ ಎಂದು ಹೇಳಲುಪಕ್ರಮಿಸುತ್ತಾನೆ.

ಇಂತು ಕೇಳಿದ ಸತಿಯು ಮಾತಿಗೆ । ಸಂತಸದಲೀಶ್ವರನು ನುಡಿದನು ।
ಕಾಂತೆ ಕೇಳಾ ಧನ್ಯೆಯಾದ ಪರಾತ್ಪರ ರೂಪಿನಲಿ ॥
ಅಂತರಂಗದಿ ರಾಮ ತತ್ವದ । ಚಿಂತಿತವ ನರಿವಿಚ್ಛೆ ಪುಟ್ಟಿತ ।
ನಂತ ಮಹಿಮನ ಮಹಿಮೆಯನು ಕೇಳೆಂದು ಕರುಣಿಸಿದ ॥ ೨೦ - ೧ ॥

ಮೊದಲು ನಾನು ಇದನ್ನು ಯಾರಿಗೂ ಹೇಳಿಲ್ಲ. ಪರಮಾರ್ಥದ ಗೂಢತತ್ವವನ್ನು ತಿಳಿಸುವ ಈ ವಿಷಯವನ್ನು ನಿನಗೆ ಲೋಕೋಪಕಾರಕ್ಕೋಸ್ಕರವಾಗಿ ತಿಳುಹುತ್ತೇನೆ. ಎಂದು ಹೇಳಲುಪಕ್ರಮಿಸುತ್ತಾನೆ. ಮುಂದಿನ ಪದ್ಯಗಳಲ್ಲಿ ಆ ಪರಾತ್ಪರ ಸ್ವರೂಪನಾದ ಶ್ರೀ ರಾಮಚಂದ್ರನ ವರ್ಣನೆಯನ್ನು ಮಾಡುತ್ತಾನೆ.

ಎರಡನೆಯ ಸಂಧಿಯಲ್ಲಿ ಸೀತೆಯು ರಾಮತತ್ವವನ್ನು ರಾಮನ ನಿಜ ಸ್ವರೂಪವನ್ನು ರಾಮ ಭಕ್ತನಾದ ಹನುಮಂತನಿಗೆ ಕರುಣಿಸುವಂಥವಳಾಗುತ್ತಾಳೆ. ರಾಮಾಯಣದ ಸಂಕ್ಷಿಪ್ತ ಪರಿಚಯ, ಸಾರ, ಇಲ್ಲಿ ಸಿಗುತ್ತದೆ. ಪೂರ್ಣ ರಾಮಚರಿತ್ರೆಯನ್ನು ಹನುಮಂತನಿಗೆ ವಿಶದಪಡಿಸಿದ ನಂತರ ಸೀತೆ ಈ ರೀತಿ ಹೇಳುತ್ತಾಳೆ

ರಾಮ ನಡೆಯೆನು ನಿಲ್ಲ ನಿಲಿಸನು । ರಾಮ ದುಃಖಿಸಬಯಸನೇನುವೆ ।
ರಾಮ ಹಿಡಿಯನು ಬಿಡನು ಬಿಡಿಸನು ಮಾಡ ಮಾಡಿಸನು ॥
ರಾಮ ಚಲಿಸನು ಮರೆಯ ಮರೆಸನು । ರಾಮ ಪರಮಾನಂದನಪರಿಂ ।
ಕಾಮ ವಿಷಯ ವಿದೂರ ಗುಣಿಯೆಂದದಲಿ ಕಾಣುತಿಹ ॥ ೧೦ _ ೨ ॥

ಆಮೇಲೆ ರಾಮನೇ ಎಲ್ಲ ವಿಷಯವನ್ನೂ "ತತ್ವಮಸಿ"ಯ ಅರ್ಥವನ್ನೂ ಹನುಮಂತನಿಗೆ ಕರುಣಿಸುತ್ತಾನೆ.

ವಿದ್ಯೆ ವಿದ್ಯೆಗೆ ಲಕ್ಷ್ಯ ಲಕ್ಷ್ಯ ವಿದ್ಯೆಗ । ವಿದ್ಯೆ ಪುನರಪಿ ಲಕ್ಷ್ಯವೆರಡಕು
ಶುದ್ಧ ವಿದ್ಯೆಯೆ ಲಕ್ಷ್ಯವದಕೇಕಿಲ್ಲ ನಿರ್ಲಕ್ಷ್ಯ ॥
ವಿದ್ಯದಾಭಾಸವು ಕೆಡಲಿಕೆಯ । ವಿದ್ಯೆಯೇ ಪ್ರತಿಬಿಂಬವುಳಿವುದು
ಶುದ್ಧ ವಿದ್ಯೆಯೆ ತಾನೆಯಾದರೆ ತತ್ವಮಸಿಯೈಕ್ಯ ॥ ೧೮ _ ೨ ॥

ರಾಮಭಕ್ತಿಯನ್ನು ಸವಿಯುವವರೆಲ್ಲರೂ ಅಧಿಕ ಪೂಜ್ಯರು. ಅವರ ಕುಲಕೋಟಿಗಳು ಪಾವನವಾಗುವವು. ರಾಮನಂಘ್ರಿ ಕಲ್ಪವೃಕ್ಷರಾಮನಾಮ ನೆನೆವ ಪ್ರತಿಯೊಬ್ಬರೂ ಪರಮಪದವನ್ನು ಪಡೆಯಲು ಅರ್ಹರಾಗುತ್ತಾರೆ.

ಮೂರನೆಯ ಸಂಧಿ ಪೂರ್ಣ ದೇವರ ವರ್ಣನೆಯೇ ಇದೆ. ದೇವತೆಗಳು ಶೇಷಶಾಯಿ ಶ್ರೀಮನ್ನಾರಾಯಣನಲ್ಲಿ ಮೊರೆಯಿಟ್ಟ ವಿಷಯ ಅಡಕವಾಗಿದೆ. ಪೂರ್ಣ ದೇವತಾ ಸ್ತೋತ್ರರೂಪವೇ. ದಶರಥ ಮಕ್ಕಳ ಬಗ್ಗೆ ಹಂಬಲಿಸಿದ್ದು. ಎಷ್ಟೇ ಸುಖ ಸಂಪತ್ತು ಇದ್ದರೂ ಮಕ್ಕಳಿಲ್ಲದಿದ್ದರೆ ಪ್ರಯೋಜನವಿಲ್ಲ. ಎಂದು ದುಃಖಿಸುವ ವಿಚಾರ ಉದಾಹರಣೆ ಸಹಿತ ಹೇಳುತ್ತಾನೆ.

ಚಂದ್ರನಿಲ್ಲದ ರಾತ್ರಿ ಸೇನಾ । ವೃಂದವಿಲ್ಲದ ನೃಪತಿ ಶಾಂತಿಯ ।
ಬಂಧವಡೆಯದ ಯೋಗ ಸದ್ಗುಣವಿಲ್ಲದಾ ವಿದ್ಯೆ ॥
ಮುಂದಣರಿಯದ ಮಂತ್ರ ಗೋವುಗ । ಳಿಂದ ವಿರಹಿತ ಗೋಷ್ಠವಾಪರಿ ।
ಕಂದನಿಲ್ಲದ ರಾಜ್ಯವಿದರಲ್ಲೇನು ಫಲವೆಂದ ॥ ೩೩ _ ೩ ॥

ಇದು ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಸೀತಾದೇವಿ ಮಕ್ಕಳಿಲ್ಲದೆ ದುಃಖಪಡುವ ಸಂದರ್ಭವನ್ನು ನೆನಪಿಗೆ ತರುತ್ತದೆ.

ಕಂದನಾಡುವ ಬಾಲಲೀಲೆಯಂ ನೋಡಿ ತೊದ
ಳೊಂದದಿನಿವಾತನುರೆ ಕೇಳ್ದು ಮುದ್ದಿನ ಮುದ್ದೆ
ಯಂದದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ ಕೆಂಗುರುಳ್ಗಳಲೆವ ॥
........

ಆಗ ದಶರಥನಿಗೆ ವಸಿಷ್ಠ ಋಷಿಯ ಸಮಾಧಾನ. ಪುತ್ರಪ್ರಾಪ್ತಿಗಾಗಿ ಋಷ್ಯಶೃಂಗರಿಂದ ಯಜ್ಞ ಮಾಡಿಸುವ ಸೂಚನೆ ಮುಂತಾದವುಗಳು. ಯಜ್ಞದ ಪಾಯಸದ ಪ್ರಭಾವದಿಂದ ರಾಮ ಲಕ್ಷ್ಮಣ, ಭರತ ಶತ್ರುಘ್ನರ ಜನನ ಬಾಲಲೀಲೆ ಇತ್ಯಾದಿ ಕಥೆ ಸುಲಭವಾಗಿ ಮುಂದುವರಿಯುತ್ತದೆ. ರಾಮನ ಜನ್ಮದಿನವನ್ನು ಈ ರೀತಿ ಹೇಳಿದ್ದಾನೆ.

ಪೂಷದರ್ಶದಸಂತಋತು ಮಧು । ಮಾಸ ಶುದ್ಧ ನವಮಿ ಕರ್ಕಟ
ರಾಶಿ ಗ್ರಹರುಚ್ಚಸ್ಥ ಪಂಚಕದಲಿ ಪುನರ್ವಸಿನ ॥
ಆ ಸುರದ ನಕ್ಷತ್ರ ಶುಭದಿನ । ವಾಸರದಿ ಕೌಸಲೆಗೆ ಜಗತೀ
ವಾಸ ರಾಘವ ಜನಿಸಿದುತ್ತಮ ಪುಣ್ಯ ತಿಥಿಯಂದ ॥ ೪ – ೪ ॥

ರಾಮಚಂದ್ರನ ವರ್ಣನೆಯನ್ನು ನಾಲ್ಕೈದು ಪದ್ಯಗಳಲ್ಲಿ ವರ್ಣಿಸಿದ್ದಾನೆ. ಹುಟ್ಟಿದ ಕೂಡಲೇ ರಾಮನು ತನ್ನ ವಿಶ್ವರೂಪ ದರ್ಶನವನ್ನು ತನ್ನ ತಾಯಿಯಾದ ಕೌಸಲೆಗೆ ತೋರಿಸುತ್ತಾನೆ. ಅದನ್ನು ಕಣ್ತುಂಬ ನೋಡಿ ಬೆರಗಾದ ಆಕೆ ನಿನ್ನ ನಿಜರೂಪ ಸಾಕು. ನೋಡಿ ಧನ್ಯನಾದೆ. ಈಗಿನ ಬಾಲರೂಪ ತೋರಿಸು ಎಂದು ಕೇಳಿಕೊಳ್ಳುತ್ತಾಳೆ. ರಾಮ ಹೇಳಿದ್ದೇನೆಂದರೆ— ನಾನು ರಾವಣಾದಿಗಳ ನಾಶಕ್ಕಾಗಿ ಹುಟ್ಟಿಬಂದಿದ್ದೇನೆ. ನಿಮ್ಮ ಬಯಕೆಯಂತೆ ನಿಮ್ಮ ಉದರದಲ್ಲಿ ಮಾನವನಾಗಿ ಜನಿಸಿದ್ದೇನೆ. ಎಂದು ಹೇಳಿ ತನ್ನ ವಿಶ್ವರೂಪವನ್ನು ಅಡಗಿಸಿ ಬಾಲನಾಗುತ್ತಾನೆ. ದಶರಥ ಮಕ್ಕಳ ಸಕಲ ಕರ್ಮಗಳನ್ನು ಮಾಡಿ ಮಕ್ಕಳಿಗೆ ಕ್ರಮವಾಗಿ ರಾಮ, ಲಕ್ಷ್ಮಣ, ಭರತ, ಶತ್ರುಘ್ನ ಎಂದು ಹೆಸರಿಟ್ಟ.

ರಾಮನ ಬಾಲಲೀಲೆ ಪ್ರಾರಂಭ. ತೊಟ್ಟಿಲಲ್ಲಿಟ್ಟು ತೂಗುವ ಸಂಭ್ರಮ

ದೇವ ಜೋ ಜೋ ಭಕ್ತ ಜನ ಸಂ । ಜೀವ ಜೋ ಜೋ ದುರಿತದಟವಿಯ ।
ದಾವ ಜೋ ಜೋ ಸಕಲ ಸುರರನು ಕಾವ ಜೋ ಜೋ ಜೋ ॥
ಜೀವ ಜೋ ಜೋ ತನ್ನ ನಿರುಪಮ । ಭಾವ ಜೋ ಜೋ ಮುಕುತಿ ಮಾರ್ಗದ ।
ಸೋವೆ ಜೋ ಜೋ ಯೆನುತ ಪಾಡಿದಳಂದು ಕೌಸಲ್ಯೆ ॥ ೨೭ – ೪ ॥

ಹೀಗೆ ಲಾಲ್ಕೈದು ಪದ್ಯಗಳಲ್ಲಿ ಜೋಗುಳ ಪಾಡುತ್ತಾಳೆ. ಅವನ ಬಾಲಲೀಲೆ ಲಕ್ಷ್ಮಣ ಭರತ ಶತ್ರುಘ್ನರೊಂದಿಗೆ ಸಾಗುತ್ತದೆ. ಜನ ಮನ-ಕಾನಂದವನ್ನು ಉಂಟುಮಾಡುತ್ತದೆ. ತಂದೆ ತಾಯಿಯರಂತೂ ಹರ್ಷಾಂಬುಧಿಯಲ್ಲಿ ಓಲಾಡುತ್ತಾರೆ. ಈ ಪರಿಯಲ್ಲಿ ಅವರು ಬಾಲಲೀಲೆಗಳನ್ನು ಕಳೆಯುತ್ತಾ ಪೌಗಂಡಾವಸ್ಥೆಗೆ ಬರುತ್ತಾರೆ. ಆಗ ಅವರಿಗೆ ಉಪನಯನಾದಿ ಸಂಸ್ಕಾರ ಜರುಗುತ್ತದೆ. ವಸಿಷ್ಠರಿಂದ ಸರ್ವಶಾಸ್ತ್ರಗಳನ್ನು ಕಲಿಯುತ್ತಾರೆ. ಹೀಗೆ ಬೆಳೆದು ದೊಡ್ಡವರಾದ ಸಂದರ್ಭದಲ್ಲಿ ವಿಶ್ವಾಮಿತ್ರರು ಯಜ್ಞರಕ್ಷೆಗೋಸುಗ ದಶರಥ ಮಹಾರಾಜನಿದ್ದಲ್ಲಿ ಬರುತ್ತಾರೆ. ರಾಮ ಲಕ್ಷ್ಮಣರನ್ನು ಕಳುಹಿಸುವಂತೆ ಕೇಳುತ್ತಾರೆ. ಈ ಮಾತನ್ನು ಕೇಳಿದ ದಶರಥ ಹೌಹಾರಿದ. ಈ ಬಗ್ಗೆ ವಸಿಷ್ಠರಲ್ಲಿ ವಿಚಾರಿಸಿದಾಗ ಅವರು ದಶರಥನಿಗೆ ಅತಿ ಗೌಪ್ಯವಾದ ವಿಷಯವೊಂದನ್ನು ತಿಳಿಸುತ್ತಾರೆ.

ಎಂದಡೆಂದನು ಮುನಿಪ ಕೇಳಿ । ನ್ನೊಂದು ಗೌಪ್ಯದಲತಿ ರಹಸ್ಯವ ।
ನೆಂದಪೆನ್ನು ಸಿರಿರಾಮ ಮಾನವನಲ್ಲ ಗಡ ನಿನಗೆ " ॥
ಬಂದು ಜನಿಸಿದನಾದಿ ವಿಷ್ಣು ಮು । ಕುಂದನೇ ಕೌಸಲೆಗೆ ಮುನ್ನರ ।
ವಿಂದಭವ ಬೇಡಿದಡೆ ಭೂಮಿಯ ಹೊರೆಯನಿಳುಹಲಿಕೆ ॥ ೯ – ೫ ॥

ನಿಮ್ಮ ತಪಸ್ಸಿಗೆ ಮೆಚ್ಚಿ " ಅಚ್ಯುತನು ಮಗನಾದನೀ ರಾಮಾಖ್ಯೆಯಲಿ ನಿಮಗೆ" ಇದಲ್ಲದೇ

ಲಕ್ಷ್ಮಣನೆ ತಾ ಶೇಷ ಭರತನ । ಧೋಕ್ಷಜನ ನಿಜ ಶಂಖ ದುಷ್ಟರ ।
ಶಿಕ್ಷಿಸುವ ಚಕ್ರವು ಕಣಾ ಶತ್ರುಘ್ನನೆಂಬುವನು ॥
ಅಕ್ಷಯನ ವರಯೋಗಮಾಯೆ ಸ । ಲಕ್ಷಣಾನ್ವಿತೆ ಸೀತೆ ಜನಕನ ।
ರಕ್ಷೆಯಿಂ ಲಾಲನದಲಿಹಳಿಂತರಿತುಕೊಳ್ಳೆಂದ ॥ ೧೦ – ೫ ॥

ಎಂದು ರಾಮಜನ್ಮದ ಗೌಪ್ಯವನ್ನು ಸ್ಫೋಟವಮಾಡುತ್ತಾನೆ. ಇದನ್ನು ಯಾರಿಗೂ ಹೇಳದಿರುವಂತೆ ಆಜ್ಞಾಪಿಸುತ್ತಾನೆ. ಮುಂದೆ ರಾಮಲಕ್ಷ್ಮಣರನ್ನು ವಿಶ್ವಾಮಿತ್ರರ ಸಂಗಡ ಕಳುಹಿಸುವದು ಇತ್ಯಾದಿ.

ಮುನಿಯೂ ಸಹ ಅವರನ್ನು ಸಂತೋಷದಿಂದ ಕರೆದೊಯ್ದು ದೇಶಗಳನ್ನೆಲ್ಲ ತೋರಿಸಿ ಅವೆಲ್ಲವುಗಳ ಪರಿಚಯ ಮಾಡಿಕೊಡುತ್ತಾನೆ. ತಾಟಕಿಯ

ವಧೆಗಾಗಿ ರಾಮನನ್ನು ಪ್ರೇರೇಪಿಸಿ ಆಕೆಯ ವಧೆ ಮಾಡಿಸುತ್ತಾನೆ. ಆಕೆ ಒಬ್ಬ ಯಕ್ಷಿಣಿಯಾಗಿದ್ದಳು. ಶಾಪವಶೆಯಾದ ಅವಳ ಶಾಪವಿಮೋಚನೆ ಶ್ರೀ ರಾಮನಿಂದ.

ಕ್ರೂರಿವಳು ರಕುತವನು ವನವನು । ಚಾರಿವರಿವುತ ಬಿದ್ದಳಾಗಳೆ ।
ನಾರಿಯುತಿ ಸೌಂದರ್ಯ ಸರ್ವಾಭರಣ ಸಂಪನ್ನೆ ॥
ಚಾರು ಯಕ್ಷಿಣಿಯಾಗಿ ಶಾಪವು । ತೀರಿ ಬಲಬಂದೆರಗಿ ರಾಮನ ।
ಪಾಪ ಕರುಣವಿ ದಿಪಕೆ ಪಡೆದಳನುಜ್ಞೆಯನು ಪಡೆದು ॥ ೩೨ – ೫ ॥

ಮುಂದೆ ವಿಶ್ವಾಮಿತ್ರರ ಯಜ್ಞ, ಸುಬಾಹು ಮಾರೀಚರ ಗರ್ವಭಂಗ, ರಾಕ್ಷಸರ ಸಂಹಾರ ಮೊದಲಾದವೆಲ್ಲ ನಡೆದು ವಿಶ್ವಾಮಿತ್ರರು ಸುಪ್ರೀತ-ರಾದರು. ನಂತರ ಅವರನ್ನು ಕರೆದುಕೊಂಡು ಜನಕರಾಜನ ಪಟ್ಟಣಕ್ಕೆ ಪ್ರಯಾಣ. ಹೋಗುವಾಗ ಮಧ್ಯದಲ್ಲಿ ಪುಣ್ಯತಮವಾದ ಗೌತಮಾಶ್ರಮ-ವನ್ನು ಕಾಣುವಿರಿ. ಅಹಲ್ಯೆಯ ಕಥೆಯನ್ನು ವಿಶ್ವಾಮಿತ್ರರು ವಿಸ್ತಾರವಾಗಿ ರಾಮನಿಗೆ ನಿರೂಪಿಸುತ್ತಾರೆ. ಇಲ್ಲಿ ಅಹಲ್ಯೆ ನಿನ್ನ ಪಾದಾರವಿಂದವನ್ನೇ ಧ್ಯಾನಿಸುತ್ತ ಇದ್ದಾಳೆ. ಅವಳನ್ನು ಪುನೀತಳನ್ನಾಗಿ ಮಾಡು. ಎಂದು ಹೇಳಿ ಶಿಲೆಯಾದಹಲ್ಯೆಯ ಸ್ಥಳವನ್ನು ತೋರಿಸಿದರು. ರಾಮನ ಪಾದಸೋಗಿನ ಸೋಂಕಿನಿಂದ ಅಹಲ್ಯೆಯ ಉದ್ಧಾರ. ಆಕೆ ರಾಮನ ಸ್ತೋತ್ರ ಮಾಡುತ್ತಾಳೆ. ಸಂಧಿ ಪೂರ್ಣ ರಾಮಚಂದ್ರನ ಸ್ತುತಿಯೇ ಇದೆ. ನೀನು ಅನಾದಿ; ಪುರಾಣ ಪುರುಷ; ಓಂಕಾರವೂ ನೀನೇ; ಸಕಲಕಲ್ಯಾಣ ಆದಿ ಸ್ವರೂಪವೂ ನೀನೇ; ಮಾಯಾರೂಪದಿಂದ ಕೂಡಿದ್ದರೂ ಆ ಮಾಯೆ ನಿನಗೆ ಅಂಟುವುದಿಲ್ಲ. ನಿನ್ನ ಭಕ್ತಿಯನ್ನೇ ನಾನು ಕೇಳಿಕೊಳ್ಳುತ್ತೇನೆ ಎಂದು ಹೇಳುತ್ತೆ

ರಕ್ಷಿಸೆಲೆ ರಘುನಾಥ ಪುರುಷಾ । ಧ್ಯಕ್ಷ ಪನ್ನಗ ಭಕ್ತ ವತ್ಸಲ ।
ಅಕ್ಷಯಾತ್ಮ ನಮೋನಮೋ ನಾರಾಯಣಾನಂತ ॥
ಕುಕ್ಷಿಗತ ಜಗದಂಡ ದಿವಿಜ ವಿ । ಪಕ್ಷ ಶಿಕ್ಷಕ ಪರಮ ಪುರುಷ ।
ದೋಕ್ಷಜಾ ಹೃಷಿಕೇಶ ಜಯ ಜಯ ಜಯನಮೋ ಜಯತು ॥ ೩೨ – ೬ ॥

ಅಲ್ಲಿಂದ ಮುಂದೆ ಜನಕನ ಆಸ್ಥಾನಕ್ಕೆ ಪಯಣ. ವಿಶ್ವಾಮಿತ್ರರು ಜನಕನಿಗೆ ರಾಮಲಕ್ಷ್ಮಣರನ್ನು ಪರಿಚಯಿಸುತ್ತಾರೆ. ಇವರು ನರನಾರಾ-

ಯಶೋಧನರು. ದಶರಥನ ಮಕ್ಕಳು ಎಂದಿತ್ಯಾದಿಯಾಗಿ ನಿನ್ನಲ್ಲಿರುವ ಶಿವಧನುಸ್ಸನ್ನು ತೋರುವ ನೆವದಲ್ಲಿ ಅವರನ್ನು ಇಲ್ಲಿಗೆ ಕರೆತಂದೆ. ಆ ಚಾಪವನ್ನು ತೋರು. ಜನಕ ಚಾಪವನ್ನು ತರಿಸಿದ. ರಾಮ ಆ ಚಾಪವನ್ನು ಎತ್ತಿ ಹೆದೆಯೇರಿಸುತ್ತಿರಲು ಅದು ಮುರಿಯಿತು. ಅದರ ಧ್ವನಿ ಮೂರು ಲೋಕವನ್ನು ಮುಟ್ಟಿತು. ಸುಂದರಾಂಗಿಯಾದ ಸೀತೆ ಆ ರಾಮನ ಮುಂದೆ ಬಂದು ಆತನ ಕೊರಳಲ್ಲಿ ಮಾಲೆಯಿಕ್ಕಿದಳು. ಜನಕ ದಶರಥನನ್ನು ಕರೆಸಿದ. ವೈವಾಹವಿಧಿ ಸಾಂಗವಾಗಿ ನೆರವೇರಿತು. ಆ ಸಂದರ್ಭದಲ್ಲಿ ಜನಕರಾಜನು ಸೀತೆಯ ಹುಟ್ಟಿನ ಬಗ್ಗೆ ಹೇಳಿದ ವಿವರ.

ಯಾಗಕೋಸುಗ ನೆಲನ ಶುದ್ಧಿಸೆ । ನೇಗಿಲಿಂ ಸವೆವುತಿರೆ ನೆಲನೊಳ ।
ಗೀಗರುವೆ ಸೀತೆಯನು ಶುಭಲಕ್ಷಣ್ಯಯೂಥೆಯನು ॥
ಆಗ ಕಂಡಾತ್ಮಜೆಯ ಪರಿಯನು । ರಾಗವಡೆದಾ ಚಂದ್ರಮುಖಿಯನು ।
ಬೇಗ ಪಟ್ಟದ ರಮಣಿಗಿತ್ತೆನು ಸಲಹಿಕೊಳ್ಳೆನುತ ॥ ೩೮ _ ೭ ॥

ಅತ್ತ ನಾರದ ಬಂದು ಆಕೆಯ ಬಗ್ಗೆ ಜನಕನಿಗೆ ತಿಳಿಸುತ್ತಾನೆ. ಈಕೆ ಯೋಗಾಧಾರ ಮಾಯೆ. ಮಹಾಲಕ್ಷ್ಮಿ. ತ್ರಿಜಗನ್ಮಾತೆ. ಈಕೆ ರಾಮನ ಹೆಂಡತಿಯಾಗತಕ್ಕವಳು. ಇತ್ಯಾದಿಯಾಗಿ ಹೇಳಿದನು. ವೈವಾಹವಿಧಿಯ ನಂತರ ಸರ್ವಾಭರಣಗಳನ್ನೂ ನಾನಾತರದ ಕಾಣಿಕೆಗಳನ್ನೂ ಬಳುವಳಿಗಳನ್ನೂ ಜನಕನು ಕೊಟ್ಟನು. ಗಂಡನ ಮನೆಗೆ ಹೊರಟ ಸೀತೆಗೆ ಪಾತಿವ್ರತ್ಯ ಧರ್ಮದ ಉಪದೇಶ—

ತಾಯಿತಂದೆಯವೋಲು ಸೇವೆಯು । ನಾಯತದಿ ಮಾಡುತ್ತ ಮಾವರ ।
ಮಾಯೆಯಿಲ್ಲದೆ ಪತಿಯ ಪರಮಾತುಮನೆನುತ ಭಜಿಸಿ ॥
ಕಾಯ ಸಂಕ್ಲೇಶವನು ನೋಡದೆ । ಬಾಯಲಿದಿರಿಟ್ಟೆನ್ನದೇ ರಘು ।
ರಾಯನೇಗತಿಯಾಗಿ ಸುಖಿಪಿರೆನುತ್ತ ಕಳುಹಿದರು ॥ ೪೪ - ೭ ॥

ಇದು ಶಾಕುಂತಲ ನಾಟಕದಲ್ಲಿ ಶಕುಂತಲೆಯನ್ನು ಗಂಡನ ಮನೆಗೆ ಕಳುಹುವಾಗ ಕಣ್ವರು ಮಾಡಿದ ಉಪದೇಶದ ನೆನಪನ್ನೂ ತರುತ್ತದೆ.

ಅಯೋಧ್ಯಾಪಟ್ಟಣಕ್ಕೆ ಸಪರಿವಾರ ಹೊರಟಾಗ ಮಾರ್ಗಮಧ್ಯದಲ್ಲಿ ಪರಶುರಾಮನ ಆಗಮನ. ರಾಮನೊಡನೆ ಆತನ ಸೆಣಸಾಟ. ಪರಶು

ರಾಮನ ಸೋಲು. ರಾಮನು ತನ್ನನ್ನು ಸೋಲಿಸಿದುದನ್ನು ನೋಡಿ ತನ್ನ ಹಿಂದಿನ ಸಂಗತಿಯನ್ನು ನೆನೆಪಿಸಿಕೊಂಡ ನಂತರ ರಾಮನನ್ನು ನಾನಾ ರೀತಿಯಾಗಿ ಸ್ತುತಿಸಿದ. ಈ ಸಂಧಿ ಪೂರ್ಣ ರಾಮನ ಸ್ತುತಿಯನ್ನೇ ತುಂಬಿದೆ. ರಾಮನ ಘನತೆ, ಔದಾರ್ಯ ಮೊದಲಾದವನ್ನು ವಿವರಿಸುತ್ತದೆ. ಪರಶುರಾಮನು ಇಲ್ಲಿ ವೇದಾಂತದ (ಆತ್ಮ ತತ್ವದ) ವಿಚಾರವನ್ನು ಚೆನ್ನಾಗಿ ಹೇಳಿದ್ದಾನೆ. ದೇವರನ್ನು ನಾನಾವಿಧವಾಗಿ ವರ್ಣಿಸಿದ್ದಾನೆ. ಕೊನೆಗೆ

ಜಯನಮೋ ಜಗದೀಶ ಭಕ್ತ । ಪ್ರಿಯ ನಮೋ ಜಯ ಭಕ್ತಿ ಭಾವನ ।
ಜಯ ಕೃಪಾನಿಧಿ ರಾಮಚಂದ್ರ ನಮೋ ನಮಸ್ತೇಸ್ತು ॥
ದಯವಿಡುಳ್ಳೊಡೆ ಜಾಣವೆನ್ನಲಿ । ಜಯಿಸು ತನ್ನಾ ಚರಿತ ಕರ್ಮದ ।
ಚಯದ ಪಾಶಗಳೆಳೆಯದಂತೀ ಲೋಕಗತಿಯೆಂದ ॥ ೩೨ - ೮ ॥

ಪರಶುರಾಮನ ನಿರ್ಗಮನ. ನಂತರ ದಿಬ್ಬಣ ಅಯೋಧ್ಯಾಪಟ್ಟಣಕ್ಕೆ ಸಾಗುತ್ತದೆ. ಅಯೋಧ್ಯಾಪಟ್ಟಣ ಪ್ರವೇಶಿಸುವಾಗ ಜನ ಹರುಷದಿಂದ ರಾಮನನ್ನು ನೋಡಿದ ರೀತಿ–

ಏರಿದರು ಮಣಿ ಮಾಡವನು ಪುರ । ನಾರಿಯರು ಶೃಂಗರಿಸಿ ಕುಸುಮವ ।
ಹೇರಿದರು ಸಿರಿರಾಮ ಶಿರದಲಿ ವಾರನಾರಿಯರು ॥
ತೋರಿ ಬಳಿದರು ಸೊಡರುಗಳನು । ಪ್ಸಾರತಿಯನಕ್ಷತೆಯ ವಿಪ್ರರು ।
ಬೀರಿದರು ಹಾರಿದರು ರಾಮನ ನೋಡಿ ಹರುಷದಲಿ ॥ ೪೨ _ ೮ ॥

ಸೀತೆಸಹಿತ ರಾಮ ಪುರಪ್ರವೇಶ ಮಾಡಿದ. ಜನರೆಲ್ಲ ಬಹು ಸಂತೋಷ ಪಟ್ಟರು. ಹೀಗಿರುವಾಗ ಭರತನ ಮಾವ ಯುಧಾಜಿತನು ಬಂದುದು ಭರತ ಶತ್ರುಘ್ನರನ್ನು ತನ್ನ ಪಟ್ಟಣಕ್ಕೆ ಕರೆದೊಯ್ದ. ಇತ್ತ ರಾಮಚಂದ್ರನು ಅಯೋಧ್ಯೆಯಲ್ಲಿದ್ದ ಪರಿ –

ನಿತ್ಯ ನಿರ್ಗುಣ ನಿರ್ವಿಕಾರ ನಿ । ರಸ್ತ ಮಾಯಾ ನಿರಿಹ ನಿರ್ಮಲ ।
ಪ್ರತ್ಯಗಾತ್ಮ ಪರಾತ್ಮ ಮುಖ್ಯ ಪ್ರತ್ಯಯಾತೀತ ॥
ವಸ್ತುವಾಗಿಯೆ ನಿಜ ವಿನೋದದಿ । ಹೊತ್ತು ನರರೂಪವನು ಮಾಯಾ ।
ಪ್ರಸ್ತುತದಲಿಂತೊಪ್ಪುತಿದ್ದನು ದೇವ ನಿಖಿಲೇಶ ॥ ೪೮ – ೮ ॥

ಶಿವನು ಈ ರೀತಿಯಾಗಿ ಪರಾತ್ಪರ ವಸ್ತುವಾದ ರಾಮನ ಚರಿತೆಯನ್ನು ವರ್ಣಿಸುತ್ತಿದ್ದನೆಂಬಲ್ಲಿಗೆ ಬಾಲಕಾಂಡ ಮುಗಿಯುತ್ತದೆ.

ಕವಿಯು ಕಾವ್ಯದುದ್ದಕ್ಕೂ ಸಂಸ್ಕೃತದ ಅಧ್ಯಾತ್ಮರಾಮಾಯಣ ವನ್ನು ಅನುಸರಿಸಿದ್ದಾನೆ. ಪ್ರಾರಂಭದಲ್ಲಿ ತನ್ನ ಗುರು ಮೊದಲಾದವರನ್ನು ಸ್ಮರಿಸಿ ಕಾವ್ಯ ಪ್ರಾರಂಭ ಮಾಡಿದ್ದಾನೆ. ನಂತರ ಸಂಸ್ಕೃತ ಶ್ಲೋಕದ ಅನುವಾದವನ್ನು ಮಾಡಿದ್ದಾನೆನ್ನಬಹುದು. ಆದರೂ ಮಧ್ಯ ಮಧ್ಯದಲ್ಲಿ ತನ್ನ-ತನವನ್ನೂ ಕನ್ನಡದ ಸೊಬಗನ್ನೂ ಸುಲಭ ಶೈಲಿಯಲ್ಲಿ ತೋರಿಸಿದ್ದಾನೆ. ಸಂಸ್ಕೃತದ ರಾಮಾಯಣವನ್ನು ಎಷ್ಟರಮಟ್ಟಿಗೆ ಅನುಸರಿಸಿದ್ದಾನೆ ಎನ್ನುವದನ್ನು ನೋಡುವಾ.

ಯಃ ಪೃಥ್ವೀಭರವಾರಣಾಯ ದಿವಿಜೈಃ ಸಂಪ್ರಾರ್ಥಿತಶ್ಚಿನ್ಮಯಃ
ಸಂಜಾತಃ ಪೃಥಿವೀತಲೇ ರವಿಕುಲೇ ಮಾಯಾ ಮನುಷ್ಯೋಽವ್ಯಯಃ ॥
ನಿಶ್ಚಕ್ರಂ ಹತರಾಕ್ಷಸಃ ಪುನರಗಾದ್ ಬ್ರಹ್ಮತ್ವಮಾದ್ಯಂ ಸ್ಥಿರಾಂ
ಕೀರ್ತಿಂ ಪಾಪಹರಾಂ ವಿಧಾಯ ಜಗತಾಂ ತಂ ಜಾನಕೀಶಂ ಭಜೇ ॥ ೧ ॥

ಇದನ್ನು ಸುಲಭ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

ಭೂಮಿಭಾರವನಿಳುಹಲಮರ । ಸ್ತೋಮ ಪ್ರಾರ್ಥಿಸೆ ಚಿನ್ಮಯನು ಮಾ ।
ಯಾ ಮನುಜನಾಗಿಳೆಗೆ ರವಿ ಕುಲದಲ್ಲುದಿಸಿಕೊಂಡು ॥
ಭೀಮ ದೈತ್ಯರನಾದಿ ಬೊಮ್ಮದ । ಧಾಮವನು ಪೊಗಿಸಿದ್ದ ಕಲುಷಹರ ।
ನಾಮವನು ಜಗಕಿತ್ತ ಸೀತಾಪತಿಯು ಬಲಗೊಂಡೆ ॥ ೮-೧ ॥

ಹಾಗೆಯೇ

ವಿಶ್ವೋದ್ಭವ ಸ್ಥಿತಿಲಯಾದಿಷು ಹೇತುಮೇಕಂ
ಮಾಯಾಶ್ರಯಂ ವಿಗತಮಾಯಮಚಿಂತ್ಯ ಮೂರ್ತಿಮ್ ॥
ಆನಂದಸಾಂದ್ರಮಮಲಂ ನಿಜಬೋಧರೂಪಂ
ಸೀತಾಪತಿಂ ವಿದಿತ ತತ್ವಮಹಂ ನಮಾಮಿ ॥ ೨ ॥

ಇದರ ಕನ್ನಡ ರೂಪ

ಸೃಷ್ಟಿ ರಕ್ಷಾಲಯ ಗುಣಾದಿ ವಿ । ಶಿಷ್ಟ ಮಾಯಾ ಹೇತು ಯೇಕನ ।
ಧಿಷ್ಟ ಮಾಯಾಶ್ರಯನ ಮಾಯನಚಿಂತ್ಯ ನಿಜರೂಪ ॥
ಶಿಷ್ಟ ಪರಮಾನಂದ ನಿರ್ಮಲ । ಧೀಷ್ಟಬೋಧಾಕಾರಿದರಿವಿನ ।
ಘಟ್ಟಿ ಸೀತಾಪತಿಯು ನಿಜತತ್ವವನು ಭಾವಿಸುವೆ ॥ ೯-೧ ॥

ಹೀಗೆ ಶ್ಲೋಕಗಳ ಅರ್ಥಕ್ಕೆ ಅನುಗುಣವಾಗಿ ಅನುವಾದಿಸಿದ್ದಾನೆ.

ಪಾರ್ವತಿಯು ಈಶ್ವರನಲ್ಲಿ ಕೇಳುತ್ತಾಳೆ.

ಗೋಪ್ಯಂ ಯದತ್ಯಂತ ಮನನ್ಯವಾಚ್ಯಂ
ವದಂತಿ ಭಕ್ತೇಷು ಮಹಾನುಭಾವಾಃ ।
ತದಪ್ಯಹೋಽಹಂ ತವದೇವ ಭಕ್ತಾ
ಪ್ರಿಯೋಽಸಿ ಮೇತ್ವಂ ವದ ಯತ್ತು ಪೃಷ್ಟಮ್ ॥ ೮ ॥

ಇದರ ಕನ್ನಡ ಅನುವಾದ

ಸಾರವಾದತಿ ಗೌಪ್ಯವಾದ ವಿ । ಚಾರಯುತ ವೈರಾಗ್ಯವಾದುದ ।
ನಾರಿಗೆನ್ನರಿಗೆನ್ನಡಿದ್ದುದ ಸೂರಿ ಸನ್ಮತವ ॥
ಪಾರದರಿವಿನ ನಿಜದರಿವ ನಿಜ । ನಾರಿ ಮುಗುಧೆಗೆ ತಿಳಿವ ಪರಿಯಲಿ ।
ವಾರಿಜಾಕ್ಷ ತ್ರಿಯಕ್ಷ ಕರುಣಿಪುದಿದನು ನೀನೆನಗೆ ॥ ೨೫ _ ೧ ॥

ಇದಲ್ಲದೇ ಶ್ಲೋಕಗಳಲ್ಲಿಯ ಸಾರವತ್ತಾದವುಗಳನ್ನು ತಾನು ತೆಗೆದುಕೊಂಡು ಅದನ್ನು ಭಾವಿನೀ ಷಟ್ಪದಿಯಲ್ಲಿ ಎಲ್ಲ ಜನರಿಗೂ ತಿಳಿಯುವಂತೆ ಸುಲಭ ಶೈಲಿಯಲ್ಲಿ ಹೇಳಿರುವದೇ ಈತನ ವಿಶಿಷ್ಟ ಗುಣವಾಗಿದೆ.

ಸೀತೆ ಹನುಮಂತನಿಗೆ ರಾಮತತ್ವವನ್ನು ತಿಳಿಸುವ ವಿಷಯ ಸಂಸ್ಕೃತದಲ್ಲಿ ಮೊದಲನೆಯ ಸಂಧಿಯಲ್ಲಿಯೇ ಬಂದಿದೆ. ಆದರೆ ಇದರಲ್ಲಿ ಎರಡನೆಯ ಸಂಧಿಯಲ್ಲಿ ಈ ವಿಚಾರ ಬಂದಿದೆ. " ಶ್ರೀ ರಾಮನು ಸಚ್ಚಿದಾನಂದ ರೂಪನಾಗಿಯೂ, ಅದ್ವಿತೀಯನಾಗಿಯೂ ಯಾವ ಉಪಾಧಿಯೂ ಇಲ್ಲದವನಾಗಿರುವ ಪರಬ್ರಹ್ಮವೆಂದು ತಿಳಿ" ಎಂದು ಸೀತೆ ಹೇಳುತ್ತಾಳೆ. ನಂತರ

ಮಾಂ ವಿದ್ಧಿ ಮೂಲ ಪ್ರಕೃತಿಂ ಸರ್ಗಸ್ಥಿತ್ಯಂತಕಾರಿಣೀಮ್ ।
ತಸ್ಯ ಸನ್ನಿಧಿ ಮಾತ್ರೇಣ ಸೃಜಾಮೀದಮತಂದ್ರಿತಾ ॥ ೫೩ ॥
ತತ್ಸಾನ್ನಿಧ್ಯಾತ್ ಮಯಾ ಸೃಷ್ಟಂ ತಸ್ಮಿನ್ನಾರೋಪ್ಯತೇಽಬುಧೈಃ ।

ಇದನ್ನೇ.

ನಾನು ಮೂಲಪ್ರಕೃತಿ ಸರ್ಗ । ಸ್ಥಾನ ನಾಶನಕಾದಿ ಕಾರಣೆ ।
ನಾನು ತತ್ಸಾನ್ನಿಧ್ಯದಿಂದುಗಳುವೆನು ನುಂಗುವೆನು ॥
ನಾನಾವಿಧ ಸೃಷ್ಟಿಗಳನಲಸದೆ । ನಾನು ಮಾಡಿದ ಕರ್ಮವನು ಸಂ ।
ಜ್ಞಾನವುಯರ್ಗಾರೋಪಿಸುವರಾತನಲಿ ಗುಣಗಣವ ॥ ೩ – ೨ ॥

ಅದಾವುದೆಂದರೆ- ರಘುಕುಲದಲ್ಲಿ ಹುಟ್ಟಿದ್ದು, ವಿಶ್ವಾಮಿತ್ರನ ಯಜ್ಞ ರಕ್ಷಣೆ. ತಾಟಕಿಯನ್ನು ಕೊಂದದ್ದು, ಅಹಲ್ಯೆಯ ಉದ್ಧಾರ, ಶಿವಧನುರ್ಭಂಗ, ಪರಶುರಾಮನ ಗರ್ವಭಂಗ, ದಂಡಕಾರಣ್ಯಕ್ಕೆ ಹೋದದ್ದು. ವಿರಾಧನನ್ನು ಕೊಂದದ್ದು, ಸೀತಾಪಹರಣ, ಜಟಾಯುಮೋಕ್ಷ, ಸುಗ್ರೀವಸಖ್ಯ, ವಾಲಿವಧೆ, ಸೀತಾನ್ವೇಷಣ, ಸೇತುಬಂಧನ, ದುಷ್ಟ ರಾವಣಾದಿಗಳನ್ನು ಕೊಂದು ವಿಭೀಷಣನಿಗೆ ಪಟ್ಟಗಟ್ಟಿದ್ದು, ಅಯೋಧ್ಯೆಯ ಪಟ್ಟಾಭಿಷಿಕ್ತನಾಗಿ ರಾಜ್ಯಭಾರ ಮಾಡಿದ್ದು ಇತ್ಯಾದಿಯೆಲ್ಲವನ್ನೂ ರಾಮನಲ್ಲಿ ಆರೋಪಿಸುತ್ತಾರೆ. ಈ ಎಲ್ಲ ವಿವರವನ್ನು ( ಸಂಸ್ಕೃತದಲ್ಲಿ 7 ಶ್ಲೋಕಗಳಲ್ಲಿ ವಿವರಿಸಿದ್ದನ್ನು) ಕನ್ನಡದಲ್ಲಿ ೫-೬ ಪದ್ಯಗಳಲ್ಲಿ ವಿವರಿಸಿದ್ದಾನೆ.

ಇದಲ್ಲದೇ ಸಂಸ್ಕೃತದಲ್ಲಿ ಇದ್ದ.

ರಾಮ ನ ಗಚ್ಛತಿ ನ ತಿಷ್ಠತಿ ನಾನು ಶೋಚ
ತ್ಯಾಕಾಂಕ್ಷತೇ ತ್ಯಜತಿ ನೋ ನ ಕರೋತಿ ಕಿಂಚಿತ್ ।
ಆನಂದ ಮೂರ್ತಿರಚಲಃ ಪರಿಣಾಮ ಹೀನೋ
ಮಾಯಾಗುಣಾನನುಗತೋ ಹಿ ತಥಾ ವಿಭಾತಿ ॥

ಅದನ್ನೇ ಕನ್ನಡದಲ್ಲಿ

ರಾಮ ನಡೆಯನು ನಿಲ್ಲ ನಿಲಿಸನು । ರಾಮ ದುಃಖಿಸಬಯಸನೇನುವ ।
ರಾಮ ಹಿಡಿಯನು ಬಿಡನು ಬಿಡಿಸನು ಮಾಡ ಮಾಡಿಸನು ॥
ರಾಮ ಚಲಿಸನು ಮರೆಯ ಮರೆಸನು । ರಾಮ ಪರಮಾನಂದನದರಿಂ ।
ರಾಮ ವಿಷಯ ವಿದೂರ ಗುಣಿಯಿಂದದಲಿ ಕಾಣುತಿಹ ॥ ೧೦ - ೨ ॥

ರಾಮನೂ ಕೂಡ ಹನುಮಂತನಿಗೆ ಅಧ್ಯಾತ್ಮ ವಿಷಯದ ವಿವರ ನೀಡುತ್ತಾನೆ. ಸಂಸ್ಕೃತದ ಜಾಡನ್ನೇ ಹಿಡಿದು ಅದನ್ನು ಕನ್ನಡ ಭಾಮಿನಿ ಷಟ್ಪದಿಯಲ್ಲಿ ಸುಲಭ ರೀತಿಯಲ್ಲಿ ಹೇಳಿದ್ದಾನೆ.

ರಾಮನ ಬಾಲಲೀಲೆಯ ವಿವರ ಸಂಸ್ಕೃತದಲ್ಲಿ ವಿಸ್ತಾರವಾಗಿ ಇಲ್ಲದಿದ್ದರೂ ಇಲ್ಲಿ ವಿಸ್ತಾರವಾಗಿ ಹೇಳಿದ್ದಾನೆ. ಜೋಗುಳ ಪದ್ಯಗಳನ್ನು ಹೆಣೆದಿದ್ದಾನೆ. ಹೀಗೆ ಎಷ್ಟೋ ಕಡೆ ತನ್ನತನವನ್ನು ತೋರಿಸಿದ್ದಾನೆ. ಎನ್ನುವದನ್ನು ನಾವು ಓದಿದಾಗ ತಿಳಿಯುತ್ತೇವೆ.

ಸಂಸ್ಕೃತದಲ್ಲಿ ಏಳು ಸರ್ಗಗಳಲ್ಲಿ ವರ್ಣಿತವಾದ ಶ್ರೀ ರಾಮಚರಿತೆಯನ್ನು ಸುಲಭ ಕನ್ನಡದಲ್ಲಿ ಎಂಟು ಸಂಧಿಗಳಾಗಿ ವಿವರಿಸಿದ್ದಾನೆ. ಆಧ್ಯಾತ್ಮಿಕ ವಿಷಯವನ್ನು ಸುಲಭ ಶಬ್ದಗಳಿಂದ ವಿವರಿಸಿ ಜನರಿಗೆ ತಿಳಿಯುವಂತೆ ಮಾಡಿದ್ದಾನೆ.

ಇನ್ನು ಅಯೋಧ್ಯಾಕಾಂಡಕ್ಕೆ ಬರೋಣ.

ಒಂಭತ್ತನೆಯ ಸಂಧಿಯಲ್ಲಿ ನಾರದನು ಅಯೋಧ್ಯೆಗೆ ಬಂದು ಭೂಭಾರ ಹರಣದ ಕಾರ್ಯಕ್ರಮದ ವಿವರಣೆಯನ್ನು ಶ್ರೀ ರಾಮನಿಗೆ ನೆನಪಿಸುತ್ತಾನೆ. ಶಿವನು ಲೋಕೋಪಕಾರಾರ್ಥವಾಗಿ ಪಾರ್ವತಿಗೆ ರಾಮನ ಮುಂದಿನ ಕಥಾಚರಿತ್ರೆಯನ್ನು ವಿವರಿಸುತ್ತಾನೆ. ಈಶ್ವರನು ರಾಮನ ವರ್ಣನೆಯನ್ನು ಮಾಡುತ್ತ ಹೇಳುತ್ತಾನೆ. ರಾಮನಿರುವ ಸ್ಥಳಕ್ಕೆ ನಾರದ ಬರುವ ವರ್ಣನೆ.

ಆ ಸಮಯದಲಿ ರಾಮನಿದ್ದ । ವಾಸಕಂಬರದಿಂದಿಳಿದು ಬಾ ।
ಭಾಸ ಕೋಟಿ ಶಶಾಂಕ ಶುದ್ಧ ಸ್ಫಟಿಕ ತೇಜದಲಿ ॥
ವಾಸನಾ ವಿರಹಿತಪ ತೇಜೋ । ರಾಶಿಯಾದಾತಾರ್ಕ್ಯ ಚಿತ್ತನ ।
ಕೋಶವನಲ್ಲೈತಂದನಾ ನಾರದ ಮಹಾಮುನಿಪ ॥ ೮ – ೯ ॥
ಬಿಟ್ಟ ಕೆಂಜೆಡೆ ನೊಸಲ ತಿಲಕದ । ತೊಟ್ಟ ತುಲಸೀ ವಿಸರುಹಾಕ್ಷ ವಿ ।
ಶಿಷ್ಟ ದಾಮದ ರಾಮನಾಮನಿರಂತದೋತ್ಸವದ ॥
ಹೃಷ್ಟಮಾನಸ ಧೃಷ್ಟಿ ನಿಜವನು । ಮುಟ್ಟಿ ಮುಂದರಿಯದೆ ಬರುತ್ತಿರೆ ।

ರಾಮ ಎದ್ದು ಆತನಿಗೆ ಅರ್ಘ್ಯೋಪಚಾರಗಳನ್ನಿತ್ತು ಸಂತೋಷಪಡಿಸುತ್ತಾನೆ. ಬಂದ ಕಾರ್ಯಕಾರಣವನ್ನು ಕೇಳುತ್ತಾನೆ. ಪುನಃ ನಾರದನಿಂದ ರಾಮನ ಗುಣಗಾನ. ರಾಮ ಸೀತೆಯರನ್ನು ದೇವತೆಗಳಿಗೆ ಹೋಲಿಸುವಿಕೆ. ಎಲ್ಲವುದಕ್ಕೂ ಸಾಕ್ಷೀಭೂತನು ನೀನೇ ಹೆಚ್ಚೇನು ಹೇಳಲಿ !

ಲೋಕದೊಳಗಣ ನಾರಿ ಶಬ್ದ । ನೀಕವೆಲ್ಲವು ಸೀತೆ ಪುರುಷರ ।
ವಾಕದೆಲ್ಲವು ರಾಮ ನೀನಲ್ಲೈ ವಿಚಾರಿಸಲು ॥
ಏಕ ಸೂತ್ರದ ಮಣಿಗಣದ ಪರಿ । ಲೋಕ ಮೂರನು ನೀನೆ ಸೃಜಿಸಿತ ।
ದಾಕೃತಿಯು ಪುರುಷ ಪ್ರಕೃತಿಯಾಗಿಹರೆಲಾ ಯೆಂದ ॥ ೧೦ – ೯ ॥

ನಾರದ ತಾನು ಬಂದ ಕಾರ್ಯವನ್ನು ಉಸುರುತ್ತಾನೆ.

ಆದಿ ಪುರುಷನೆ ನೀನು ರಾಘವ । ನಾದೆ ಗಡ ರಾವಣನ ವಧಿಸಲು ।
ಮೇದಿನೀ ಭಾರವನು ಕಳೆಯುಲು ಸುರರ ರಕ್ಷಿಸಲು ॥
ಈ ಧರಾ ರಕ್ಷಾರ್ಥ ಪಟ್ಟವ । ಮೇದಿನೀಶ್ವರ ದಶರಥಾಂಕ ನಿ ।
ವೇದಿಸುವ ನಿಮ್ಮಲ್ಲಿ ನಾಳೆ ಮಹೋತ್ಸವದಲೆಂದ ॥ ೩೫ – ೯ ॥

ಪಟ್ಟವನು ನೀ ಧರಿಸಿದೀ ನೃಪ । ವಟ್ಟೆಯಲ್ಲಿಕೆ ಶರಧಿ ಮಧ್ಯದ ।
ದುಷ್ಟರನು ಕೊಲುವವರ ಕಾಣೆನು ಕಮಲಜಾದ್ಯರಿಗೆ ॥
ಕೊಟ್ಟಭಾಷೆಯನಸುರರನು ಬರು । ಗುಟ್ಟುವೆನು ನಾನೆಂದ ಮಾತಿಂ ।
ಗೊಟ್ಟ ಬರದಾರದು ನಿಧಾನವ ಬಲ್ಲೆ ನೀನೆಂದ ॥ ೩೬ – ೯ ॥

ಎಂದು ಅವನ ಕರ್ತವ್ಯದ ಎಚ್ಚರಿಕೆ ನೀಡುತ್ತಾನೆ. ರಾಮನು ತಾನು ಮಾಡತಕ್ಕ ಕಾರ್ಯವನ್ನು ನಾರದನಿಗೆ ಹೇಳುತ್ತಾನೆ. ಮತ್ತು ಆತನನ್ನು ಕಳುಹಿಸಿಕೊಡುತ್ತಾನೆ.

ಇತ್ತ ಅಯೋಧ್ಯೆಯಲ್ಲಿ ರಾಮ ಪಟ್ಟಾಭಿಷೇಕದ ಸಂಭ್ರಮ. ಅತ್ತ ರಾಮ ರಾಜ್ಯಾಭಿಷೇಕವನ್ನು ಹೇಗೆ ನಿಲ್ಲಿಸಬೇಕು, ಮುಂದಿನ ಕಾರ್ಯಕ್ಕೆ ರಾಮನನ್ನು ಹೇಗೆ ಅಣಿಗೊಳಿಸಬೇಕೆಂಬ ಕಾತರ. ಈ ಕೆಲಸಕ್ಕೆ ಮಂಥರೆಗೆ ದೇವತೆಗಳಿಂದ ಪ್ರೇರಣೆ. ಕೈಕಾಗೃಹಕ್ಕೆ ಬಂದು ಆಕೆಯ ಮನವಲಿಸಿ ರಾಮನ ವಿರುದ್ಧ ಪ್ರವರ್ತಿಸುವಂತೆ ಸೂಚನೆ. ಆಕೆ ಕೈಕೆಗೆ ಹಿಂದಿನ ಎರಡು ವರಗಳ ನೆನಪು ತರುತ್ತಾಳೆ. ದಶರಥ ಮಾಡಿದ ಕಾರ್ಯವನ್ನು ಕುಹಕತನದ್ದು ಎಂದು ಹೇಳಿ ಕೈಕೆಯ ಮನ ಕೆಡಿಸುತ್ತಾಳೆ. ಮಂಥರೆ ಹೇಳಿದ ಮಾತು –

ಕರೆಸು ಭರತನ ಬೇಗ ರಾಘವ । ನಿರಲಿ ಹದಿನಾಲ್ಕಬ್ದ ವನದಲಿ ।
ಅರಸುತನ ದೃಢವಹುದು ಭರತಗೆ ಬಳಿಕ ವನದಿಂದ ॥
ಬರಲಿ ಮಾಣಲಿ ಸಾವುನಿವಳೇ । ನಿರದೆ ಯುಕ್ತಿ ವಿವೇಕವದನಾ ।
ನೊರೆವೆ ಪೂರ್ವದಲಾಯ್ತು ದೇವಾಸುರರಿಗತಿ ಕದನ ॥ ೩೪ – ೧೦ ॥

ಹೀಗೆ ಮಂಥರೆ (ಕುಬ್ಜೆ) ಯ ಸಂಪರ್ಕದಿಂದ ಕೈಕೆ ಮತಿಗೆಟ್ಟು ಈ ರೀತಿ ಮಾಡುತ್ತಾಳೆ. ಎಲ್ಲಾ ದೈವೇಚ್ಛೆ ! ಅಲ್ಲವೇ ? ಅಂತೂ ಕೈಕೆ ಕೋಪಾಗಾರವನ್ನು ಪ್ರವೇಶಿಸಿ ಮುಂದಿನ ಕಾರ್ಯಸಿದ್ಧತೆ ನಡೆಸುತ್ತಾಳೆ.

ದುಸ್ಸಂಗದ ಭೀಕರ ಪರಿಣಾಮ ನೋಡಿ !

ಅವನ್ಯ ದುಸ್ಸಂಗ ಕೆಡಿಸದು । ದಾರಥೀರ ಸುಶಾಂತನಾಗಲಿ ।
ಸದ್ಗುಣ ದಯಾವಂತನಾಗಲಿ ನೀತಿಯರಿತಿರಲಿ ॥
ಸಾರ ವಿಧಿವಾದವು ವಿವೇಕಾ । ಚಾರಯುತ ದೇಶಿಕನನಾದರು ।
ಸೇರಿದರೆ ದುರ್ಜನರು ಕಲಿಸದೆ ಬಿಡರು ತಮ್ಮಂತೆ ॥ ೪೨ – ೧೦ ॥

ದುಷ್ಟರವು ದುರ್ಬದ್ಧರಾಗವು । ಭ್ರಷ್ಟರನು ಕೋಪಿಗಳನ್ಯತ ಕಡು ।
ನಿಷ್ಠುರದ ನುಡಿವರ ಕುಲಾಚಾರವನು ಬಿಟ್ಟವರ ॥
ಕೆಟ್ಟ ವಿಷಯವ ಮೆಚ್ಚಿದವರ ನಿ । ಕೃಷ್ಟ ತಸ್ಕರ ದಯವಿಹೀನರ ।
ಮುಟ್ಟಿನುಡಿಸುತ್ತಿರಲವರು ತಮ್ಮಂತೆ ತಿದ್ದುವರು ॥ ೪೩ – ೧೦ ॥

ಆದುದರಿಂದಲೇ ಸಜ್ಜನರಾದವರು ಯಾವ ರೀತಿ ಈ ಜಗತ್ತಿನಲ್ಲಿ ಇರಬೇಕೆಂಬುದನ್ನು ಹೇಳಿದ್ದಾರೆ.

ಸತ್ಯದಯದಾಕ್ಷಿಣ್ಯ ಸದುಗುಣ । ಯುಕ್ತಿ ಸ್ವಕುಲಾಚಾರ ವೈದಿಕ ।
ಶಾಸ್ತ್ರ ಶಮೆದಮೆ ಪಾಪಭಯಂವಕ್ರೋಧ ವೈರಾಗ್ಯ ॥
ನಿತ್ಯಕರ್ಮೇಶ್ವರ ಭಕುತಿ ಗುರು । ಭಕ್ತಿ ಮೃದುನುಡಿ ಶಾಂತಿಯೆಂಬಿವ ।
ನುತ್ತಮರು ಬಿಡಬಾರದಿರಬೇಕಾವ ಕಾಲದಲಿ ॥ ೪೪ – ೧೦ ॥

ದಶರಥ ಕೈಕೆಯಿದ್ದಲ್ಲಿಗೆ ಬರುತ್ತಾನೆ. ಅವಳ ಸ್ಥಿತಿಯನ್ನು ನೋಡಿ ಹೌಹಾರುತ್ತಾನೆ. ಏನೋ ದುರಂತ ಬರಲಿದೆ ಎಂದು ಊಹಿಸುತ್ತಾನೆ. ಆತ ಕೈಕೆಯ ಬಳಿ ಬಂದಾಗ ಆಕೆ ತನ್ನ ವರದ ನೆನಪುಮಾಡಿ ಆ ವರ ಕೊಡಲು ಕೇಳುತ್ತಾಳೆ. ಈಗಲೇ ಬೇಕು ಎಂದು ಹೇಳಿ ಈ ರೀತಿ ನುಡಿಯುತ್ತಾಳೆ.

ನಿನ್ನ ನಾ ಸಮರದಲಿ ಕಾಯಿದ । ದೆನ್ನಯಾ ಬೇಕಾದ ವರವನು ।
ಯ[illegible]ಲೀಸಿಕೊಯೆಂದದಕೆ ಕೊಡಾ ಶಪಥ ಉಳುಹುವಡೆ ॥
ನನ್ನ ಭರತಗೆ ಕೊಟ್ಟು ಪಟ್ಟವ । ನಿನ್ನ ರಾಮನ ಪಟ್ಟಕೆಂದಾ ।
ಸನ್ನವಾದ ಸುವಸ್ತು ಸಹ ಶೀಘ್ರದಲಿದೊಂದಾಯ್ತು ॥ ೮ – ೧೧ ॥

ಮತ್ತದೊಂದಕೆ ರಾಮ ಜಟೆಯನು । ಹೊತ್ತು ವಲ್ಕಲದುಡುಗೆಯಲಿ ಮುನಿ ।
ವೃತ್ತಿಯಿಂದವೆ ಕಂದಮೂಲ ಫಲಾಶನಗಳಿಂದ ॥
ಹತ್ತು ನಾಲುಕು ವರುಷ ದಂಡಕ । ದತ್ತಲಿರಬೇಕೀಗ ಹೋಗಲಿ ।
ಸತ್ತಿದು ಬರಲಲ್ಲಿಯೇ ಯಿರಲದರಹಿಂ ಮೇಲೆ ॥ ೯ – ೧೧ ॥

ಇಷ್ಟು ಕೇಳಿದ್ದೇ ತಡ, ದಶರಥ ಕಡಿದ ಬಾಳೆಯ ಮರದಂತೆ ಬಿದ್ದು ಮೂರ್ಛಾಕ್ರಾಂತನಾದ. ಕೆಲ ಹೊತ್ತಿನ ಮೇಲೆ ಎದ್ದು ಆಕೆಯಲ್ಲಿ ದೀನನಾಗಿ ಕೇಳಿಕೊಳ್ಳುತ್ತಿದ್ದಾನೆ.

ಮಾಡುವೆನು ಪಟ್ಟವನು ಭರತಗೆ । ಕಾಡ ಹೋಗದೆ ರಾಮ ಮನೆಯಂಲಿ ।
ಗೂಢಚಾರದಲಿರಲಿ ರಾಮನು ಭಯಂನ ಪಿಸಗೇನ ॥
ಮಾಡದಿದಸನುಕರಿಸೆನುತ್ತಾ । ರೂಢಿಪತಿ ಕಣಿಸೀರ ಸುರಿವುತ ।
ಬೇಡ ಪಾಲಿಸೆನುತ್ತ ಬಿದ್ದನು ಪಾದದಲಿ ಸತಿಯು ॥ ೧೩ _ ೧೧ ॥

ಹೆಣ್ಣಿನ ಕೈಯಲ್ಲಿ ಸಿಕ್ಕಿ ಬಿದ್ದ ದಶರಥನ ಅವಸ್ಥೆ ನೋಡಿ ! ಎಷ್ಟೇ ಕೇಳಿಕೊಂಡರೂ ಕ್ರೂರಿಯಾದ ಆಕೆಯ ಮನಸ್ಸು ಬದಲಾಗುವದಿಲ್ಲ.

ಇತ್ತ ಪಟ್ಟಣದಲ್ಲಿ ಸಂಭ್ರಮವೋ ಸಂಭ್ರಮ. ನಾಳೆ ರಾಮ ಪಟ್ಟಾಭಿಷೇಕ ಎಂದು ಜನರು ಸಂತೋಷದಿಂದ ಪಟ್ಟಣವನ್ನು ಶೃಂಗರಿಸುತ್ತಿದ್ದಾರೆ. ತಳಿರು ತೋರಣಗಳಿಂದ ಅಲಂಕರಿಸುತ್ತಿದ್ದಾರೆ. ಶ್ರೀ ರಾಮ ಪಟ್ಟಾಭಿಷಿಕ್ತನಾಗಿ ನಮ್ಮನ್ನೆಲ್ಲ ಸಲಹುತ್ತಾನೆ ಎಂಬ ಆಶಾಭಾವನೆಯಿಂದ ಸಂತೋಷಿಸುತ್ತಿದ್ದಾರೆ. ರಾಮನನ್ನು ಸಾಕ್ಷಾತ್ ಪರಮಾತ್ಮನೇ ಎಂದು ಹಲವಾರು ವಿಧದಿಂದ ಹಾಡಿ ಹೊಗುಳುತ್ತಿದ್ದಾರೆ. ಪದ ೧೮ ರಿಂದ ೨೨ ರ ವರೆಗೂ ಆ ವಿಷಯ ಬಂದಿದೆ.

ಬೆಳಗಾಯಿತು ದಶರಥನು ಇನ್ನೂ ಏಳಲಿಲ್ಲವಲ್ಲ ! ಎಂದು ಚಿಂತಿಸುತ್ತ ಸುಮಂತನು ಕೈಕೆಯ ಮನೆಗೆ ಬಂದನು. ದುಃಖಾರ್ತನಾಗಿ ಬಿದ್ದ ದಶರಥನನ್ನು ನೋಡಿ ದುಃಖಿತನಾದ. ಆತ ಕೈಕೆಯನ್ನು ಕೇಳಲು–ಆತನಿಗೆ ರಾಮನ ಚಿಂತೆಯೇ ಚಿಂತೆ. ಆ ರಾಮನಿಗೇ ಬರ ಹೇಳು ಎಂದಳು, ರಾಮನ ಆಗಮನ. ಆತನಿಗೆ ಕೈಕೆ ನುಡಿದದ್ದೇನೆಂದರೆ ಹಿಂದೆ ಕೊಟ್ಟವರವೆರಡನ್ನು ಈ ಹೊತ್ತು ನಾನು ಕೇಳಿದೆ ಅಷ್ಟೇ ! ಅದಕ್ಕುತ್ತರವಾಗಿ ರಾಮನ ಮಾತನ್ನು ಕೇಳಿದ ಆಕೆ ನುಡಿದದ್ದೇನೆಂದರೆ––

ಎನಲದನು ಕೇಳುತ್ತ ನುಡಿದಳು । ಘನ ಪ್ರತಿಜ್ಞೆಗೆ ಕೈಕೆ ರಾಜ್ಯವ ।
ನನುಗೊಳಿಸು ಭರತಂಗೆ ಸಂಭೃತ ಪಟ್ಟ ಶೋಭನವ ॥
ವನದಿ ಹದಿನಾಲ್ಕಬ್ದ ಚೀರಾ । ಜಿನ ಜಟಾಧರನಾಗಿಯನ್ನಾ ।
ತನದಲಿರಬೇಕೆಳು ಬೇಗದಿ ನಿಲ್ಲದೀಕ್ಷಣವೆ ॥ ೩೪ _ ೧೧ ॥

ಇದಕ್ಕೆ ರಾಮನ ಉತ್ತರ

ಜನಃ ರಾಜ್ಯವನಿತ್ತ ಭರತಗೆ । ಜನಕಿಪೇನಾ ಪಯಣಿಸಿನಿತಕೆ ।
ಜನಕ ನುಡಿಯಂದೆ ನಾಚಲೇತಕ್ಕೆಂದನಾ ರಾಮ || ೩೪ – ೧೧

ಇದನ್ನು ಕೇಳಿದ ದಶರಥನ ದುಃಖ ಮೇರೆ ಮೀರುತ್ತದೆ. ಆಗ ರಾಮ ತಂದೆಗೆ ಸಮಾಧಾನಮಾಡುತ್ತ ಹೇಳುತ್ತಾನೆ.

ಸತ್ಯವುಳಿದರೆ ಕೀರ್ತಿಯುಳಿವುದು । ಸತ್ಯವುಳಿದರೆ ಲೋಕವುಳಿವುದು ।
ಸತ್ಯವುಳಿದರೆಯರ್ಥ ಬಲವೈಶ್ವರ್ಯ ಸೇರುವುದು ||
ಸತ್ಯವಳಿದಡದೆಲ್ಲ ಕೆಡುವುದು । ಮತ್ತೆ ನಾನಡವಿಯಲಿ ನಿನ್ನಯ ।
ಸತ್ಯಕಿರೆ ತಸಗಲ್ಲಿ ರಾಜ್ಯದ ಕೋಟಿ ಸುಖವಹುದು || ೪೪ _ ೧೧ ||

ಎಂತಹ ಉದಾತ್ತ ಧ್ಯೇಯ ! ಎಂತಹ ಸತ್ಯನಿಷ್ಠೆ !! ಕೂಡಲೇ ತಾಯಿಯ ಅಪ್ಪಣೆ ಪಡೆಯಲು ಕೌಸಲ್ಯೆಯ ಮನೆಗೆ ರಾಮನ ಗಮನ. ತಾಯಿಗೆ ಈ ಕರ್ಣಕಠೋರ ಸುದ್ದಿ ಹೇಳುತ್ತಾನೆ. ಹಾಗೂ ವನಕ್ಕೆ ಹೊರಡುವ ತಯಾರಿಯ ವಿಷಯ ಹೇಳುತ್ತಾನೆ. ಈ ವಿಷಯ ಕೇಳಿದ ಕೂಡಲೇ ಆಕೆ ಮೂರ್ಛಾಗತೆಯಾಗುತ್ತಾಳೆ. ಮೂರ್ಛೆಯಿಂದೆದ್ದು ಹಲುಬುತ್ತಾಳೆ. ಭರತನಿಗೆ ಬೇಕಾದರೆ ಪಟ್ಟಗಟ್ಟಲಿ. ಆದರೆ ನೀನು ಮಾತ್ರ ವನಕ್ಕೆ ಹೋಗುವದು ಬೇಡ ಎನ್ನುತ್ತ ಅವನನ್ನು ಇಲ್ಲಿಯೇ ನಿಲ್ಲಿಸಲು ಪ್ರಯತ್ನಿಸುತ್ತಾಳೆ.

ಈ ಮಾತನ್ನು ಕೇಳಿದ ಲಕ್ಷ್ಮಣ ಸಿಟ್ಟಿಗೆದ್ದು ಕೈಕೆ, ಭರತರನ್ನೇ ನಾಶಮಾಡುವ ಹವಣಿಕೆಯನ್ನು ತೋರುತ್ತಾನೆ. ಧನುರ್ಧಾರಿಯಾಗಿ ಇಡೀ ರಾಜ್ಯವನ್ನೇ ತನ್ನ ವಶಮಾಡಿಕೊಳ್ಳುತ್ತೇನೆ ಎಂಬ ಮಾತನ್ನು ಹೇಳುತ್ತಾನೆ. ಆಗ ರಾಮ ಆವನನ್ನು ಒಳ್ಳೆಯ ಮಾತುಗಳಿಂದ ಸಮಾಧಾನಪಡಿಸುತ್ತಾನೆ. ಒಳ್ಳೆಯ ಮಾರ್ಗದರ್ಶನ ನೀಡುತ್ತಾನೆ. ಈ ಸಂಸಾರ ಹೇಗೆ ದುಃಖದ ಆಗರ ಆಗಿದೆ. ಎಂಬ ವಿಚಾರವನ್ನು ಮನೆಂಬುಗುವಂತೆ ತಿಳಿಸುತ್ತಾನೆ. ಪದ ೧೧ ರಿಂದ ೩೦ ರ ವರೆಗೂ ವಿವಿಧ ರೀತಿಯಿಂದ ತಿಳಿಹೇಳುತ್ತಾನೆ. ಕೊನೆಯಲ್ಲಿ.

ತನ್ನ ನಿಜವೇ ಕೇವಲಾತ್ಮನು । ಭಿನ್ನವಹ ಪ್ರಾಣೇಂದ್ರಿಯಾಗಳಂ ।
ದನ್ಯನೆಂದರಿವನ್ನ ದಾಃಖದಿ ಮುಳುಗಿ ಬಳಲುವನು ॥
ನನ್ನ ನುಡಿಯಲಿ ಮನನಗೋಚರ । ವನ್ಯನೆಂದರಿ ಸಕಲ ಕಾಲದಿ ।
ನಿನ್ನೊಳೇನೂ ನೆನೆಯದಿಪ್ಪುದು ಪೂರ್ಣನಾಗೆಂದ ॥ ೩೭ – ೧೨ ॥

ಲಕ್ಷ್ಮಣನೂ ಕೂಡ ರಾಮನೊಡನೆ ಹೊರಡಲು ಸಿದ್ಧನಾಗುತ್ತಾನೆ. ಅವರಿಗೆ ತಾಯಿಯ ಆಶೀರ್ವಾದ.

ಕ್ಷೇಮವಾಗಲಿ ನಿನ್ನನನುದಿನ । ಸೋಮ ಗಂಧರ್ವಾದಿಗೀಶರು ।
ತಾಮರಸಭವ ವಿಷ್ಣು ರುದ್ರಾದಿಗಳು ರಕ್ಷಿಸಲಿ ॥
ರಾಮ ನೀ ನಡೆವಲ್ಲಿ ನಿಂತ । ಲ್ಲಾ ಮಹಾನಿದ್ರೆಯಳಿಸುತ್ತಾ ।
ಭಾಮೆಯಡಿಗಡಿಯಪ್ಪಿದಳು ಜಿಹದಾಕಲನುಷಮನ ॥ ೭೩ – ೧೨ ॥

ಸೀತೆಯೂ ರಾಮನೊಡನೆ ಬರಲು ತಯಾರಾಗುತ್ತಾಳೆ. ರಾಮ ಅಡವಿಯಲ್ಲಿಯ ಕಷ್ಟ ತೊಡಕುಗಳನ್ನು ವರ್ಣಿಸಿದರೂ ಕೂಡ ಸೀತೆ ತಾನು ಬರುತ್ತೇನೆ ಎಂದು ಹಟ ಹಿಡಿಯುತ್ತಾಳೆ. ಆಕೆ ಹೇಳಿದ ಮಾತು ಕೇಳಿ.

ನೀನಗಲಿ ನಾನಿಹೆನೆ ಧರ್ಮ । ಜ್ಞಾನ ದಯಾನಿಧಿ ನಿನ್ನ ಹತ್ತಿರೆ ।
ನಾನಿರಲು ನೋಡುವ ಸಮರ್ಥರದುಂಟೆ ಭೋಜನಕೆ ॥
ದೀನತನವೇ ಕಂದಮೂಲಸ । ನೇನನೀ ಭುಂಜಿಸಿದ ಶೇಷವ ।
ಸಾನುರಾಗದಲುಂಡೆನಮೃತ ಸಮಾನವದು ತನಗೆ ॥ ೭೯ – ೧೨ ॥

ಇದಲ್ಲದೇ

ಮಲ್ಲನಾ ನಿಮ್ಮೊಡನೆ ಚರಿಸಲು । ಕಲ್ಲು ಮುಳ್ಳುಗಳೆಲ್ಲವರಳಿನ ।
ಮಲ್ಲಿಗೆಯಪೋಲಹವು ನನ್ನಂಕದಲಿ ನಿಮ್ಮವನು ॥
ಅಲ್ಲಿ ಮಲಗಿಸಿಕೊಂಡು ಕಾರ್ಯವ । ನೆಲ್ಲ ಸಾಧಿಸಿ ನಾನೆ ಮಾಡುವೆ ।
ನೆಲ್ಲಿಯೂ ಮತ್ತೊಂದ ಚಿತ್ತ್ಯನೆಂದಳಬುಜಾಕ್ಷಿ ॥ ೮೦ – ೧೨ ॥

ಇಷ್ಟೇ ಅಲ್ಲದೆ ಮತ್ತೊಂದು ವಿಶೇಷ ಸಂಗತಿಯನ್ನು ಸಹ ತಿಳಿಸುತ್ತಾಳೆ. ಅದಾವುದೆಂದರೆ— ತಾನು ಬಾಲೆಯಾಗಿದ್ದಾಗ ಜ್ಯೋತಿಷಜ್ಞನು ಹೇಳಿದ್ದೇನೆಂದರೆ ಸೀತೆಯು ಪತಿಯೊಡನೆ ವನವಾಸಿಯಾಗುವಳು. ಎಂದು ಇದಲ್ಲದೇ ಹಿಂದೆ ರಾಮಾಯಣವನ್ನು ಹೇಳಿದ ಅನೇಕ ಕವಿಗಳು ಸೀತೆ ರಾಮನೊಡನೆ ಅರಣ್ಯಕ್ಕೆ ಹೋದ ವಿಷಯವನ್ನು ಹೇಳಿರುವರು. ಆದಕಾರಣ ನಾವು

ನಿನ್ನೊಡನೆ ಬರುವವಳೇ! ಬರದೇ ಇದ್ದರೆ ರಾಮಾಯಣಕ್ಕೆ ಅಪಚಾರವೆಸಗಿದಂತೆಯೇ!! ಈ ವಿಷಯದ ವಿವರಣೆ ನೋಡಿ–

ಬಾಲೆಯಾಗಿರೆ ನನ್ನ ಕಂಡು ವಿ । ಶಾಲ ಜೋತಿಃಶಾಸ್ತ್ರವಂತನು ।
ಹೇಳಿದನು ಪತಿಯೊಡನಿವಳು ವನವಾಸಿಯಹಳೆಂದು ॥
ಹೇಳಿದಾ ದ್ವಿಜ ಸತ್ಯವಂತನು । ಮೇಳವಿಸಿತದು ಮತ್ತು ಕಿಂಚಿತ ।
ಕೇಳಿ ನನ್ನನು ಪೊಡನೆ ಕರೆದೊಯ್ಯೆಂದಳಾ ಸೀತೆ ॥ ೪೧ – ೧೨ ॥

ಹಿಂದೆ ರಾಮಾಯಣವನೇಕವ । ನೆಂದಿಹರು ಕವಿವರರುಪದರೊಳ ।
ಇಂದುಮುಖಿ ಸೀತೆಯನುಳಿದು ರಾಘವನಡವಿಗಾಗ ॥
ಸಂದ ಕಥೆಯೊಂದರೊಳಗಾದರು । ಬಂದದುಂಟೇ ಯದುಗುಣದಿ ತಾ ।
ಹಿಂದುಗೊಂಡೇ ಬಹೆನು ನಿಮ್ಮ ಸಹಾಯ ಕೃತ್ಯದಲಿ ॥ ೪೨ – ೧೨ ॥

ಅಂತೆಯೇ ಸೀತೆ ರಾಮನೊಡನೆ ಅರಣ್ಯಕ್ಕೆ ಹೋಗಲು ಸಿದ್ಧಳಾಗುವಳು. ರಾಮ ಲಕ್ಷ್ಮಣ ಸೀತೆ ಮೂವರೂ ಕಾಲ್ನಡಿಗೆಯಲ್ಲಿ ಅರಣ್ಯಕ್ಕೆ ಹೊರಟಿದ್ದನ್ನು ಕಂಡು ಪುರವಾಸಿಗಳೆಲ್ಲ ಮರುಕಪಡುತ್ತಿದ್ದರು.

ರಾಮ ತಂದೆಗೆ ಹೇಳಿ ಹೊರಟ ಸಂದರ್ಭದಲ್ಲಿ ಪುರಜನರೆಲ್ಲ ನಾನಾ ರೀತಿಯಿಂದ ದುಃಖಪಡುತ್ತಾ ಇರಲಾಗಿ ವಾಮದೇವ ಋಷಿ ಅವರನ್ನೆಲ್ಲ ಈ ಮಾತಿನಿಂದ ಸಮಾಧಾನಪಡಿಸುತ್ತಾನೆ.

ಆರು ಮರುಗದಿರಿಲ್ಲಿ ರಾಘವ । ನಾರು ಜಾನಕಿಯೆಂಬವಳು ಧಿಟ ।
ಕಾರಣವದರಿಯುಬಡೆ ತಾನದನೆಂಬೆ ರಾಘವನು ॥
ಶ್ರೀರಮಣ ನಾರಾಯಣನು ಮುರ । ವೈರಿ ವಿಷ್ಣು ಮುಕುಂದ ಸೀತಾ ।
ನಾರಿ ಸಾಕ್ಷಾಲ್ಲಕುಮಿ ಯೋಗಾಧಾರೆ ಪರಮಾಯೆ ॥ ೮ – ೧೩ ॥

ರಾಮನೊಡನೈದುವ ಸುಮಿತ್ರನು । ಭೂಮಿಯಾಂತಾನಂತನೆಂಬವ ।
ರಾಮ ಮಾಯಾ ಗುಣದಿ ತತ್ತದ್ವ್ಯಾಸದಲಿ ತೋರ್ಪ ॥
ರಾಮ ರಾಜಸ ಲೀಲೆಯಿಂದವೆ । ತಾಮರಸಭವನಾಗಿ ಸೃಜಿಸುವ ।
ಕ್ಷೇಮವನು ಮೂಜಗಕೆ ಹರಿಯೆಂದೆನಿಸಿ ಪಾಲಿಸುವ ॥ ೯ – ೧೨ ॥

ಇದಕ್ಕೂ ಮುಂದೆ ಹೋಗಿ ಆ ಪರಮಾತ್ಮನ ಮತ್ಸ್ಯಕೂರ್ಮವರಾಹಾದಿ ಎಲ್ಲ ಅವತಾರಗಳ ವಿವರಗಳನ್ನು ಹೇಳುತ್ತಾ ರಾಮನ ವಿಷಯವಾಗಿ ಈ ರೀತಿ ಹೇಳಿದ–

ಆದಿವಿಷ್ಣುವೆ ರಾಮ ಜಗ ಸಂ । ಪಾದನಸ್ಥಿತ್ಯಂತ ಕಾರಣ ।
ವಾದಿ ಮಾಯೆಯು ಸೀತೆ ಹೋಗುವನಿಂದನುಜ ಸಹಿತ ॥
ಹೀರುವನು ರಾವಣನ ಜೀವವ । ಹೋದದಿನ ನಾರದನು ತಡೆದುದು ।
ಮೇದಿನೀ ಹೊರೆಯೆಂದು ಹೇಳಿದ ಬಂದು ರಾಘವಗೆ ॥ ೧೫ _ ೧೩ ॥

ಹೀಗೆ ಮುಂದೆ ನಡೆಯಬಹುದಾದ ಘಟನೆಯ ವಿವರಗಳನ್ನೆಲ್ಲ ಪುರ ಜನರಿಗೆ ಅರುಹುತ್ತಾನೆ. ರಾಮನಾಮ ನೆನೆದವರಿಗೆ ಯಾವ ಭಯವೂ ಇಲ್ಲ ಎಂದರುಹುತ್ತಾನೆ. ನೀವು ಯಾರೂ ದುಃಖಿಸಲು ಅವಕಾಶವಿಲ್ಲ ಎಂದು ತಿಳಿಹೇಳುತ್ತಾನೆ.

ಆಮೇಲೆ ದಶರಥ ಸುಮಂತನನ್ನು ಕರೆದು ರಥದ ಮೇಲೆ ರಾಮ ಮೊದಲಾದವರನ್ನು ಕರೆದುಕೊಂಡು ಹೋಗಿ ಬಿಟ್ಟು ಬರಲು ತಿಳಿಸುತ್ತಾನೆ. ಅಂತೆಯೇ ಸುಮಂತನು ತಮಸಾನದಿಯ ದಂಡೆಯ ವರೆಗೆ ಅವರನ್ನು ಬಿಡುತ್ತಾನೆ. ಅಲ್ಲಿಂದ ಮುಂದೆ ಗಂಗಾ ನದಿಯ ದಂಡೆಯ ವರೆಗೂ ಅವರನ್ನು ಬಿಡುತ್ತಾನೆ. ಅಲ್ಲಿ ರಾಮನ ಸಖನಾದ ಗುಹನ ಆಗಮನ. ಆತನ ಆತಿಥ್ಯ ಮೊದಲಾದವು ನಡೆಯುತ್ತದೆ. ರಾಮ ಮಾತ್ರ ಜಲಾಹಾರದಿಂದ ಅಲ್ಲಿ ಆ ರಾತ್ರಿಯನ್ನು ಕಳೆಯುತ್ತಾನೆ.

ಊರಜನರು ಬಹಳವಾಗಿ ಬರುತ್ತಿರುವದನ್ನು ತಿಳಿದ ರಾಮನು ರಾತ್ರಿಯೇ ಗುಹನ ಸಹಾಯದಿಂದ ಗಂಗಾನದಿಯನ್ನು ದಾಟಿ ಚಿತ್ರಕೂಟ ಪರ್ವತಕ್ಕೆ ಬರುತ್ತಾನೆ. ದುಃಖಪಡುತ್ತಿದ್ದ ಗುಹನಿಗೆ ಆಧ್ಯಾತ್ಮಿಕ ವಿಷಯದ ಉಪದೇಶ ಗುಹನ ದುಃಖಶಮನ. ರಾಮ ಆತನಿಗೆ ಕೊನೆಯಲ್ಲಿ ಹೇಳಿದಮಾತು–

ಹಿಂದಣಾರ್ಜಿತ ಪ್ರಾರಬ್ಧದಲಿ । ಬಂದುದಕ್ಕೊಡಬಟ್ಟು ಮಾಡದೆ ।
ಮುಂದೆ ಸುಖದುಃಖಾದಿ ಸಾಧನ ಕಾರ್ಯ ಕರ್ಮವನು ॥
ಯೆಂದ ತತ್ತ್ವದ್ವಿಹಿತ ಲೌಕಿಕ । ದಂಡವೇನೂ ಬಿಡದೆ ಹಿರಿಯರ ।
ಚಂದದಲ್ಲಿರಬೇಕುದೆಂದನು ಗುಹಗೆ ಸೌಮಿತ್ರ ॥ ೧೪ _ ೧೯ ॥

ಚಿತ್ರಕೂಟದಲ್ಲಿಯ ಭರದ್ವಾಜಾಶ್ರಮಕ್ಕೆ ಪ್ರವೇಶ. ಭರದ್ವಾಜನಿಂದ ರಾಮನ ಗುಣಗಾನ ಕಥನ. ಸಾಕ್ಷಾತ್ ಮಹಾವಿಷ್ಣುವಿನ ಅವತಾರವೇ ನೀನು ! ನಿನ್ನಿಂದಲೇ ಈ ಜಗತ್ತಿನ ರಕ್ಷಣೆ ಇತ್ಯಾದಿ ಇತ್ಯಾದಿ.

ಶ್ರೀರಾಮನು ಅವರಿಂದ ಬೀಳ್ಕೊಂಡು ವಾಲ್ಮೀಕಿಯಾಶ್ರಮಕ್ಕೆ ಬರುವಿಕೆ. ವಾಲ್ಮೀಕಿ ಋಷಿಯೊಡನೆ ಸಮಾಗಮ. ತಾನು ವಾಸಿಸಲು ಯೋಗ್ಯವಾದ ಸ್ಥಳ ಯಾವದು ಎಂದು ರಾಮ ಕೇಳಿದ್ದಕ್ಕೆ ವಾಲ್ಮೀಕಿ ಆಧ್ಯಾತ್ಮಿಕ ವಿಷಯವಾದ ವೇದಾಂತದ ಸಾರವನ್ನೇ ವಿವರಿಸುತ್ತಾನೆ. ಕೊನೆಯಲ್ಲಿ ಹೀಗೆ ಹೇಳಿದ.

ನಿತ್ಯ ಶುದ್ಧ ನಿರೀಹ ನಿಷ್ಕಳ । ಸತ್ಯ ಸಂವಿನ್ಮಾತ್ರ ನಿರ್ಮಲ ।
ಪ್ರತ್ಯಗಾದ್ವಯತೀತ ಶಾಂತನಿರಾಳ ನಿರ್ಭೇದ ॥
ವಸ್ತು ವಾಙ್ಮತಿ ದೂರ ಸಕಳಾ । ಧ್ಯಸ್ತ ರಾಮಾ ರಾಮಯೆಂಬುವಿ ।
ರಕ್ತಿಯುಂತರಲಿ ಸೀತೆ ಸಹಿತಿರು ರಾಮ ಮನೆಯಾಗಿ ॥ ೩೦ _ ೧೫॥

ರಾಮಾ ಎಂಬ ಎರಡಕ್ಷರದ ಶಬ್ದದ ಮಹಿಮೆಯಿಂದಲೇ ತಾನು ವಾಲ್ಮೀಕಿ ಋಷಿಯಾದ ಸಂಗತಿಯನ್ನು ಹೇಳುತ್ತಾನೆ.

ಮುನ್ನ ನಾನು ಬೇಡರೊಡನೆ ಸೇರಿ ಕಿರಾತನಾಗಿದ್ದೆ. ಶೂದ್ರಿತಿಯನ್ನು ಮೆಚ್ಚಿ ಚೋರರ ಸಂಗಡ ಸೇರಿ ಚೋರನಾಗಿದ್ದೆ. ಸಪ್ತರ್ಷಿಗಳ ಸಂಸರ್ಗದಿಂದ ನನ್ನ ದುಷ್ಟತನವನ್ನೆಲ್ಲ ತೊರೆದು ರಾಮಧ್ಯಾನದಿಂದ ನಾನು ಈಗ ವಾಲ್ಮೀಕಿಯಾಗಿದ್ದೇನೆ. ಇದು ನನಗೆ ಎರಡನೆಯ ಜನ್ಮ. ಎಂದಿತ್ಯಾದಿಯಾಗಿ ತನ್ನ ಕಥೆಯನ್ನು ಹೇಳಿ ರಾಮನಿಗೆ ಉಳಿಯಲು ಶೃಂಗಗಿರಿ (ಶೃಂಗವೇರಿ) ಎಂಬ ಸುಸ್ಥಳವನ್ನು ತೋರಿಸಿದ. ರಾಮ ಅಲ್ಲಿ ಪರ್ಣಕುಟಿ ರಚಿಸಿ ವಾಸವಾಗಿದ್ದ.

ಇತ್ತ ಅಯೋಧ್ಯಾ ಪಟ್ಟಣದಲ್ಲಿ ಏನು ನಡೆಯಿತು ಎಂಬುದನ್ನು ನೋಡೋಣ. ರಾಮ ಹೊರಟಕೂಡಲೇ ದಶರಥ ಮೂರ್ಛಾಗತನಾದ. ತನಗೆ ಸಾವು ಸಮೀಪಿಸಿತು ಎಂಬುದನ್ನು ಅರಿತ. ಕೌಸಲೆಗೆ ತನ್ನ ಪ್ರಾಣೋತ್ಕ್ರಮಣಕಾಲದಲ್ಲಿ ತಾನು ಹಿಂದೆ ಪಡೆದ ಶಾಪದ ಸಂಗತಿ ತಿಳಿಸುತ್ತಾನೆ. ಯೌವನದ ಕಾಲದಲ್ಲಿ ವೈಶ್ಯಬ್ರಾಹ್ಮಣನನ್ನು ಬಾಣದಿಂದ ಹೊಡೆದು ಕೊಂದ ಸಂಗತಿಯನ್ನೂ ಆತನ ತಂದೆ ತಾಯಿಂದಿರು ಕೊಟ್ಟ ಶಾಪದ ವಿವರವನ್ನೂ ತಿಳಿಸಿ ಈಗ ತನಗೆ ಮರಣಸಮಯ ಪ್ರಾಪ್ತವಾಗಿದೆ. "ಪರರಿಗೆ ಕೇಡುಮಾಡಿದರೆ ತನಗೆ ಕೇಡು ತಪ್ಪಿದ್ದಲ್ಲ" ಎಂಬ ಮಾತು

ಸುಳ್ಳಲ್ಲ ಎಂದು ಹೇಳುತ್ತ ರಾಮನಾಮವನ್ನೇ ಹಲುಬುತ್ತ ಗತಪ್ರಾಣ-ನಾದನು. ಕೌಸಲ್ಯೆ ಸುಮಿತ್ರಾದಿಯರು ಘೋಳಿಟ್ಟು ಅಳತೊಡಗಿದರು.

ಅಳುವಿನ ಸಪ್ಪಳವನ್ನು ಕೇಳಿ ವಸಿಷ್ಠ ಸುಮಂತ್ರ ಮೊದಲಾದವರು ಬಂದು ದಶರಥನ ದೇಹವನ್ನು ತೈಲಕಟಾಹದಲ್ಲಿಡಿಸಿ ಭರತನಿಗೆ ಹೇಳಿ ಕಳುಹಿಸಿದರು. ಕೂಡಲೇ ಭರತ ಶತ್ರುಘ್ನನೊಡಗೂಡಿ ಬಂದ. ಬರುವಾಗಲೇ ಹಾಳು ಸುರಿಯುತ್ತಿರುವ ಪಟ್ಟಣವನ್ನು ನೋಡಿ ಏನೋ ಅನಾಹುತ ವಾಗಿದೆ ಎಂಬುದನ್ನರಿತ. ತನ್ನ ತಾಯಿಯ ಬಳಿಗೆ ಬಂದ. ಬಂದಂಥ ಭರತನನ್ನು ನೋಡಿ ತಾಯಿ ಕೈಕೇಯಿ ಹೇಳುತ್ತಾಳೆ.

ನಿನ್ನ ತಂದೆಗೆ ದೊಡ್ಡಗತಿಯಾಯ್ತು. ರಾಮ ಲಕ್ಷ್ಮಣರು ಅಡವಿಗೆ ಹೋದರು. ರಾಜ್ಯವನ್ನು ನೀನೇ ಪರಿಪಾಲಿಸು ಎಂದಿತ್ಯಾದಿಯಾಗಿ ಹೇಳಿದಳು. ನಿನಗೆ ರಾಜ್ಯ ದೊರಕಿಸಿಕೊಡಲು ನಾನು ಒಂದು ಉಪಾಯ ಮಾಡಿದೆ ಅದೇನೆಂದರೆ —

ವರವೆರಡನೊಲಿದಿತ್ತ ಪೂರ್ವದ । ಲರಸನದಕಾ ಬೇಡಿಕೊಂಡೆನು ।
ಧುರದ ರಾಜ್ಯವ ನಿನಗೆ ಸಲಿಸೆಂದೊಂದು ಮತ್ತೊಂದ ॥
ಧರಿಸಿ ಮುನಿವೃತ್ತಿಯನು ರಾಘವ । ನಿರಲಡವಿಯಲ್ಲೆಂದಡಿತ್ತನು ।
ಧರಣಿಪತಿ ಸತ್ಯಕ್ಕೆಯುದರಿಂ ರಾಜ್ಯ ನಿನಗಾಯ್ತು ॥ ೨೯ – ೧೬ ॥

ಈ ಮಾತನ್ನು ಕೇಳಿದ ಭರತನು "ನಿನ್ನ ಬಸುರಲಿ ಹೊರೆದು ಕೆಟ್ಟೆನೊ ಪಾಪಿಯಾದೆನೊ ಶಿವಶಿವಾಯೆಂದ" ಎಂದು ಬಹುದುಃಖಪಟ್ಟ ! ಏನುಮಾಡಲಿ ಎಂದು ದಾರಿತೋರದವನಾದ !! ಕೂಡಲೇ ಕೌಸಲ್ಯೆಯಿದ್ದ ಲ್ಲಿಗೆ ಹೋಗಿ ಕ್ಷಮಾಪಣೆ ಕೇಳಿದ ಕೌಸಲ್ಯೆ ಆತನನ್ನು ಸಮಾಧಾನ ಪಡಿಸುತ್ತಾಳೆ. ಗುರು ವಸಿಷ್ಠನೂ ಕೂಡ ಬಂದು ಮುಂದಿನ ಕಾರ್ಯ ಜ್ಞಾಪಿಸುತ್ತಾನೆ. ಹಾಗೂ ಸಂಸಾರ ಕರ್ಮದ ವಿವರ ತಿಳಿಸುತ್ತಾನೆ. ದುಃಖಕ್ಕೆ ಇದು ಸಮಯವಲ್ಲ. ಈ ಭವದಲ್ಲಿ ಸುಖದುಃಖ ಎರಡೂ ಇದೆ. ಸಂಸಾರವಲ್ಲಿ ಸಾರವಿಲ್ಲ ಎನಬೇಡ. ಏಕೆಂದರೆ-

ಸಾರವಿಲ್ಲೆನಬೇಡವೀ ಸಂ । ಸಾರದಲಿ ಬಲ್ಲವಗೆ ವಿರತಿ ವಿ ।
ಚಾರ ಶಾಂತಿ ಕ್ಷಾಂತಿ ದಯ ಧೃತಿ ಸತ್ಯ ನಿಷ್ಠೆಗಳು ॥
ಸಾರವಲ್ಲವೆ ಕೆಡುವ ದೇಹ ವಿ । ಕಾರವನು ನೋಡುವರೆ ಕಾಲ ಸು
ಮಾರಿಯಾಣಲಿಸ ಗೋರೆ ಯೆಲ್ಲರ ದೇಹ ಕೇಳೆಂದ ॥ ೪೩ _ ೧೬ ॥

ಹುಟ್ಟಿದವರಾರಿಗೂ ಮರಣ ತಪ್ಪಿದ್ದಲ್ಲ. ಆದ್ದರಿಂದ ಶೋಕ ಬಿಟ್ಟು ಮುಂದಿನ ಕ್ರಿಯಾಕರ್ಮ ನೆರವೇರಿಸು. ಎಂದು ಹೇಳಿದಾಗ ವಸಿಷ್ಠ ನೆಂದಂತೆ ಮುಂಡಣ ಎಲ್ಲ ಕೆಲಸಗಳನ್ನು ಮಾಡಿ ಮುಗಿಸಿದನು.

ನಂತರ ರಾಮನನ್ನು ಕಾಣುವ ತವಕದಿಂದ ಚಿತ್ರಕೂಟಕ್ಕೆ ಹೊರಡಲು ಆಲೋಚನೆ ಮಾಡುತ್ತಾನೆ. ಸಕಲ ಪರಿವಾರ ಸೈನ್ಯಸಮೇತನಾಗಿ ಹೊರಡುತ್ತಾನೆ. ದಾರಿಯಲ್ಲಿ ಗುಹನ ಭೇಟಿ. ಸೈನ್ಯಸಹಿತನಾಗಿ ಬಂದ ಭರತನನ್ನು ಕಂಡು ಗುಹನಿಗೆ ಸಂಶಯ. ಭರತ ತನ್ನ ನಡತೆಯಿಂದ ಅವನ ಸಂಶಯವನ್ನು ದೂರಮಾಡುತ್ತಾನೆ. ರಾಮ ಚಿತ್ರಕೂಟದಲ್ಲಿ ಮುನಿಗಳ ನಡುವೆ ಸೀತಾಲಕ್ಷ್ಮಣ ಸಹಿತ ಸುಖದಿಂದಿದ್ದಾನೆ ಎಂಬ ವಿಷಯ ತಿಳಿಯು ತ್ತದೆ. ಅಲ್ಲಿಗೆ ಕೂಡಲೇ ಹೋಗಲು ತಯಾರಾಗುತ್ತಾನೆ. ಗಂಗಾನದಿಯನ್ನು ದಾಟಿ ರಾಮನಿರುವ ಸ್ಥಳ ಪತ್ತೆಮಾಡಲು ಪ್ರಯತ್ನ. ಭರದ್ವಾಜ ಮುನಿ-ಯನ್ನು ಕಂಡು ಆತನಿಗೆ ನಮಸ್ಕರಿಸಿ ರಾಮನ ಇರವನ್ನು ತಿಳಿಯಲು ಪ್ರಯತ್ನ. ಭರದ್ವಾಜನೂ ಭರತನ ಮನದಿಂಗಿತವನ್ನು ತಿಳಿಯಲು ಪ್ರಯತ್ನಿ ಸುತ್ತಾನೆ. ಆಗ ಭರತ ಹೇಳಿದ ಮಾತು.

ಸ್ವಾಮಿ ಚಿತ್ತವಿಸೆನಗೆ ರಾಜ್ಯದ । ಕಾಮದಲ್ಲ್ಯಹುದೇನು ಸಾಕ್ಷಾ ।
ದ್ರಾಮನಿರೆ ರಾಜಾಧಿರಾಜನನಂತಗುಣ ಮಹಿಮ ॥
ಸೋಮಸನ್ನಿಭನಾತಜನ ಸು । ಕ್ಷೇಮನಾನಂದಾಬ್ಧಿ ನಿರುಪಮ ।
ನಾಮನಾತನ ಭೃತ್ಯ ಭೃತ್ಯರ ಭೃತ್ಯ ನಾನೆಂದೆ ॥ ೨೮ _ ೧೮ ॥

ಭರತನ ಮನ ತಿಳಿದ ಮಹರ್ಷಿ ಆತನನ್ನು ಪರಿವಾರ ಸಮೇತನಾಗಿ ಆ ರಾತ್ರಿ ಅಲ್ಲಿಯೇ ಉಳಿಸಿಕೊಳ್ಳುತ್ತಾನೆ. ಮೃಷ್ಟಾನ್ನ ಭೋಜನದಿಂದ ಅವರೆಲ್ಲರನ್ನು ತಣಿಸುತ್ತಾನೆ. ರಾಮನು ಇರುವ ಸ್ಥಳವನ್ನು ತಿಳಿಸಿ ಅವರನ್ನು ಕಳುಹಿಸಿಕೊಡುತ್ತಾನೆ.

ರಾಮನು ವಾಸವಾಗಿರುವ ಸ್ಥಳವನ್ನು ಕಂಡ ಭರತನು ಸಂತೋಷಿತ ನಾಗುತ್ತಾನೆ. ರಾಮಪಾದದ ಮೇಲೆ ಬಿದ್ದು ಹೊರಳಾಡುತ್ತಾನೆ.

ಪಾದದಲ್ಲಿ ಬಿದ್ದ ಭರತನನ್ನು ಹಿಡಿದೆತ್ತಿ ತಕ್ಕೈಸುತ್ತಾನೆ. ಆತನನ್ನು ಸಮಾಧಾನಪಡಿಸುತ್ತಾನೆ. ತನ್ನನ್ನು ಬಂದು ಕಂಡ ಕೌಸಲ್ಯೆ ಕೈಕೇಯಿ ಸುಮಿತ್ರೆ ಮೊದಲಾದವರಿಗೆಲ್ಲ ರಾಮ ನಮಸ್ಕರಿಸುತ್ತಾನೆ. ಅವರ ಆಶೀ-ರ್ವಾದ ಪಡೆಯುತ್ತಾನೆ. ದಶರಥನು ಮರಣಹೊಂದಿದ ವಾರ್ತೆ ಕೇಳಿ ದುಃಖಿತನಾಗುತ್ತಾನೆ. ವಸಿಷ್ಠನು ರಾಮನನ್ನು ಆತನ (ದಶರಥನ) ಪೂರ್ವಾಪರವನ್ನು ತಿಳಿಸಿ ಸಮಾಧಾನಪಡಿಸುತ್ತಾನೆ. ಆತ್ಮಜ್ಞಾನದ ವಿಚಾರವಾಗಿ ತಿಳಿಹೇಳುತ್ತಾನೆ. ರಾಮ ಪಿತೃವಿಗೆ ತಿಲಾಂಜಲಿಯೀಯುತ್ತಾನೆ. ಗಂಗೆಯಲ್ಲಿ ಸ್ನಾನಮಾಗಿಸಿ ಪರ್ಣಶಾಲೆಗೆ ಬಂದನಂತರ ಭರತ ರಾಮನಲ್ಲಿ ಕೇಳಿಕೊಳ್ಳುತ್ತಾನೆ.- ಪಟ್ಟ ಹಿರಿಯನದು. ಕಾರಣ ನೀನು ರಾಜ್ಯದ ಧುರ ವಹಿಸಿಕೋ ಎಂದು. ರಾಮ ಅದಕ್ಕೊಪ್ಪದೇ ಹದಿನಾಲ್ಕು ವರುಷ ದಂಡ ಕಾರಣ್ಯದಲ್ಲಿದ್ದು ತಾನು ಬರುತ್ತೇನೆ. ಅಲ್ಲಿಯ ತನಕ ರಾಜ್ಯ ನಿನ್ನದು. ನಾನು ಪಿತೃವಾಕ್ಯ ಮೀರಲಾರೆ ಎಂದು ಹೇಳಿದ. ಭರತ ಹಟ ಹಿಡಿದು ತಾನೂ ಸಹ ಇಲ್ಲಿಯೇ ಇರುತ್ತೇನೆನ್ನುತ್ತಾನೆ. ಆಗ ವಸಿಷ್ಠನು ಬಂದು ರಾಮಕಾರ್ಯದ ವಿಷಯ ಭರತನಿಗೆ ತಿಳುಹಿ ರಾವಣನ ವಧೆಗೋಸ್ಕರ-ವಾಗಿಯೇ ರಾಮ ಅರಣ್ಯಕ್ಕೆ ಬಂದಿದ್ದಾನೆ. ಅದನ್ನು ಮುಗಿಸಿದ ನಂತರ ರಾಮ ಅಯೋಧ್ಯೆಗೆ ಹಿಂತಿರುಗುತ್ತಾನೆ ಎಂದು ಮನವರಿಕೆ ಮಾಡಿ ಕೊಡುತ್ತಾನೆ. ಗುರುಮುಖದಿಂದ ಈ ಎಲ್ಲ ಗುಪಿತ ವಿಷಯ ತಿಳಿದ ಭರತನು "ಶ್ರೀರಾಮ ಪರಮಾತ್ಮ" ಎಂದು ದೃಢವಾಗಿ ನಂಬುತ್ತಾನೆ.

ರಾಮ ಬರಲಾರ ಎಂದು ತಿಳಿದ ಭರತನು ಆತನ ಪಾದುಕೆಗಳನ್ನು ಬೇಡುತ್ತಾ ಹೇಳುತ್ತಾನೆ.

ನಿನ್ನ ಕಂಡಂತನುದಿನವು ಸಂ । ಪನ್ನ ಪಾದುಕೆಯಿದನು ಪೂಜಿಸು
ತನ್ನವಹ ಸೇವೆಯನು ಮಾಡುತ ರಾಜ ಕೃತ್ಯವನು ॥
ಧನ್ಯನಾಗಿಹೆ ನೀ ಬಹನ್ನಗ । ಪನ್ನವರಿಯದೆ ನಿನ್ನ ಚರಣದ ।
ಸನ್ನಿಧಿಯಲಿದ್ದಂತೆ ಕಾಲವ ಕಳೆವೆ ನಾನೆಂದ ॥ ೨-೧೯ ॥

ಹೀಗೆ ಹೇಳಿ ತನ್ನ ಮನದಿಚ್ಛೆಯಂತೆ ರಾಮನ ಸ್ತುತಿ ಮಾಡುತ್ತಾನೆ. ಕೈಕೆಯೂ ಬಂದು ತನ್ನ ತಪ್ಪನ್ನು ಹೇಳಿ, ತನ್ನನ್ನು ಕ್ಷಮಿಸು ಎಂದು ರಾಮನನ್ನು ಬೇಡುತ್ತಾಳೆ. ಹಾಗೂ ಆತನ ಸ್ತುತಿಯನ್ನು ಮಾಡುತ್ತಾಳೆ.

ಕಷ್ಟವೀ ಸಂಸಾರವಿದರೊಳು । ಕಷ್ಟವೀ ತನುಧರ್ಮವಲ್ಲಿಯು ।
ಕಷ್ಟವೀ ಪುತ್ರಾದಿಯೊಳಗಣ ಸ್ನೇಹಮಯ ಪಾಶ ॥
ಕಷ್ಟ ನರಹರಿ ನಿನ್ನ ನಿಜಪದ । ವಿಷ್ಟರಧ್ಯಾನಾಖ್ಯ ಪಾಶದಿ ।
ಕಷ್ಟ ತನ್ನಯ ಮರೆಯ ಹೊಕ್ಕೆನುಯೆಂದಳೆಂದುಮುಖಿ ॥ ೧೩ _ ೧೯ ॥

ರಾಮ ಕೈಕೆಯನ್ನು ಸಮಾಧಾನಪಡಿಸುವನು. ಭರತನು ರಾಮನ ಪಾದುಕೆಗಳನ್ನು ತಕ್ಕೊಂಡು ಎಲ್ಲರೊಂದಿಗೆ ಅಯೋಧ್ಯೆಗೆ ಬರುತ್ತಾನೆ. ನಂದಿಗ್ರಾಮದಲ್ಲಿ ರಾಮಪಾದುಕೆಯನ್ನು ಸ್ಥಾಪಿಸಿ ರಾಮನಂತೆಯೇ ಮುನಿ ವೇಷ ಧರಿಸಿ ಅಲ್ಲಿಯೇ ಇದ್ದು ರಾಜ್ಯಕಾರಭಾರ ನಡೆಸುತ್ತ ಇರುತ್ತಾನೆ.

ಇತ್ತ ರಾಮನು ಸೀತಾಲಕ್ಷ್ಮಣರೊಡನೆ ಚಿತ್ರಕೂಟದಿಂದ ದಂಡ ಕಾವನದಲ್ಲಿಯ ಅತ್ರಿಮುನಿಯಾಶ್ರಮಕ್ಕೆ ಬರುತ್ತಾನೆ. ಅವರು ಋಷಿಯ ಉಪಚಾರದಿಂದ ಸಂತೋಷಿತರಾಗುತ್ತಾರೆ. ಅತ್ರಿಮುನಿಯ ಹೆಂಡತಿ ನಮಸ್ಕರಿಸಿದ ಸೀತೆಯನ್ನು ತಕ್ಕೈಸಿ ಉಪಚರಿಸಿ ಆಕೆಯನ್ನು ಈ ರೀತಿ ಹರಸುತ್ತಾಳೆ.

ದಂಡದಂತೆರಗಿದ್ದ ಸೀತೆಯು । ಕಂಡು ಮುಂದನಸೂಯೆ ತಕ್ಕೈಸಿ ।
ಕೊಂಡು ಬಾ ಬಾರೆನ್ನ ಮಗಳೇ ಸೀತೆ ಬಾ ಯೆನುತ ॥
ಮಂಡಿತಾ ಪ್ರೇಮದಲಿ ದಿವ್ಯ ಸು । ಕುಂಡಲದ್ವಯವನ್ನು ಕೊಟ್ಟಳ ।
ಖಂಡ ನಿರ್ಮಿತ ವಿಶ್ವಕರ್ಮ ಸುಕೌಶಲೋತ್ತರದ ॥ ೩೩ _ ೧೯ ॥

ಭಕ್ತಿಯಿಂದ ದುಕೂಲವೆರಡನು । ಮತ್ತೆ ಕೊಟ್ಟಳು ಮೂಸದಿದ್ದುದ ।
ನುತ್ತಮಾಗೆ ದಿವ್ಯಾಂಗರಾಗಾಕ್ಷತದ ದಿವ್ಯವನು ॥
ಹತ್ತಿರಲಿ ಕೆಡದೆಂದು ಶೋಭಾ । ಯುಕ್ತವನು ಕಮಲಾಲಯೆಗೆ ಪತಿ ।
ಭಕ್ತಿಯಿಂ ಬಾಳ್ ಸುಖದಿ ಪಾತಿವ್ರತ್ಯದಲ್ಲಿನುತ ॥ ೩೪ _ ೧೯ ॥

ಆ ದಿನ ಅತ್ರಿಋಷಿಯ ಆಶ್ರಮದಲ್ಲಿದ್ದು ಅವರಿಂದ ಆಶೀರ್ವಾದ ಪಡೆಯುತ್ತಾರೆ ಎಂಬಲ್ಲಿಗೆ ಅಯೋಧ್ಯಾಕಾಂಡ ಮುಕ್ತಾಯಗೊಳ್ಳುತ್ತದೆ.

ಕವಿಯು ಸಂಸ್ಕೃತದ ಅಧ್ಯಾತ್ಮ ರಾಮಾಯಣವನ್ನೇ ಇಲ್ಲೂ ಅನುಸರಿಸಿದ್ದಾನೆ. ಕಾರಣ ಸಂಸ್ಕೃತ ಶ್ಲೋಕಗಳನ್ನು ಈ ಕಾಂಡದ ವಿಷಯವಾಗಿ ಕೊಟ್ಟಿಲ್ಲ. ಸಂಸ್ಕೃತದಲ್ಲಿ ಒಂಭತ್ತು ಸರ್ಗಗಳಲ್ಲಿ ಹೇಳಿದ ವಿಷಯುವನ್ನು ಕನ್ನಡದಲ್ಲಿ ಹನ್ನೊಂದು ಸಂಧಿಗಳಲ್ಲಿ ವಿವರಿಸಿ ಹೇಳಿರುತ್ತಾನೆ.

ಮೊದಲನೆಯ ಸರ್ಗದಲ್ಲಿ 11 ಶ್ಲೋಕಗಳಲ್ಲಿ ಹೇಳಿದ ವಿಷಯವನ್ನು ಕವಿ ವಿಸ್ತರಿಸಿ ಆರು ಪದ್ಯಗಳಲ್ಲಿ ವಿವರಿಸಿದ್ದಾನೆ. ಹೀಗೆ ಹಲವು ಸಂದರ್ಭಗಳಲ್ಲಿ ಕವಿ ವಿವರಣೆ ನೀಡಿ ಕಾವ್ಯಕ್ಕೆ (ಮೆರಗು) ಸೊಬಗನ್ನು ನೀಡಿರುತ್ತಾನೆ. ಕಾವ್ಯದಲ್ಲಿ ಇತರ ವರ್ಣನೆಗಿಂತ ಅಧ್ಯಾತ್ಮಿಕ ವಿಷಯದ ಕಡೆಗೆ ಹೆಚ್ಚು ಒತ್ತು ಕೊಟ್ಟು ವಿವರಣೆ ನೀಡುವದರಲ್ಲಿ ಕವಿ ಯಶಸ್ವಿಯಾಗಿದ್ದಾನೆ. ಕವಿ ಸಂಸ್ಕೃತ ಅಧ್ಯಾತ್ಮರಾಮಾಯಣವನ್ನು ಮೂಲವಾಗಿಟ್ಟುಕೊಂಡು ಬೇಕಾದ ಕಡೆಯಲ್ಲಿ ತನ್ನ ಸ್ವಂತ ವಿವರಣೆ ಕೊಟ್ಟು ವಿಸ್ತರಿಸಿದ್ದಾನೆ. ಜನರಿಗೆ ಕಾವ್ಯ ರುಚಿಸುವಂತೆ ಮಾಡಿರುತ್ತಾನೆ. ಕಥೆಯಲ್ಲಿ ಎಲ್ಲೆಲ್ಲಿ ಅಧ್ಯಾತ್ಮ ವಿಷಯವನ್ನು ತಿಳಿಸಲು ಶಕ್ಯವಾಗುವದೋ ಅಲ್ಲೆಲ್ಲ ಅದರ ವಿವರವೇ ತುಂಬಿದೆ. ದೇವರ ಮಹತಿಯ ವರ್ಣನೆಯಿದೆ. ಪರಮಾತ್ಮನ ಅವತಾರದ ವಿವೇಚನೆಯಿದೆ. ಈ ವಿಷಯದಲ್ಲಿ ಸಂಸ್ಕೃತದಲ್ಲಿರುವ ವಿಷಯ ವಿವರಣೆಗಿಂತ ಇದರಲ್ಲಿಯೇ ವಿಷಯ ವಿವರಣೆ ವಿಸ್ತಾರವಾಗಿಯೂ ಸುಲಭವಾಗಿಯೂ ತಿಳಿಯುವಂತೆ ಇದೆ.

**ಕಥಾ ವಿವರಣೆಯ ಕ್ರಮ :**

ಇದರ ಕಥನಕ್ರಮದಲ್ಲಿ ಅನೇಕ ವ್ಯತ್ಯಾಸಗಳಿವೆ. ಕಥೆ ಒಂದೇ ಆಗಿದ್ದರೂ ಕೂಡ ಹೇಳುವಿಕೆಯಲ್ಲಿ ವಿಶೇಷವಿದೆ. ಅವುಗಳಲ್ಲಿ ಕೆಲವನ್ನು ತಿಳಿಯಲು ಪ್ರಯತ್ನಿಸೋಣ.

ವಾಲ್ಮೀಕಿ ರಾಮಾಯಣವು ಕಥನ ಪ್ರಧಾನವಾಗಿದ್ದು ಅಷ್ಟಾದಶ ವರ್ಣನೆ ಮೊದಲಾದವುಗಳಿಂದ ತುಂಬಿದೆ. ಆದರೆ ಅಧ್ಯಾತ್ಮ ರಾಮಾಯಣ ಹಾಗಲ್ಲ. ಅಧ್ಯಾತ್ಮಿಕ ವಿಷಯಗಳ ವರ್ಣನೆಯಿಂದ ಕೂಡಿದೆ.

ಪ್ರಾರಂಭದಲ್ಲಿ ಬ್ರಹ್ಮನು ವಾಲ್ಮೀಕಿಗೆ ರಾಮಾಯಣದ ಕಥೆ ಹೇಳುತ್ತಾನೆ. ಆದರೆ ಇದರಲ್ಲಿ ಸೀತೆ ರಾಮಕಥೆಯನ್ನು ಹೇಳುತ್ತಾಳೆ. ನಂತರ ಆಧ್ಯಾತ್ಮಿಕ ವಿಷಯವನ್ನು ರಾಮ ಹನುಮಂತನಿಗೆ ವಿವರಿಸುತ್ತಾನೆ. ಇದನ್ನು ಈಶ್ವರನು ಪಾರ್ವತಿಗೆ ಹೇಳಿದಂತೆ ಹೇಳಲಾಗಿದೆ.

ವಾಲ್ಮೀಕಿ ರಾಮಾಯಣದಲ್ಲಿ ರಾಮ ಸಾಮಾನ್ಯ ಶಿಶುವಿನಂತೆ ಜನಿಸುತ್ತಾನೆ. ಬಾಲಲೀಲೆ ಎಲ್ಲಾ ನಡೆಯುತ್ತವೆ. ಆದರೆ ಇದರಲ್ಲಿ ಸಾಮಾನ್ಯ ಶಿಶುವಿನಂತೆ ಜನಿಸಿದ ರಾಮ ತನ್ನ ತಾಯಿಗೆ ತನ್ನ ವಿಶ್ವರೂಪ ವನ್ನು ತೋರಿಸಿ ತಾನು ಜನ್ಮವೆತ್ತಿದ ಕಾರಣ ತಿಳಿಸುತ್ತಾನೆ. ನಂತರ ಮಾನವ ಶಿಶುವಿನಂತೆ ವರ್ತನೆ.

ವಾಲ್ಮೀಕಿ ರಾಮಾಯಣದಲ್ಲಿ ರಾಮ ಪರಮಾತ್ಮಸ್ವರೂಪ. ಆತನ ಅವತಾರ ರಾಕ್ಷಸರ ಸಂಹಾರಕ್ಕಾಗಿಯೇ ಜನ್ಮವೆತ್ತಿದ್ದಾನೆ ಎನ್ನುವದು ಕೊನೆಯಲ್ಲಿ ತಿಳಿಯುತ್ತದೆ. ಆದರೆ ಅಧ್ಯಾತ್ಮ ರಾಮಾಯಣದಲ್ಲಿ ಪ್ರಾರಂಭ ದಲ್ಲೇ ರಾಮ ಪರಮಾತ್ಮನ ಅವತಾರ, ರಾಕ್ಷಸರ ಸಂಹಾರಕ್ಕಾಗಿ ಜನಿಸಿದ್ದಾನೆ. ಮುಂದೆ ರಾವಣಾದಿಗಳ ಸಂಹಾರ ಮಾಡುತ್ತಾನೆ. ಇತ್ಯಾದಿ. ಪ್ರಾರಂಭದಲ್ಲಿಯೇ ರಾಮ ಪರಮಾತ್ಮ ಎಂಬುದನ್ನು ಜನರ ಮನಸ್ಸಿನಲ್ಲಿ ಬಿಂಬಿಸಲಾಗಿದೆ.

ವಿಶ್ವಾಮಿತ್ರ ಮಹರ್ಷಿಗಳೊಡನೆ ರಾಮನನ್ನು ಕಳುಹಿಸುವಾಗ ರಾಮ ಪರಮಾತ್ಮನ ಅವತಾರ ಎಂಬ ವಿಷಯವನ್ನು ದಶರಥನಿಗೆ ವಸಿಷ್ಠರು ತಿಳಿಸುತ್ತಾರೆ. ಇದು ವಾಲ್ಮೀಕಿ ರಾಮಾಯಣದಲ್ಲಿ ಇಲ್ಲ.

ಗುಹನಿಗೆ ಆಧ್ಯಾತ್ಮಿಕ ವಿಷಯದ ಉಪದೇಶ. ಮುನಿಗಳೆಲ್ಲರೂ ರಾಮ ಪರಮಾತ್ಮನ ಅವತಾರ ಎಂದು ತಿಳಿದು ಆತನ ಸ್ತೋತ್ರ ಮಾಡುವಿಕೆ. ಇವೆಲ್ಲ ಅಧ್ಯಾತ್ಮ ರಾಮಾಯಣದಲ್ಲಿ ಬರುತ್ತದೆ. ವಾಲ್ಮೀಕಿ ರಾಮಾಯಣದಲ್ಲಿ ಇಲ್ಲ.

ಅಯೋಧ್ಯಾಕಾಂಡದಲ್ಲಿ ಸೀತೆ ತಾನು ಜೋತಿಷ್ಯರಿಂದ ತಿಳಿದ ವಿಷಯ ಹಿಂದಣ ಯಾವ ರಾಮಾಯಣದಲ್ಲೂ ರಾಮ ಸೀತೆ ಬಿಟ್ಟು ಅರಣ್ಯಕ್ಕೆ ಹೋಗಿಲ್ಲ ಎಂಬ ವಿಷಯ, ಇವೆಲ್ಲ ಅಧ್ಯಾತ್ಮ ರಾಮಾಯಣದಲ್ಲಿ ಬರುತ್ತದೆ. ಆದರೆ ವಾಲ್ಮೀಕಿ ರಾಮಾಯಣದಲ್ಲಿ ಇದು ಇಲ್ಲ.

ಇದರಂತೆ ಭರದ್ವಾಜಾಶ್ರಮದಿಂದ ಹೊರಟ ರಾಮನು ವಾಲ್ಮೀಕಿ ಋಷಿಗಳ ಆಶ್ರಮಕ್ಕೆ ಬಂದಾಗ ವಾಲ್ಮೀಕಿಯು ತನ್ನ ಪೂರ್ವವೃತ್ತಾಂತ-ವನ್ನು ತಿಳಿಸುವ ಭಾಗವೂ ಅಧ್ಯಾತ್ಮ ರಾಮಾಯಣದಲ್ಲಿದೆ, ವಾಲ್ಮೀಕಿ ರಾಮಾಯಣದಲ್ಲಿ ಇಲ್ಲ.

ಹೀಗೆ ಪ್ರಾರಂಭದಿಂದಲೂ ಪ್ರತಿಯೊಂದು ಸಂದರ್ಭದಲ್ಲೂ ಅಧ್ಯಾತ್ಮ ವಿಷಯಕ್ಕೆ ಮಹತ್ವಕೊಟ್ಟು ರಾಮ ಲಕ್ಷ್ಮಣ ಸೀತೆಯರು ಪರಮಾತ್ಮನ ಅವತಾರ, ರಾಕ್ಷಸರ ಸಂಹಾರಕ್ಕಾಗಿ, ಭೂಭಾರ ಹರಣಕ್ಕಾಗಿ ಮಾನುಷ ಜನ್ಮದಲ್ಲಿ ಹುಟ್ಟಿದ್ದಾರೆ ಎಂಬುದನ್ನು ಬಿಂಬಿಸಲಾಗಿದೆ.

ಕವಿಯು ತನ್ನ ಕಾವ್ಯದಲ್ಲಿ ಅನೇಕ ಕಡೆಗಳಲ್ಲಿ ಗಾದೆ ಮಾತುಗಳನ್ನೂ ಆಡುನುಡಿಗಳನ್ನೂ ಉಪಯೋಗಿಸಿ ಕಾವ್ಯಕ್ಕೆ ಮೆರುಗು ಬರುವಂತೆ ಮಾಡಿದ್ದಾನೆ. ಉದಾಹರಣೆಗಾಗಿ ಕೆಲವನ್ನು ಇಲ್ಲಿ ಕೊಡಲಾಗಿದೆ.

೧) ಆರನ್ನೈ ದುಃಸಂಗ ಕೆಡಿಸದು

೨ ನಾರಿಯರಿಗಿಚ್ಛಿತವ ಕೊಟ್ಟಡದಾರನಾದರು ಕೆಡಿಸುಗು

೩) ಕ್ರೂರಿಯಲಿ ನಯವುಂಟೆ

೪) ತಪ್ತ ಲೋಹದ ಮೇಲೆರೆದ ಜಲಬಿಂದುವಿನ ಪರಿ

೫) ಸಿರಿ ಬಂದಡದು ನೆಳಲಂತೆ

೬) ಮೆಚ್ಚಿದಾತಗೆ ಮಸಣ ಲೇಸು

೭) ಹುಣ್ಣಲುಪ್ಪನು ತೋಕಿದಂತೆ

೮) ಹಳೆಯ ವಸ್ತ್ರವ ನರರು ಹರಿದಡೆ ಬಿಟ್ಟು ಹೊಸವಸ್ತ್ರವನು ಹೊರೆವಂತೆ ಇತ್ಯಾದಿ ಇತ್ಯಾದಿ

ಕಾವ್ಯದಲ್ಲಿ ಆಡುನುಡಿಗಳೂ ಬಹಳಷ್ಟು ಬಂದಿವೆ. ಉದಾಹರಣೆಗಾಗಿ ಒಂದೆರಡು - ಆರುವೆಯು, ಹಡಬಡ ಇತ್ಯಾದಿ.

ಹೀಗೆ ಸುಲಭಶೈಲಿಯಲ್ಲಿ ಆಧ್ಯಾತ್ಮಿಕ ವಿಷಯವನ್ನು ವಿವರಿಸುವಲ್ಲಿ ಅಧ್ಯಾತ್ಮ ರಾಮಾಯಣವು ಸಫಲತೆಯನ್ನು ಪಡೆದಿದೆ.

## ಅಧ್ಯಾತ್ಮ ರಾಮಾಯಣದ ಇತರ ಕೃತಿಗಳು

ನಾನು ಈ ಪುಸ್ತಕದ ಬರವಣಿಗೆಯಲ್ಲಿ ಇತರ ಅಧ್ಯಾತ್ಮ ರಾಮಾಯಣವನ್ನೂ ವಾಲ್ಮೀಕಿ ರಾಮಾಯಣವನ್ನೂ ಅವಲೋಕಿಸಬೇಕಾಯಿತು. ನನಗೆ ದೊರೆತ ಅಧ್ಯಾತ್ಮ ರಾಮಾಯಣದ ಕೃತಿಗಳು ಈ ಕೆಳಗಿನಂತೆ ಇವೆ.

೧) ಅಧ್ಯಾತ್ಮರಾಮಾಯಣ (ಸಂಸ್ಕೃತ) ಗೀತಾ ಪ್ರೆಸ್, ಗೋರಖಪೂರ ಇವರು ಅಧ್ಯಾತ್ಮ ರಾಮಾಯಣವನ್ನು ಟೀಕಾಸಹಿತ ಪ್ರಕಟಿಸಿದ್ದಾರೆ.

೨) ಅಧ್ಯಾತ್ಮ ಪ್ರಕಾಶ ಮಾಸಪತ್ರಿಕೆ, ಹೊಳೆನರಸೀಪುರ ಇವರು ಸಂಸ್ಕೃತ ಅಧ್ಯಾತ್ಮ ರಾಮಾಯಣವನ್ನು ಸಂಸ್ಕೃತ ಶ್ಲೋಕ ಹಾಗೂ ಕನ್ನಡ ಅರ್ಥ ಸಮೇತವಾಗಿ ಪ್ರಕಟಪಡಿಸಿರುತ್ತಾರೆ. ಇದರಲ್ಲಿ ಉತ್ತರ ರಾಮಾಯಣ ಇಲ್ಲ.

೩) ಇದೇ ಅಧ್ಯಾತ್ಮ ರಾಮಾಯಣವನ್ನು ಉತ್ತರ ಕನ್ನಡ ಜಿಲ್ಲೆ ಸಿರ್ಸಿ ತಾಲೂಕಿನಲ್ಲಿಯ "ಕೊಳಗಿಬೀಸ" ಗ್ರಾಮದಲ್ಲಿದ್ದ ಶ್ರೀ ಶಿವಾನಂದ ಯತಿವರರು ಸಂಸ್ಕೃತ ಶ್ಲೋಕ ಅದರ ಕೆಳಗೆ ಕನ್ನಡ ವಾರ್ಧಿಕ ಷಟ್ಪದಿಯಲ್ಲಿ ರಚಿಸಿರುತ್ತಾರೆ. ಪೂರ್ಣ ಅಧ್ಯಾತ್ಮರಾಮಾಯಣವನ್ನು ಉತ್ತರ ಕಾಂಡ ಸಹಿತ ಮೂರು ಭಾಗಗಳಲ್ಲಿ ಪ್ರಕಟಿಪಡಿಸಿರುತ್ತಾರೆ. ಮುದ್ರಿತವಾಗಿದೆ.

೪) ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನ ದಿ| ಶಂಭು ಶಾಸ್ತ್ರಿ ನಾಜಗಾರ ಇವರು ಕನ್ನಡ ಗದ್ಯದಲ್ಲಿ ಸರಳ ಶೈಲಿಯಲ್ಲಿ ಈ ರಾಮಾಯಣವನ್ನು ಬರೆದಿದ್ದಾರೆ. ಕೈಬರಹದ ಪ್ರತಿ. ಮುದ್ರಿತವಾಗಿಲ್ಲ.

ಹೀಗೆ ಹಲವಾರು ಅಧ್ಯಾತ್ಮ ರಾಮಾಯಣದ ಕೃತಿಗಳು ಇವೆ.

# ಉತ್ತರ ಕನ್ನಡ ಜಿಲ್ಲೆಯ ರಾಮಾಯಣದ ಕೃತಿಗಳು

ಇನ್ನು ಉತ್ತರ ಕನ್ನಡ ಜಿಲ್ಲೆಯಲಿಯೇ ರಾಮಾಯಣವನ್ನು ಬರೆದ ಕವಿಗಳು ಎಷ್ಟಿರಬಹುದು ಎಂಬ ಸಂಶಯ ಬಂದು ಆ ಬಗ್ಗೆ ಸಂಶೋಧನೆ ನಡೆಸಿದಾಗ ಈ ಕೆಳಗಿನ ವಿಷಯಗಳು ನನ್ನ ನದರಿಗೆ ಬಂದವು. ಅವನ್ನು ಇಲ್ಲಿ ಬರೆಯುತ್ತಿದ್ದೇನೆ.

ಕುಮಾರವ್ಯಾಸನು ತನ್ನ ಭಾರತದಲ್ಲಿ ಹೀಗೆ ಹೇಳಿದ್ದಾನೆ.

ತಿಣಿಕಿದನು ಫಣಿರಾಯ ರಾಮಾ । ಯಣದ ಕವಿಗಳ ಭಾರದಲಿ ತಿಂ ।
ಥಿಣಿಯ ರಘುವರ ಚರಿತದಲಿ ಕಾಲಿಡಲು ತೆರಹಿಲ್ಲ ।।

ಈ ಹಿನ್ನೆಲೆಯಲ್ಲಿ ವಿಚಾರವಮಾಡಿ ಸಂಶೋಧನೆ ನಡೆಸಿದಾಗ ರಾಮಾಯಣದ ಎಷ್ಟೋ ಗ್ರಂಥಗಳು ಬೆಳಕಿಗೆ ಬಂದಿಲ್ಲವೆನ್ನಬಹುದು. ಕಾಲರಾಯನ ಗರ್ಭದಲ್ಲಿ ಎಷ್ಟು ಅಭಗಿನೆಯೋ ಏನೋ ? ಉತ್ತರ ಕನ್ನಡ ಜಿಲ್ಲೆಯೂ ಇದಕ್ಕೆ ಹೊರತಾಗಿಲ್ಲ. ಇಲ್ಲಿಯೂ ಕೂಡ ಬೇರೆ ಬೇರೆ ಧಾಟಿಗಳಲ್ಲಿ, ಛಂದಸ್ಸುಗಳಲ್ಲಿ, ಗದ್ಯ ಪದ್ಯಗಳಲ್ಲಿ ಕೃತಿ ರಚನೆಯಾಗಿದ್ದನ್ನು ನಾವು ಮನಗಾಣಬಹುದು. ಅವುಗಳ ಸಂಕ್ಷಿಪ್ತ ವಿವರ.

೧ ವರದ ವಿಠ್ಠಲ ರಾಮಾಯಣ :– ಕವಿಯು ಈ ಕೃತಿಗೆ "ವಾಲಗಳ್ಳಿಯ ವರದ ವಿಠ್ಠಲ ಕರ್ತೃವಿಕೃತಿಗೆ" ಎಂದು ಹೇಳಿ ರಾಮಾಯಣವನ್ನು ಭಾಮಿನೀ ಷಟ್ಪದಿಯಲ್ಲಿ ಬರೆದಿದ್ದಾನೆ. ಸಂಧ್ಯಂತಗಳಲ್ಲಿ "ವಾಲ್ಮೀಕಿ ಮುನಿರಾಯ" ಎಂಬ ಅಂಕಿತ ಉಪಯೋಗಿಸಿರುತ್ತಾನೆ. ಇದು ಕೌಸಲ್ಯಾ ವಿವಾಹದಿಂದ ಪ್ರಾರಂಭವಾಗಿ ರಾಮ ಪಟ್ಟಾಭಿಷೇಕದಲ್ಲಿ ಕೊನೆಗೊಳ್ಳುತ್ತದೆ. ಇದನ್ನೇ ಕಾರಂತರು ಬತ್ತಲೇಶ್ವರ ರಚಿತ ಕೆಲವು ಸಂಧಿಗಳೊಂದಿಗೆ, ಕೆಲವು ಪದಗಳನ್ನೂ ಬಿಟ್ಟು "ಕೌಶಿಕ ರಾಮಾಯಣ" ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ.

೨ ಬತ್ತಲೇಶ್ವರ ರಾಮಾಯಣ :– ಹರೀತಕೀಪುರದ (ಹರೀಟಿ) ಗೋಪೀನಾಥಕವಿಯ ಆರಾಧ್ಯದೇವರು. ರಾಮಾಯಣದಲ್ಲಿ ಐರಾವಣನ ಕಾಳಗ, ರುಂಡಭೈರವನ ಕಾಳಗ ಇತ್ಯಾದಿಗಳನ್ನೂ ಸೇರಿಸಿದ್ದಾನೆ. ಇದನ್ನೂ ಅವನು ಬೇರಾವುದೋ ರಾಮಾಯಣದಿಂದ ಸಂಗ್ರಹಿಸಿರಬೇಕು.

ಇವು ಭಾಮಿನೀಷಟ್ಪದಿಯಲ್ಲಿವೆ. ನಿರ್ವಾಣ ನಾಯಕ, ಬತ್ತಲೇಶ್ವರ ಎಂಬ ಅಂಕಿತ ಬಳಸಿದ್ದಾನೆ.

೩ ಅಧ್ಯಾತ್ಮ ರಾಮಾಯಣ :- ಭಾಮಿನೀ ಷಟ್ಪದಿಯಲ್ಲಿದೆ. ೬೦ ಸಂಧಿಗಳಿದ್ದು ೨೫೦೦ ಪದ್ಯಗಳಿವೆ. ಕಥಾಭಾಗವು ಸಂಕ್ಷಿಪ್ತವಾಗಿದ್ದು ಸಂದರ್ಭ ದೊರೆತಲ್ಲೆಲ್ಲ ಅಧ್ಯಾತ್ಮ ವಿಷಯಕ್ಕೆ ಹೆಚ್ಚಿನ ಪುಷ್ಟಿ ಕೊಟ್ಟಿದ್ದಾನೆ. ಕಥಾಭಾಗವಲ್ಲಿ ವಾಲ್ಮೀಕಿ ರಾಮಾಯಣಕ್ಕಿಂತ ಸ್ವಲ್ಪ ಭಿನ್ನವಾಗಿದೆ. ಕವಿ " ನಿತ್ಯಾತ್ಮ ಲಕ್ಷ್ಮಿ ನೃಸಿಂಹ" ಎಂಬ ಅಂಕಿತ ಉಪಯೋಗಿಸಿದ್ದಾನೆ. ಭಾಷೆ ಸರಳ ಸುಲಭ ಸುಂದರವಾಗಿದೆ.

೪ ಅಧ್ಯಾತ್ಮ ರಾಮಾಯಣ ಉತ್ತರ ಕಾಂಡ :- ಭಾಮಿನೀ ಷಟ್ಪದೀ ಗ್ರಂಥ ಸಂಧಿ ೧೫ ಹಾಗೂ ಪದ ೬೫ ಇವೆ. ಇದರಲ್ಲಿ ರಾವಣಾದಿಗಳ ಹುಟ್ಟು, ಸೀತಾ ಜನನ, ವಾಲಿ ಸುಗ್ರೀವ ಹನುಮ ಜಾಂಬವ ಮೊದಲಾದವರ ಜನಪದ ವಿಚಾರವಿದೆ. ಕವಿ "ಕೇಶವ ಭದ್ರಾಕ್ಷರ" ಎಂಬ ಅಂಕಿತ ಬಳಸಿದ್ದಾನೆ. ಇನ್ನೂ ಮುದ್ರಿತವಾಗಿಲ್ಲ.

೫ ಉತ್ತರ ರಾಮಾಯಣ :- ಇದನ್ನು "ವಿದ್ಯಾಯೋಗಿ" ಎಂಬ ಕವಿ ರಚಿಸಿರುತ್ತಾನೆ. ಸಾಂಗತ್ಯ ಛಂದಸ್ಸಿನಲ್ಲಿದೆ. ೪೮ ಸಂಧಿಗಳಿದ್ದು ೨೫೧೦ ಪದಗಳಿವೆ. ಕಾವ್ಯದ ಶೈಲಿ ಸುಲಭ ಸರಳ ಹಾಗೂ ಹೃದಯಂಗಮವಾಗಿದೆ. ಇನ್ನೂ ಮುದ್ರಿತವಾಗಿಲ್ಲ.

೬ ದ್ವಿಪದಿ ರಾಮಾಯಣ :- ಇದರ ಕೆಲವು ತಾಳೆಗರಿಗಳು ಮಾತ್ರ ದೊರಕಿವೆ. ಬಾಡದ ಸುಬ್ರಾಯ ಹೆಗಡೆ ಮನೆಯಲ್ಲಿ ದೊರೆತಿದೆ. ಪದ್ಯಗಳು ಎರಡು ಸಾಲಿನವು. ಕವಿಯ ವಿಚಾರ ತಿಳಿದುಬಂದಿಲ್ಲ. ಅದರ ಒಂದು ಪದ್ಯ.

ರಾಮನಾಜ್ಞೆಯ ಹನುಮನಾಂತು ನಿಜಶಿರದೆ |
ಭೂಮಿಜೆಯ-ನರಸಲ್ಕೆ ಪೋದನವಸರದೆ ||

೭ ಗೋಕರ್ಣ ಪುರಾಣ :- ಇದನ್ನು ಬರೆದವನು ನಿರ್ವಾಣ ನಾಯಕ ಅಥವಾ ಬತ್ತಲೇಶ್ವರ. ಇದರಲ್ಲಿ ಸಂಧಿ ೩೯ ರಿಂದ ೪೮ ರ ವರೆಗಿನವು

ಗಳಲ್ಲಿ ರಾಮಾಯಣದ ಪೂರ್ಣ ಕಥೆ ಇದೆ. ಒಟ್ಟು ಹತ್ತು ಸಂಧಿಗಳಲ್ಲಿ ಮುಗಿಯುತ್ತದೆ. ಕೊನೆಯಲ್ಲಿ ಮೂಲಕಾಸುರನ ಕಾಳಗವೂ ಇದೆ.

೮ ಅಧ್ಯಾತ್ಮ ರಾಮಾಯಣ : ಸಂಸ್ಕೃತದಲ್ಲಿ ಇರುವ ಅಧ್ಯಾತ್ಮ ರಾಮಾಯಣವನ್ನು ಸಿರಸಿಯ ಕೊಳಗೀಬೀಸದ ಸಾಧು. ಗಳಾದ ಶ್ರೀ ಶಿವಾನಂದ ಯತಿವರರು ವಾರ್ಧಿಕ ಷಟ್ಪದಿಯಲ್ಲಿ ತನ್ನ ಆರಾಧ್ಯ ದೇವರಾದ ಮಾರುತಿಯನ್ನೂ ಸ್ಮರಿಸಿ ಈ ಕೃತಿ ರಚಿಸಿರುತ್ತಾರೆ. ಸಂಸ್ಕೃತ ಮೂಲ. ವಾರ್ಧಿಕ ಷಟ್ಪದಿ ಅನುವಾದ ಇವೆರಡೂ ಇವೆ. ಮೂರು ಭಾಗಗಳಲ್ಲಿ ಪ್ರಕಟವಾಗಿದೆ. ಸರಳ ಸುಲಭ ಶೈಲಿಯಲ್ಲಿ ಕಾವ್ಯದ ರಚನೆಯಿದೆ.

೯ ಅಧ್ಯಾತ್ಮ ರಾಮಾಯಣ :- ಇದನ್ನು ಗದ್ಯದಲ್ಲಿ ಹೊನ್ನಾವರ ತಾಲೂಕಿನ ನಾಜಗಾರ ಗ್ರಾಮದವರಾದ ದಿ| ಶಂಭುಶಾಸ್ತ್ರಿ ನಾಜಗಾರ ಇವರು ರಚಿಸಿರುತ್ತಾರೆ. ಮುದ್ರಿತವಾಗಿಲ್ಲ.

೧೦ ಪುಟ್ಟ ರಾಮಾಯಣ :- ಮಕ್ಕಳ ಬಗ್ಗಾಗಿ ಗದ್ಯದಲ್ಲಿ ರಚಿಸಿದ ಚಿಕ್ಕ ಗ್ರಂಥ. ರಾಮಾಯಣದ ಕಥೆಯನ್ನು ಸುಂದರ ಸರಳ ಶೈಲಿಯಲ್ಲಿ ರಚಿಸಲಾಗಿದೆ. ನಾನು ಚಿಕ್ಕವನಿದ್ದಾಗ ಈ ಗ್ರಂಥವನ್ನು ಪುನಃ ಪುನಃ ಓದುತ್ತಿದ್ದೆ. ಬಹುಶಃ ಇದನ್ನು ವೆ. ಪ. ಹೆಗಡೆ ಬಾಡ ಇಲ್ಲವೇ ಕೆ. ರಾ. ಪ. ಭಟ್ಟ ಬಾಡ ಇವರು ಬರೆದಿರಬೇಕು. ಎಂಬ ನೆನಪು.

೧೧ ಕನ್ನಡ ದ್ವಿಪದಿ ರಾಮಾಯಣ : ವಾಲ್ಮೀಕಿ ರಾಮಾಯಣವನ್ನು ಕನ್ನಡದ ದ್ವಿಪದಿ ಛಂದಸ್ಸಿನಲ್ಲಿ ಕಾರವಾರ ತಾಲೂಕಿನ ಚಂಡಿಯ ಗ್ರಾಮದ ದಿ|ರಘುನಾಥ ಶೇಣ್ವಿ ಎಂಬವರು ಬರೆದಿದ್ದಾರೆ. ಕೈಬರಹದ ಉದ್ಗ್ರಂಥ. ರಾಮಾಯಣ ಪೂರ್ಣವಾಗಿ ಇದೆ. ಇನ್ನೂ ಮುದ್ರಿತ-ವಾಗಿಲ್ಲ.

೧೨ ಪ್ರಾಕೃತ ರಾಮಾಯಣ :- ಸದ್ಯ ದೊರಕಿದ ತಾಳೆಗರಿ ಗ್ರಂಥ. ಹೊನ್ನಾವರ ತಾಲೂಕಿನ ಹಳದೀಪುರ ಅಗ್ರಹಾರದ ಸಭಾಹಿತರಲ್ಲಿ ದೊರೆತಿದೆ. ಇನ್ನೂ ಇದನ್ನು ಅವಲೋಕಿಸಿಲ್ಲ. ಅವಲೋಕನೆಗಾಗಿ ಇದೆ.

೧೩ ತುಲಸೀದಾಸ ರಾಮಾಯಣ :- ಇದನ್ನು ದಿ|| ಮದ್ಗುಣಿ ಶಂಭು ಭಟ್ಟ ಎಂಬವರು ಬರೆದಿದ್ದಾರೆ. ತುಲಸೀದಾಸ ರಾಮಾಯಣವನ್ನು ಕನ್ನಡ ಪದ್ಯದಲ್ಲಿ ರಚಿಸಿದ್ದಾರೆ. ಇವರು ಎಮ್. ಎಜಿ. ಆದವರು ಬರೋಡಾ ಸಂಸ್ಥಾನದಲ್ಲಿ ತೋಟಗಾರಿಕೆ ಇಲಾಖೆಯ ಮುಖ್ಯಸ್ಥ-ರಾಗಿದ್ದರು. ಇವರ ಊರು ಕುಮಟಾ ತಾಲೂಕಿನ ಮದ್ಗುಣಿ ಎಂಬ ಗ್ರಾಮ.

೧೪ ಹನುಮದ್ರಾಮಾಯಣ :- ಈ ಗ್ರಂಥವನ್ನು ಭಟಕಳ ತಾಲೂಕಿನ ಹಾಡುವಳ್ಳಿಯ ಸುಬ್ರಹ್ಮಣ್ಯ ಕವಿ ಎಂಬವನು ಬರೆದಿದ್ದಾನೆ. ಹಾಡು-ವಳ್ಳಿಗೆ ಸಂಗೀತಪುರ ಎಂಬ ಅಭಿಧಾನವಿತ್ತು. ಈಗ ಇದು ಹಾಳುಬಿದ್ದ ಹಳ್ಳಿಯಾಗಿದೆ. ರಾಜಧಾನಿ ಸ್ಥಳವಾಗಿತ್ತು.

ಇದಲ್ಲದೇ ರಾಮಚರಿತೆಗೆ ಸಂಬಂಧಪಟ್ಟಂತೆ ರಾಮನಿಗೆ ಆಧ್ಯಾತ್ಮಿಕ ವಿಷಯವನ್ನು ಬೋಧಿಸಿರುವ ಗ್ರಂಥಗಳೂ ಇವೆ.

೧೫ ವಾಸಿಷ್ಠ ಚರಿತೆ :- ಕವಿ ಇದನ್ನು ಗುರು ನಾರಾಯಣನ ವರದಿಂದ ರಚಿಸಿದೆ. ಎಂದಿದ್ದಾನೆ. ತನ್ನ ಹಿಂದಿನ ಗುರುಗಳಾದ ಆರಾಧ್ಯೇಂದ್ರರನ್ನು ಸ್ಮರಿಸಿದ್ದಾನೆ. ಇದು ಸಾಂಗತ್ಯದಲ್ಲಿದೆ. ೩೩ ಸಂಧಿಗಳಿದ್ದು ೧೮೦೧ ಪದ್ಯಗಳಿವೆ.

೧೬ ಯೋಗವಾಸಿಷ್ಠ :- ಭಾಮಿನೀ ಷಟ್ಪದಿಯಲ್ಲಿದೆ. ೫೧ ಸಂಧಿಗಳಿದ್ದು ೨೭೮೪ ಪದ್ಯಗಳಿವೆ. ನಿರ್ವಾಣನಾಯಕ ಎಂಬ ಅಂಕಿತ ಬಳಸಿದ್ದಾನೆ. ವೇದಾಂತದ ಸಾರಸರ್ವಸ್ವವನ್ನು ತಿಳಿಸುವ ಗ್ರಂಥ.

೧೭ ಜ್ಞಾನವಾಸಿಷ್ಠ :- ಇದನ್ನು ಸಿದ್ಧಯೋಗೀಂದ್ರ ಎಂಬ ಕವಿ ಭಾಮಿನೀ ಷಟ್ಪದಿಯಲ್ಲಿ ರಚಿಸಿದ್ದಾನೆ. ೯ ಸಂಧಿಗಳಿದ್ದು ೩೬೨ ಪದ್ಯಗಳಿವೆ. ಹರೀತಕೀಪುರದ (ಹರೀಟೆ) ಗೋಪೀನಾಥನನ್ನು ಸ್ಮರಿಸಿ ಕಾವ್ಯವನ್ನು ರಚಿಸಿದ್ದಾನೆ. ಶ್ರೀರಾಮಚಂದ್ರನಿಗೆ ವೇದಾಂತತತ್ವವನ್ನು ತಿಳಿಸುವ ಗ್ರಂಥ.

ಇದಲ್ಲದೇ ಹಲವಾರು ಯಕ್ಷಗಾನ ಕೃತಿಗಳೂ ಇವೆ. ಕೆರೆಮನೆ ಮಹಾಬಲ ಹೆಗಡೆಯವರು ಕೆಲವದರ ಹೆಸರು ಸೂಚಿಸಿದ್ದಾರೆ.

ರಾವಣೋದ್ಭವ, ಶತಮುಖ ರಾಮಾಯಣ, ಶ್ರೀ ರಾಮಪಟ್ಟಾಭಿಷೇಕ, ಪಂಚವಟಿ, ಅಂಗದ ಸಂಧಾನ, ವಾಲಿಸುಗ್ರೀವರ ಕಾಳಗ, ಐರಾವಣ ಮೈರಾವಣರ ಕಾಳಗ, ಸಂಪೂರ್ಣ ರಾಮಾಯಣ ಇತ್ಯಾದಿ

ಶ್ರೀ ತಿಮ್ಮಪ್ಪ ವೆಂಕಪ್ಪ ಹೆಗಡೆ ಜಾನಕೈ ಇವರು ಸಂಪೂರ್ಣ ರಾಮಾಯಣವನ್ನು ಯಕ್ಷಗಾನದಲ್ಲಿ ರಚಿಸಿದ್ದಾರೆ. ಇದರಂತೆ ಶ್ರೀ ಎಂ ಎ. ಹೆಗಡೆ ದಂಟಕಲ್ ಇವರು ಸೀತಾವಿಯೋಗವನ್ನು ಯಕ್ಷಗಾನದಲ್ಲಿ ರಚಿಸಿರುತ್ತಾರೆ.

ಇನ್ನು ಶ್ರೀ ರಾಮಚಂದ್ರನನ್ನು ಕುರಿತು ಎಷ್ಟೋ ಜನಪದ ಕಥೆಗಳೂ ಕೂಡ ಇವೆ ಡಾ| ಎಲ್. ಆರ್. ಹೆಗಡೆಯವರು 'ಜಾನಪದ ರಾಮಾಯಣ' ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ಹಲವಾರು ಕವಯಿತ್ರಿಯರೂ ರಾಮಕಥೆಯನ್ನು ಹಾಡುಗಳ ರೂಪದಲ್ಲಿ ರಚಿಸಿದ್ದಾರೆ.

ಇಷ್ಟೇ ಅಲ್ಲದೆ ಜೈನ ಕವಿಗಳಿಂದ ರಚಿಸಲ್ಪಟ್ಟ ಜೈನ ರಾಮಾಯಣವೂ ಇದೆ. ಅಭಿನವ ಪಂಪನಿಂದ ರಚಿತವಾದ ಪಂಪ ರಾಮಾಯಣವು ಭಲ್ಲಾತಕೀ ಪುರದ (ಗೇರಸೊಪ್ಪೆ) ಅರಸರ ಕಾಲದಲ್ಲಿ ರಚಿತವಾಗಿದೆ. ಸಾಳ್ವಕವಿ (ಉತ್ತರಕನ್ನಡ ಜಿಲ್ಲೆಯವ) ಯಿಂದ ರಚಿತವಾದ ರಾಮಾಯಣವೂ ಕೂಡ ಇದೆ.

ಇನ್ನೂ ಎಷ್ಟೋ ಕೃತಿಗಳು ಕಾಲರಾಯನ ಗರ್ಭದಲ್ಲಿ ಅಡಗಿವೆಯೋ ಏನೋ ! ಅವು ದೊರಕಿದಾಗಲೇ ಅವುಗಳ ಪರಿಚಯ ಸಾಧ್ಯ.

ಇನ್ನು ಕೊನೆಯದಾಗಿ ಹೇಳಬೇಕಾದರೆ ಇದರ ಪದ್ಯಗಳೆಲ್ಲ ಸರಳ ಸುಲಭ ಶೈಲಿಯಲ್ಲಿವೆ. ಆಧ್ಯಾತ್ಮಿಕ ತತ್ವವನ್ನು ವೇದಾಂತದ ವಿಚಾರವನ್ನು ಸರಳ ಸುಲಭ ಶೈಲಿಯಲ್ಲಿ ಸಾಮಾನ್ಯ ಜನರಿಗೂ ಸಂಸಾರಸ್ಥರಿಗೂ ಮನದಟ್ಟಾಗುವಂತೆ ವಿವರಿಸಲ್ಪಟ್ಟಿದೆ. ಜನಜೀವನದ ಚಿತ್ರಣವನ್ನು

ಸಾಂಸಾರಿಕ ಜೀವನದ ವಿವರವನ್ನು ಕೊಡುತ್ತ ಆ ಪರಮಾತ್ಮನ ಮಾಯೆ ಅಗಾಧವಾಗಿದೆ ಅರ್ಥಪೂರ್ಣವಾಗಿದೆ. ಎಂಬುದನ್ನು ಜನರಲ್ಲಿ ಬಿಂಬಿಸುತ್ತಾನೆ. "ಅಸಾರೇ ಖಲು ಸಂಸಾರೇ ಕಿಮಮೃತಮಯಃ ಕಿಮು ವಿಷಮಯಃ" ಎಂದು ತಿಳಿಯುವಂತೆ ವಿವರಣೆ ನೀಡಿರುತ್ತಾನೆ. ಅಂತೂ ಈ ರಾಮಾಯಣ ಸರಳ ಸುಂದರ ರಸವತ್ತಾದ ಕಾವ್ಯ ಎಂದು ಹೇಳಲೇಬೇಕಾಗಿದೆ.

## ಕೃತಜ್ಞತೆಗಳು :

ಈ ಪುಸ್ತಕವು ಕುಮಟಾ ತಾಲೂಕಿನ ಕಡೇಕೋಡಿಯ ದಿ| ವೆಂಕಪ್ಪಾ ಪರಮಯ್ಯ ಹೆಗಡೆ ಇವರ ಮನೆಯಲ್ಲಿ ದೊರೆಯಿತು. ಅವರ ಸಹೋದರರಾದ ಧಾರೇಶ್ವರದಲ್ಲಿರುವ ಚಿದಂಬರ ಹೆಗಡೆಯವರು ವೆಂಕಪ್ಪ ಹೆಗಡೆಯವರ ಮಗನಾದ ಪರಮಯ್ಯ ಹೆಗಡೆಯಿಂದ ದೊರಕಿಸಿಕೊಟ್ಟರು. ಅಲ್ಲಿಂದ ತಂದ ಐದಾರು ತಾಳೆಗರಿ ಗ್ರಂಥಗಳಲ್ಲಿ ಇದೂ ಒಂದು. ಉತ್ತರ ರಾಮಾಯಣ ಸಹಿತವಾಗಿರುವ ಗ್ರಂಥ ಇದು.

ಇದರ ಇನ್ನೊಂದು ಪ್ರತಿ ಎಲ್ಲೂ ದೊರೆಯಲಿಲ್ಲ. ಕನ್ನಡ ಸಂಶೋಧನ ಸಂಸ್ಥೆ K. R. I.) ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಮೈಸೂರ ವಿಶ್ವವಿದ್ಯಾಲಯ, ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಮೊದಲಾದ ಕಡೆಗಳಲ್ಲೆಲ್ಲ ಹುಡುಕಿದರೂ ಇನ್ನೊಂದು ಪ್ರತಿ ದೊರೆಯಲಿಲ್ಲ. ಕಾರಣ ಒಂದೇ ಒಂದು ಪ್ರತಿಯಿಂದ ಈ ಗ್ರಂಥ ಸಿದ್ಧಪಡಿಸಲಾಗಿದೆ. ತಪ್ಪುಗಳು ಬಹಳ ಕಡಿಮೆ ಇದ್ದುದರಿಂದ ಸಂಪಾದನೆ ಮಾಡಲು ಕಷ್ಟವಾಗಲಿಲ್ಲ. ಕೆಲವು ಕಡೆಗಳಲ್ಲಿ ಬಿಟ್ಟು ಹೋದೆಡೆಗಳಲ್ಲಿ ಸಾಧ್ಯವಾದ ಮಟ್ಟಿಗೆ ಪೂರ್ಣ ಗೊಳಿಸಿದ್ದೇನೆ. ಸಾಧ್ಯವಾಗದೇ ಇದ್ದಲ್ಲಿ ಹಾಗೆಯೇ ಬಿಟ್ಟಿರುತ್ತೇನೆ. ಇನ್ನೊಂದು ಪ್ರತಿ ದೊರಕಿದಾಗಲೇ ಅದನ್ನು ಪೂರ್ಣಗೊಳಿಸುವದು ಸಾಧ್ಯ ಎಂದು ಅನಿಸುತ್ತದೆ. ಈ ಪುಸ್ತಕವನ್ನು ಕೊಟ್ಟು ಸಹಕರಿಸಿದ ಶ್ರೀ. ಪರಮಯ್ಯ ಹೆಗಡೆಯವರಿಗೆ ನನ್ನ ಅನಂತ ಕೃತಜ್ಞತೆಗಳು.

ಈ ಪುಸ್ತಕವನ್ನು ಮೊಟ್ಟ ಮೊದಲು ಶ್ರೀ ಬಿಟಗೇರಿ ಕೃಷ್ಣ ಶರ್ಮ ರಿಗೆ ತೋರಿಸಿದೆ. ಅದರಲ್ಲಿಯ ೫-೬ ಅಧ್ಯಾಯಗಳನ್ನು ಅವರು ಓದಿಸಿ ಕೇಳಿದರು. ಈ ಕಾವ್ಯ ಸರಸವಾದ ಸುಂದರ ಪದ್ಯಗಳಲ್ಲಿ ಹೆಣೆಯಲ್ಪಟ್ಟಿದೆ. ಅಧ್ಯಾತ್ಮಿಕ ವಿಷಯವನ್ನತೂ ಅತ್ಯಂತ ಸುಲಭ ಪದ್ಯಗಳಲ್ಲಿ ರಚಿಸಲಾಗಿದೆ. ಎಂದು ಅಭಿಪ್ರಾಯಪಟ್ಟರು. ಅವಶ್ಯವಾಗಿ ಮುದ್ರಣವಾಗಲೇಬೇಕಾದ ಗ್ರಂಥ ಮುದ್ರಿಸು ಎಂದು ಆಶೀರ್ವದಿಸಿದರು. ಅವರ ಆಶೀರ್ವಾದದ ಫಲ ಈಗ ಕಾಣುತ್ತಿದ್ದೇವೆ.

ಈ ಪುಸ್ತಕದ ಮುದ್ರಣದ ಕಾರ್ಯಕ್ಕೆ ತಿರುಮಲ ತಿರುಪತಿ ದೇವ. ಸ್ಥಾನದವರು ೧೦,೦೦೦/ ರೂ ಧನಸಹಾಯ ಮಾಡಿದ್ದಾರೆ. ಈ ಹಿಂದಿನ ಕೆಲವು ಪ್ರಕಟನೆಗಳಿಗೂ ಧನಸಹಾಯ ಮಾಡಿದ್ದಾರೆ. ಅವರ ಪ್ರೋತ್ಸಾಹವೇ ಪುಸ್ತಕದ ಮುದ್ರಣಕ್ಕೆ ಕಾರಣ ಎಂದರೆ ತಪ್ಪಾಗಲಾರದು. ಅವರಿಗೆ ನನ್ನ ಅನಂತ ಕೃತಜ್ಞತೆಗಳು. ಇದಲ್ಲದೇ ಸಿರ್ಸಿಯ ತೋಟಗಾರ್ಸ ಸೊಸ್ಯಾಟಿಯು ಮುಖ್ಯಸ್ಥರಾದ ಶ್ರೀ ಶ್ರೀಪಾದ ಹೆಗಡೆ ಕಡವೆ ಹಾಗೂ ಶ್ರೀ ಡಿ. ಡಿ.- ವಿಶ್ವಾಮಿತ್ರ ಇವರು ನನ್ನ ಈ ಸಾಹಸದ ಕೆಲಸವನ್ನ ಮೆಚ್ಚಿ ಸಂತೋಷಿಸಿ ತಮ್ಮ ಸೊಸ್ಯಾಟಿಯು ವತಿಯಿಂದ ಮುದ್ರಣಕ್ಕಾಗಿ ರೂ ೫೦೦೦/-ವನ್ನ ಉದಾರ ದೇಣಿಗೆಯಾಗಿ ನೀಡಿ ಪ್ರೋತ್ಸಾಹಿಸಿರುತ್ತಾರೆ. ಶ್ರೀ ಶ್ರೀಪಾದ ಹೆಗಡೆ ಕಡವೆಯವರಿಗೂ ಶ್ರೀ ಡಿ. ಡಿ. ವಿಶ್ವಾಮಿತ್ರ ಹಾಗೂ ಸೊಸ್ಯಾಟಿಯ ಸದಸ್ಯರೆಲ್ಲರಿಗೂ ನನ್ನ ಅನಂತ ಕೃತಜ್ಞತೆಗಳು. ಇದಲ್ಲದೇ ನನ್ನ ಹೆಸರನ್ನು ಕೇಳಿದ ಹಾಗೂ ತಾಳೆಗರಿ ಕೃತಿಗಳನ್ನು ಸಂಗ್ರಹಿಸಿ ಪ್ರಕಟಿಸುತ್ತಿರುವ ಕಾರ್ಯ ಮಾಡುವ ನನ್ನನ್ನು ನೆನಪಿಸಿಕೊಂಡು ಶ್ರೀ ಶಿವಾ ಗಣಪತಿ ಹೆಗಡೆ ಶಮಟೆ ಕುಮಟಾ ಇವರು ಈ ಕಾರ್ಯಕ್ಕೆ ಪ್ರೋತ್ಸಾಹರೂಪವಾಗಿ ರೂ. ೨೫೧=೦೦ ನ್ನು ಉದಾರ ದೇಣಿಗೆ ನೀಡಿ ಪ್ರೋತ್ಸಾಹಿಸಿದ್ದಾರೆ. ಇವರಿಗೂ ನನ್ನ ಅನಂತ ಕೃತಜ್ಞತೆಗಳು.

ಇನ್ನು ಈ ಪುಸ್ತಕದ ಅಂದವನ್ನು ಹೆಚ್ಚಿಸುವದಕ್ಕಾಗಿ ಫೋಟೋ- ಗಳನ್ನು ಸೇರಿಸಿದ್ದೇನೆ. ಆ ಫೋಟೋಗಳೆಲ್ಲ ಗೀತಾ ಪ್ರೆಸ್ ಗೋರಖಪುರದಲ್ಲಿ ಮುದ್ರಿತವಾದ ರಾಮಾಯಣದೊಳಗಿಂದ ತೆಗೆದುಕೊಂಡವುಗಳಾಗಿವೆ.

ಗೀತಾ ಪ್ರೆಸ್ಸಿನ ಮುಖ್ಯಸ್ಥರಿಗೆ ನನ್ನ ವಂದನೆಗಳು ಹಾಗೂ ಕೃತಜ್ಞತೆಗಳು. ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ ಇವರ ಅಧ್ಯಾತ್ಮ ರಾಮಾಯಣದೊಳಗಿಂದಲೂ ಫೋಟೋಗಳನ್ನು ಉಪಯೋಗಿಸಲಾಗಿದೆ. ಅವರಿಗೂ ನನ್ನ ಕೃತಜ್ಞತೆಗಳು.

ಈ ಪುಸ್ತಕಕ್ಕೆ ಮುನ್ನುಡಿಯನ್ನೂ ದಯಪಾಲಿಸಬೇಕು ಎಂದು ಕೇಳಿಕೊಂಡಾಗ ಅಧ್ಯಾತ್ಮ ಪ್ರಕಾಶ ಪತ್ರಿಕೆಯ ಸಂಪಾದಕರಾದ ಶ್ರೀ ಎಚ್. ಎಸ್. ಲಕ್ಷ್ಮೀನರಸಿಂಹ ಮೂರ್ತಿಯವರು ಉದಾರ ಮನದಿಂದ ಹಾಗೂ ಉತ್ಸಾಹದಿಂದ ಮುನ್ನುಡಿಯನ್ನು ದಯಪಾಲಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು ಸಲ್ಲಲೇಬೇಕು.

ಈ ರಾಮಾಯಣವು ಬಹಳ ವಿಸ್ತಾರವಾಗಿರುವದರಿಂದ ಇದನ್ನು ಭಾಗಭಾಗವಾಗಿ ಮುದ್ರಿಸಬೇಕೆಂದು ನಿಶ್ಚಯಿಸಿ ಈಗ ಬಾಲಕಾಂಡ ಅಯೋಧ್ಯಾಕಾಂಡಗಳಿಂದ ಕೂಡಿದ ಈ ಮೊದಲನೆಯ ಭಾಗವನ್ನು ಪ್ರಕಟ ಪಡಿಸಲಾಗಿದೆ. ಹಂತಹಂತವಾಗಿ ಉಳಿದ ಭಾಗಗಳನ್ನೂ ಪ್ರಕಟಿಸುವ ಹಂಬಲವಿಟ್ಟುಕೊಂಡಿರುತ್ತೇನೆ.

ಪ್ರಕಟನೆಯ ಭಾರಹೊತ್ತ "ಕನ್ನಡ ಕರಾವಳಿ ಗ್ರಂಥಪ್ರಕಾಶನ ಹೆಗಡೆ" ಇವರಿಗೂ ಇದನ್ನು ಅಲ್ಪಕಾಲದಲ್ಲಿಯೇ ಸುಂದರವಾಗಿ ಮುದ್ರಿಸಿ-ಕೊಟ್ಟ ಶ್ರೀ ಕೃಷ್ಣ ಮುದ್ರಣಾಲಯ, ಹೆಗಡೆ ಇದರ ಕಾರ್ಯಕರ್ತರಿಗೂ ಕೆಲಸಗಾರರಿಗೂ ನನ್ನ ಕೃತಜ್ಞತೆಗಳು.

ಓದುಗರಾದ ತಾವು ಈ ಹಿಂದಿನ ಕೃತಿಗಳನ್ನು ಆದರದಿಂದ ಕೊಂಡು ಪ್ರೋತ್ಸಾಹಿಸಿದಂತೆ ಈ ಸುಂದರ ಬೃಹತ್ ಕಾವ್ಯವೆನಿಸಿದ ಈ ಪುರಾಣ-ವನ್ನು ಸಾನಂದದಿಂದ ಕೊಂಡುಕೊಳ್ಳಬೇಕೆಂದೂ. ನನ್ನನ್ನು ಕೃತಾರ್ಥ ನನ್ನಾಗಿ ಮಾಡಬೇಕೆಂದೂ, ಈ ಮೂಲಕ ಕೇಳಿಕೊಳ್ಳುತ್ತೇನೆ. ಹಾಗೂ

ಇದರ ಮುಂದಿನ ಭಾಗಗಳ ಪ್ರಕಟನೆಗೆ ಉದಾರ ಹಸ್ತದಿಂದ ಧನಸಹಾಯ ನೀಡಿ ಪ್ರೋತ್ಸಾಹಿಸಬೇಕೆಂದೂ ಕೇಳಿಕೊಂಡು ನನ್ನ ಈ ಸವಿನಯ ಮಾತನ್ನು ಪೂರ್ಣಗೊಳಿಸುತ್ತೇನೆ.

"ಭದ್ರ ಶುಭಂ ಮಂಗಳಂ"

ಎನ್. ಕೆ. ಹೆಗಡೆ
ಸಂಪಾದಕರು

—೦—

# ಮುನ್ನುಡಿ

ಶ್ರೀ ಎನ್. ಕೆ. ಹೆಗಡೆಯವರು ತಾಳೆಗರಿ ಗ್ರಂಥಗಳ ಸಂಶೋಧಕರಾಗಿ ಅನೇಕ ಪ್ರಾಚೀನ ಕನ್ನಡ ಕಾವ್ಯಗಳನ್ನು ಸಂಪಾದಿಸಿ ಈಗಾಗಲೆ " ಕರಾವಳಿ ಗ್ರಂಥಮಾಲೆ " ಯಲ್ಲಿ ಪ್ರಕಾಶಗೊಳಿಸಿರುತ್ತಾರೆ. ಈಗ ಅವರು ಕೈಗೊಂಡಿರುವ ಸಂಶೋಧನ ಹಾಗೂ ಪ್ರಕಟನ ಕಾರ್ಯದಲ್ಲಿ " ಅಧ್ಯಾತ್ಮ ರಾಮಾಯಣ " ವು ಅಮೂಲ್ಯವಾದ ಪುಸ್ತಕವಾಗಿದೆ. ಕನ್ನಡ ಸಾಹಿತ್ಯದಲ್ಲಿ ತೊರವೆ ರಾಮಾಯಣವನ್ನು ಬಿಟ್ಟರೆ ಅಧ್ಯಾತ್ಮ ವಿಚಾರ ಪ್ರಧಾನವಾದ ಬೇರೆಯ ಯಾವ ಕಾವ್ಯ ರಾಮಾಯಣವೂ ಉಪಲಬ್ಧವಾದಂತೆ ಕಂಡುಬಂದಿಲ್ಲ. ಆದರೆ ಶ್ರೀ ಹೆಗಡೆಯವರು ಆಳವಾದ ಸಂಶೋಧನೆಯ ಫಲವಾಗಿ ತಾಳೆಗರಿಗಳಲ್ಲಿ ಅಡಗಿದ್ದ ಈ ಅಧ್ಯಾತ್ಮ ರಾಮಾಯಣವು ಪ್ರಕಾಶಗೊಳ್ಳುವಂತಾದುದು ಕನ್ನಡಿಗರ ಸೌಭಾಗ್ಯವೆಂದೇ ಹೇಳಬೇಕಾಗಿದೆ.

ಅಧ್ಯಾತ್ಮ ರಾಮಾಯಣವು ಮೂಲತಃ ಸಂಸ್ಕೃತ ಭಾಷೆಯಲ್ಲಿದೆ. ಇದು ವಿಶ್ವಾಮಿತ್ರಪ್ರೋಕ್ತವೆಂದು ಬಲ್ಲವರು ಭಾವಿಸುತ್ತಾರೆ. ಇದರ ಕರ್ತೃ ಯಾರೆಂಬುದು ಸರಿಯಾಗಿ ತಿಳಿದಿಲ್ಲ. ಇದರ ಕಾವ್ಯಭಾಷೆ, ಸೌಂದರ್ಯ, ಅಧ್ಯಾತ್ಮೋಪದೇಶಗಳ ವಿವರ, ಕಥಾಪ್ರಸಂಗ ಎಲ್ಲವೂ ನವೀನವಾಗಿವೆ. ಮೂರುಸಾವಿರಕ್ಕೂ ಹೆಚ್ಚಿನ ಬಗೆಬಗೆಯ ವೃತ್ತಗಳ ಶ್ಲೋಕಗಳಿಂದ

ಕೂಡಿದ ಈ ಗ್ರಂಥವು ಪಾರಾಯಣ, ಪ್ರವಚನಗಳಿಗೆ ತಕ್ಕದ್ದಾಗಿದೆ. ಇದನ್ನು ಸಂಪೂರ್ಣವಾಗಿ ಕನ್ನಡಾನುವಾದ ಸಮೇತವಾಗಿ ಸಂಪಾದಿಸಿ 1964 ರಲ್ಲಿ ನಾನು ಅಧ್ಯಾತ್ಮ ಪ್ರಕಾಶ ಕಾರ್ಯಾಲಯದ ಮೂಲಕ ಪ್ರಕಟಿಸಿರುತ್ತೇನೆ. ಇದರ ಪ್ರಕಟನೆ ಕಾಲಕ್ಕೆ ನಾನು ವ್ಯಾಸಂಗ ಮಾಡುವ ಸಂದರ್ಭದಲ್ಲಿ ಕಂಡುಬಂದ ಕೆಲವು ವೇದಾಂತ ಪ್ರಕ್ರಿಯೆಗಳ ವಿಷಯವಾಗಿಯೂ ಕಥಾ ಸರಣಿಯ ವಿಚಾರವಾಗಿಯೂ ಸಂಗ್ರಹಿಸಿದ ಅಭಿಪ್ರಾಯಗಳನ್ನು ಪೀಠಿಕೆ-ಯಲ್ಲಿ ಪ್ರಸ್ತಾಪಿಸಿರುತ್ತೇನೆ. ಮುಖ್ಯವಾಗಿ ಈ ಗ್ರಂಥದಲ್ಲಿ ಕಂಡುಬರುವ ಅಧ್ಯಾತ್ಮೋಪದೇಶಗಳಲ್ಲಿ ಶ್ರೀ ಶಂಕರಾಚಾರ್ಯರ ಕಾಲದಿಂದ ಈಚಿನ ವ್ಯಾಖ್ಯಾನಕಾರರುಗಳ ಪ್ರಕ್ರಿಯೆಗಳೂ ಪ್ರತಿಪಾದನಸರಣಿಯೂ ಮಿಳಿತ-ವಾಗಿವೆ. ಆದ್ದರಿಂದ ಈ ಗ್ರಂಥವು ಶ್ರೀ ಶಂಕರಾಚಾರ್ಯರ ಕಾಲಕ್ಕೆ ಇತ್ತೋ ಇಲ್ಲವೋ - ಎಂಬ ಸಂದೇಹವುಂಟಾಗುತ್ತದೆ. ಆಚಾರ್ಯರ ಪ್ರಸ್ಥಾನತ್ರಯ ಭಾಷ್ಯಗಳಲ್ಲಿ ಎಲ್ಲಿಯೂ ಅಧ್ಯಾತ್ಮ ರಾಮಾಯಣ, ಶ್ರೀಮದ್ಭಾಗವತ, ಯೋಗವಾಸಿಷ್ಠ - ಈ ಗ್ರಂಥಗಳ ಪರಾಮರ್ಶೆಗಳಾಗಲಿ, ಪ್ರಮಾಣವಾಕ್ಯ-ಗಳ ಉದಾಹರಣೆಗಳಾಗಲಿ ಕಂಡುಬರುವದಿಲ್ಲ. ಈ ಗ್ರಂಥತ್ರಯಗಳು ತಾತ್ಪ-ರ್ಯದಿಂದ ಅದ್ವೈತ ಪ್ರಕ್ರಿಯೆಯನ್ನೇ ಪ್ರತಿಪಾದಿಸುತ್ತವೆಯಾದರೂ ಅದ್ವೈತಾಚಾರ್ಯರಾದ ಶ್ರೀ ಶಂಕರರು ಇವುಗಳನ್ನೇಕೆ ಪರಾಮರ್ಶಿಸಿಲ್ಲ-ಎಂಬುದು ಗೂಢವಾಗಿಯೇ ಉಳಿದಿದೆ. ಆದರೂ ಅಧ್ಯಾತ್ಮರಾಮಾಯಣವು ಹೇಗೆ ಶ್ರೀಮದ್ಭಾಗವತವು ಕೃಷ್ಣನನ್ನು ಭಗವಂತನನ್ನಾಗಿ ಭಾವಿಸಿ-ಅವನ ಗುಣಕರ್ಮಲೀಲೆಗಳೊಡನೆ-ತತ್ತ್ವಾಮೃತವನ್ನು ಜಗತ್ತಿಗೆ ಧಾರೆ-ಯೆರೆದಿದೆಯೋ ಹಾಗೆ ಶ್ರೀರಾಮನನ್ನು ಇಲ್ಲಿ ಭಗವಂತನನ್ನಾಗಿ ಭಾವಿಸಿ ರಾಮತತ್ತ್ವವೇ ಪರಬ್ರಹ್ಮವೆಂದು ಇಲ್ಲಿ ಪ್ರತಿಪಾದಿಸಲಾಗಿದೆ. ಮೋಕ್ಷಕ್ಕೆ ಭಕ್ತಿಯೇ ಪರಮಸಾಧನವೆಂದೂ ಒತ್ತಿ ಹೇಳಿದೆ.

ಪ್ರಕೃತ ಭಾಮಿನೀಷಟ್ಪದಿಯಲ್ಲಿ ರಚಿತವಾಗಿರುವ ಈ ಅಧ್ಯಾತ್ಮ ರಾಮಾಯಣವೂ ಸಂಪೂರ್ಣ ಏಳು ಕಾಂಡಗಳಿಂದ ಕೂಡಿದ್ದು ಸಂಸ್ಕೃತ ಗ್ರಂಥದ ಛಾಯಾನುವಾದದಂತೆಯೇ ಇದೆ. ಇದರ ಕರ್ತೃವೂ ಯಾರೆಂಬುದು ತಿಳಿದಿಲ್ಲ. ಈಗ ಪ್ರಕಟವಾಗುತ್ತಿರುವ ಮೊದಲನೆಯ ಭಾಗದಲ್ಲಿ ಬಾಲಕಾಂಡ

ಅಯೋಧ್ಯಾಕಾಂಡಗಳು ಅಡಕವಾಗಿವೆ. ಎರಡು ಕಾಂಡಗಳಿಂದ ಹತ್ತೊಂಭತ್ತು ಸಂಧಿಗಳೂ ೮೭೨ ಪದ್ಯಗಳೂ ಇವೆ. ಪದ್ಯಗಳು ಹೇಗೆ ಸಂಸ್ಕೃತ ಮೂಲ-ವನ್ನೇ ಪ್ರತಿಬಿಂಬಿಸುತ್ತವೆ. ಎಂಬುದನ್ನು ಈ ಕೆಳಗಿನ ಉದಾಹರಣೆಯಿಂದ ತಿಳಿಯಬಹುದು. ಈ ಶ್ಲೋಕವನ್ನು ಬಾಲಕಾಂಡದ ಅಹಲ್ಯಾಸ್ತುತಿಯಿಂದ ಆರಿಸಲಾಗಿದೆ.

( ಸಂಸ್ಕೃತಮೂಲ )

ಭವಭಯಹರಮೇಕಂ ಭಾನುಕೋಟಿಪ್ರಕಾಶಂ
ಕರಧೃತಶರಚಾಪಂ ಕಾಲಮೇಘಾವಭಾಸಮ್ ।
ಕನಕರುಚಿರವಸ್ತ್ರಂ ರತ್ನವತ್ಕುಂಡಲಾಢ್ಯಂ
ಕಮಲವಿಶದನೇತ್ರಂ ಸಾನುಜಂ ರಾಮಮೀಡೇ ॥

( ಕನ್ನಡಪದ್ಯ )

ಸಕಲಭಯಹರ ಭಾನುಕೋಟಿ
ಪ್ರಕರತೇಜದ ಚಾಪಶರ ಸಾ
ಯಕದ ಹಸ್ತದ ಕಾಳಮೇಘನಿಭಾಂಗ ಕಾಂತಿಗಳ ।
ವಿಕಸಿತಾನನದರಳುಗಂಗಳ
ಮಕರಕುಂಡಲ ಕನಕವಸನದ
ಯುಕುತ ಸಾನುಜ ರಾಮಚಂದ್ರನೆ ತನಗೆ ಗತಿಯೆಂದು ॥

ಶ್ರೀ ಹೆಗಡೆಯವರು ಈ ಗ್ರಂಥವನ್ನು ನಾಲ್ಕು ಭಾಗಗಳಲ್ಲಿ ಹೊರ ತರಲು ಉದ್ದೇಶಿಸಿ ಈಗ ಮೊದಲನೆಯ ಭಾಗವನ್ನು ಪ್ರಕಟಿಸಿರುತ್ತಾರೆ. ಶ್ರೀರಾಮಚಂದ್ರನ ಕೃಪೆಯಿಂದ ಇವರ ಪ್ರಯತ್ನವು ಪೂರ್ಣವಾಗಿ ನೆರವೇರಿ ಇಡಿಯ ಗ್ರಂಥವು ಪ್ರಕಾಶಿತವಾಗಲೆಂದೂ ಸಂಶೋಧಕರಿಗೆ ಸಕಲವಿಧವಾದ ಶ್ರೇಯಸ್ಸೂ ಲಭಿಸಲೆಂದೂ ನಾನು ಪ್ರಾರ್ಥಿಸುವೆನು.

ಹೊಳೆನರಸೀಪುರ — ಇತಿ

ತಾ : 25-5-1990 — H. S. ಲಕ್ಷ್ಮೀನರಸಿಂಹಮೂರ್ತಿ





# ಅಧ್ಯಾತ್ಮ ರಾಮಾಯಣ

## ಬಾಲಕಾಂಡ



ಆಲೋಕ್ಯ ಯಸ್ಯಾತಿಲಲಾಮಲೀಲಾಂ ಸದ್ಭಾಗ್ಯಭಾಜೌ ಪಿತರೌ ಕೃತಾರ್ಥೌ
ತಮರ್ಭಕಂ ದರ್ಪಕದರ್ಪಚೌರಂ ಶ್ರೀಜಾನಕೀಜೀವನಮಾನತೋಽಸ್ಮಿ ||

# ॥ ಶ್ರೀ ರಾಮಚಂದ್ರಧ್ಯಾನಮ್ ॥

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥೧॥

ವೈದೇಹೀ ಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಮ್ ।
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ ॥೨॥

ವಾಮೇ ಭೂಮಿಸುತಾ ಪುರಶ್ಚ ಹನುಮಾನ್ ಪಶ್ಚಾತ್ ಸುಮಿತ್ರಾಸುತಃ
ಶತ್ರುಘ್ನೋ ಭರತಶ್ಚ ವಾಮದಲಯೋರ್ವಾಯ್ವಾದಿಕೋಣೇಷು ಚ ।
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್
ಮಧ್ಯೇ ನೀಲಸರೋಜಕೋಮಲರುಚಿಂ ರಾಮಂ ಭಜೇ ಶ್ಯಾಮಲಮ್ ॥೩॥

ರಾಮಂ ರಾಮಾನುಜಂ ಸೀತಾಂ ಭರತಂ ಭರತಾನುಜಮ್
ಸುಗ್ರೀವಂ ವಾಯುಸೂನುಂ ಚ ಪ್ರಣಮಾಮಿ ಪುನಃ ಪುನಃ ॥೪॥

ನಮೋಽಸ್ತು ರಾಮಾಯ ಸ ಲಕ್ಷ್ಮಣಾಯ
ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ ।
ನಮೋಽಸ್ತು ರುದ್ರೇಂದ್ರ ಯಮಾನಿಲೇಭ್ಯೋ
ನಮೋಽಸ್ತು ಚಂದ್ರಾರ್ಕಮರುದ್ಗಣೇಭ್ಯಃ ॥೫॥

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ ।
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಮ್ ॥೬॥

ವಾಲ್ಮೀಕಿಗಿರಿಸಂಭೂತಾ ರಾಮಸಾಗರಗಾಮಿನೀ ।
ಪುನಾತು ಭುವನಂ ಪುಣ್ಯಾ ರಾಮಾಯಣ ಮಹಾನದೀ ॥೭॥

ಶ್ಲೋಕಸಾರಸಮಾಕೀರ್ಣಂ ಸರ್ಗಕಲ್ಲೋಲಸಂಕುಲಮ್ ।
ಕಾಂಡಗ್ರಾಹಮಹಾಮೀನಂ ವಂದೇ ರಾಮಾಯಣಾರ್ಣವಮ್ ॥೮॥



|| ಸ್ವಸ್ತಿ || ಶ್ರೀ ಗುರುಗಣೇಶಾಯ ನಮಃ || ಶುಭಮಸ್ತು ||
|| ನಿರ್ವಿಘ್ನಮಸ್ತು || ಶ್ರೀ ಗೋಪಾಲಕೃಷ್ಣಾಯ ನಮಃ ||
|| ಶ್ರೀ ರಾಮಚಂದ್ರಾಯ ನಮಃ ||

# ಅಧ್ಯಾತ್ಮ ರಾಮಾಯಣ



## ಬಾಲಕಾಂಡ

### ಮೊದಲನೆಯ ಸಂಧಿ

**ಮಹೇಶ್ವರನು ಪಾರ್ವತಿಗೆ ರಾಮತತ್ತ್ವವನ್ನು ಕರುಣಿಸಿದ್ದು**

ಸೂಚನೆ || ಶ್ರೀ ಮಹೇಶ್ವರನೊಲಿದು ಕೇಳಿ
ದ್ದಾರ್ಗೆ ಮಹಾಪಾರ್ವತಿಗೆ ಕರುಣದಿ
ರಾಮತತ್ತ್ವವ ಲೋಕಹಿತಕರವೆಂದು ಕರುಣಿಸಿದ ||

ಪದ || ಶ್ರೀವರನು ಶಾಶ್ವತನಖಿಳ ವೇ
ದಾವಳೀ ಸಂಸ್ತುತ್ಯನಮಿತ ಗು
ಣಾವಲಂಬನನಂಬುಜೋದ್ಭವ ಮುಖ್ಯ ಸುರವಂದ್ಯ ||
ದೇವ ದೇವನಶೇಷ ಧರಣೀ
ದೇವ ಗೋದ್ವಿಜ ರಕ್ಷಣಾರ್ಥ ಕೃ
ತಾವತಾರನು ಮಾಳ್ಕೆ ಯೋಗಕ್ಷೇಮವನು ನಮಗೆ || ೧

ಶ್ರೀಪಾದದ್ವಯನಂತ ಸುಖರಸ
ದಾ ಮಹೋದಧಿ ಪೂರ್ಣಶಶಿ ನಿ
ಸ್ಸೀಮ ನಿರವಧಿ ನಿರ್ವಿಕಾರ ನಿರೀಹ ನಿರ್ದ್ವಂದ್ವ ||
ಕಾಮಕರ್ಮ ವಿದೂರನಾತ್ಮಾ
ರಾಮ ಸಂವಿಜ್ಜ್ಯೋತಿ ನನ್ನ
ಸ್ವಾಮಿ ಸಿರಿ ನಿತ್ಯಾತ್ಮ ಗುರುಗಳು ಮಾಳ್ಕೆ ಸನುಮತಿಯ ||೨||

ರತ್ನ ಮಾಲ್ಯಾಭರಣ ಗಂಧ ಸು
ವಸ್ತ್ರ ಭೂಷಣ ನಿಂದ ನಿಂತೆಡ
ಹಸ್ತ ಚಷಕದ ಪಾತ್ರಕೆರಗಿದ ಮುರಿದ ಸುಂಡಲಿನ ||
ಉತ್ತಮದ ಬಲಗಯ್ಯ ಕಮಲದ
ಹಸ್ತಿಮುಖದರುಣಾಂಗ ದ್ವಿಭುಜ ತ್ರಿ
ನೇತ್ರನನು ಬಲಗೊಂಬೆನೀವುದು ಮತಿಗೆ ಮಂಗಲವ ||೩||

ಮಂದಹಾಸಿನಿ ಮಧುರ ಭಾಷಿಣಿ
ಕುಂದ ಮಂದಾರೇಂದು ಸನ್ನಿಭೆ
ಮಂದಜಾಯತನೇತ್ರೆ ಕೋಮಲಗಾತ್ರೆ ಸುಚರಿತ್ರೆ ||
ಮಂದ ಮದಗಜಗಮನೆ ನನ್ನಯ
ಮಂದ ಬುದ್ಧಿಯ ಕೆಡಿಸಿ ರಸನೆಯೊ
ಳಿಂದುವಗಲದೆ ಕರುಣದಲಿ ನಲಿದಾಡು ವಾಗ್ದೇವಿ ||೪||

ಗುರುವೆನಿಸಿಯರಿವಿತ್ತು ವಿಘ್ನವ
ನೊರಸಿ ಗಜಮುಖನಾಗಿ ಭಾವಕೆ
ಬರಲು ಭಾರತಿಯಾಗಿ ವಿರತಿಯ ಮಾಡಲಜವಾಗಿ ||
ಹರಿಯೆನಿಸಿ ನಿಜದರಿವ ಪಾಲಿಸಿ
ಹರನೆನಿಸಿ ಕರ್ಮಗಳನೆಲ್ಲವ
ನುರುಹಿ ನಿಜಪದವೀವ ಮಹಬಲನೀಗೆ ಸನುಮತಿಯ ||೫||

ಶ್ರೀಮದಮರಸ್ತೋಮ ನತಸುತ
ನಾಮ ರೂಪವಿದೂರ ಸಚ್ಚಿ
ದ್ಧಾಮ ಸಕಲಾಧಾರ ನಿರ್ವ್ಯಾಪಾರ ಶ್ರುತಿ ದೂರಾ ||
ಸೋಮಶೇಖರ ಪೂಜ್ಯ ಸಾಕ್ಷಾ
ತ್ಕಾಮರಸಭವ ತಾತ ಭುವನೋ
ದ್ಧಾಮ ಯೋಗಾಧಾರ ಲಕ್ಷ್ಮೀನೃಸಿಂಹ ಸಲಹೆಮ್ಮ || ೬ ||

ಶ್ರೀವನಿತೆ ಸಹ ಚಿನ್ಮಯನು ದಿವಿ
ಜಾವಳಿಗಳರ್ಥಿಸಲು ಕಳೆಯಲು
ಭೂವಿ ಭಾರದ ರಘುಕುಲದಲವನಿಯಲಿ ಸಂಜನಿಸಿ ||
ರಾವಣಾದ್ಯರ ಗೆಲಿದು ಕೀರ್ತಿಯ
ಪಾವನವ ಧರೆಗಿರಿಸಿ ನಿಜದೊಳ
ಗೋವ ಮಾಯಾ ಮನುಜ ರಾಮನ ಪದವ ಭಜಿಸುವೆನು || ೭ ||

ಭೂಮಿಭಾರವನಿಳುಹಲಮರ
ಸ್ತೋಮವರ್ಥಿಸೆ ಚಿನ್ಮಯನು ಮಾ
ಯಾ ಮನುಜನಾಗಿಳೆಗೆ ರವಿಕುಲದಲ್ಲುದಿಸಿಕೊಂಡು ||
ಭೀಮ ದೈತ್ಯರನಾದಿ ಬೊಮ್ಮದ
ಸಾಮವನು ಮಗುಳ್ಚಿದುತಘಹರ
ನಾಮವನು ಜಗಕಿತ್ತ ಸೀತಾಪತಿಯ ಬಲಗೊಂಬೆ || ೮ ||

ಸೃಷ್ಟಿರಕ್ಷಾಲಯ ಗುಣಾದಿ ವಿ
ಶಿಷ್ಟ ಮಾಯಾ ಹೇತು ಯೇಕನ
ಧಿಷ್ಟ ಮಾಯಾಶ್ರಯನ ಮಾಯನಚಿಂತ್ಯ ನಿಜರೂಪ ||
ಶಿಷ್ಟ ಪರಮಾನಂದ ನಿರ್ಮಲ
ಭೀಷ್ಟ ಬೊಧಾಕಾರದರಿವಿನ
ಘಟ್ಟ ಸೀತಾಪತಿಯ ನಿಜತತ್ವವನು ಭಾವಿಸುವೆ || ೯ ||

ಪದುಮದಳನಿಭನೇತ್ರ ಸರ್ವಾಂ
ಗದ ಸುಶೋಭನ ಗಾತ್ರ ಸೀತಾ
ಸುದತಿಯರ್ಧ ಕಳತ್ರ ಪರಶಿವ ಶಕ್ತಿಯುತ ಮಾತ್ರ ||
ವಿದಿತ ಲಕ್ಷ್ಮಣಮಿತ್ರ ಮಹದಾ
ಘದ ಜಗೌಘ ಪವಿತ್ರ ಮಂಗಳ
ದುದಯ ಶ್ರೀ ರಘುರಾಮ ರತ್ನವೆ ನಿತ್ಯ ನಮಿಸುವೆನು || ೧೦ ||

ಆದಿ ಗುರು ಗಣನಾಥ ಶಾರದೆ
ವೇದಗರ್ಭಾಚ್ಯುತ ಸದಾಶಿವ
ನಾ ದಿನಪ ಶಶಿವಹ್ನಿ ದಿಕ್ಪಾಲಕ ಭುಜಂಗಮರು ||
ವಾದವಳಿದಧ್ಯಾತ್ಮನಿಷ್ಠರು
ವೇದವಿದ ಶುಕ ಸನಕ ನಾರದ
ಬಾದರಾಯಣ ಕಪಿಲ ಮುಖ್ಯರು ಮಾಳ್ಕೆ ಸನುಮತಿಯ || ೧೧ ||

ಉತ್ತಮ ಶ್ರೀರಾಮಚರಿತ್ರ ಚ
ರಿತ್ರವೇಳಲು ಬುದ್ಧಿ ಮನವನು
ತುತ್ತುಗೊಳುತಿದೆ ವೇದ ಶಾಸ್ತ್ರ ಪುರಾಣ ಸಂಹಿತೆಯು ||
ಎತ್ತಲೇನೆಂದರಿಯದಿದ್ದೀ
ಕತ್ತೆ ಮಾನುಷನೆನಗೆ ಶ್ರೀಗುರು
ಮೂರ್ತಿಯರು ಕರುಣಾಕಟಾಕ್ಷದ ಲೇಶ ಮಾತ್ರದಲಿ || ೧೨ ||

ತಾನೆ ಸದುಗುರು ಶಿಷ್ಯ ಸಮ್ಯಗ್
ಜ್ಞಾನ ಗುಣ ವೈರಾಗ್ಯ ಭಕ್ತಿಯು
ತಾನೆ ಬೋಧಕ ಬೋಧ್ಯ ಬೋಧಾಧೀನ ವಾಕ್ಯವದು ||
ಸ್ವಾನುಭವದಲಿ ಬೆಳೆದು ಹೃದಯ
ಸ್ಥಾನ ಚಿತ್ಪಾತ್ಮಸ್ವರೂಪಿಣಿ
ತಾನೆ ನುಡಿಸುವಳೆನ್ನನಾ ಜಗದಂಬೆ ಮೂಕಾಂಬೆ || ೧೩ ||

ಜಾಂಬು ನಡೆವುದು ಬೊಂಬೆ ಕುಣಿವುದು
ಕೊಂಬು ನುಡಿವುದು ಚೆಂಬು ಕೊಗೆವುದು
ರಂಬೆ ಮಾತಾಡುವುದು ಸ್ವೇಚ್ಛಾಮಾತ್ರವವಕುಂಟೆ ||
ಹಂಬಲಿಲ್ಲವೆ ಧಿಟವೆಯಾ ಪರಿ
ಬೆಂಬಳಿಯಲೆನ್ನೊಳಗೆ ಸಿರಿ ಮೂ
ಕಾಂಬೆ ನಡೆನುಡಿಗಲಿಸಿದಂದದಿ ನುಡಿದು ಶುದ್ಧನಹೆ ||೧೪||

ಶರಧಿಯೊಳಗಣ ರತುನವೆಲ್ಲವ
ನರರು ಸಾಧಿಸಲಾರದಿದ್ದಡೆ
ದೊರಕಿತಂದನಿತುವನು ತಂದಡೆ ರತುನಕೊಣೆಯವೆ ||
ಹೊರೆಯದಾಪರಿ ರಾಮಚರಿತದಿ
ಶರಧಿಯೊಳಗಣ ತಸ್ಮೃಹಿತ್ವದ
ಪರಮ ರತುನವನೊರೆವೆ ನಾ ಕಂಡನಿತನಿದರೊಳಗೆ ||೧೫||

ಮೂಕ ನುಡಿಯನು ಹೆಳವ ನಡೆಯನು
ಜೋಕೆಯರಿಯನು ಹೆಡ್ಡನೆಂದು ವಿ
ವೇಕಿಗಳು ಗಜರುವರೊ ಮೇಣು ಸ್ವಭಾವಗುಣವೆಂದು ||
ಸಾಕುವರೊ ವಾ ಪರಿಯಲೆನ್ನಯ
ಕಾಕು ಗುಣವನು ಮರೆದು ಪಾಲಿಸ
ಬೇಕು ಬೇಡುವೆನೆರಗಿ ಸಾಷ್ಟಾಂಗದಲಿ ಹಿರಿಯರಿಗೆ ||೧೬||

ಕೇಳಿರೈ ಸುಕೃತಿಗಳು ಶಾಂತ ಸು
ಶೀಲ ನಿಧಿಗಳು ಮತ್ಸರಾಗ್ನಿಗೆ
ಬೇಳದೊಡಲನು ರಾಮಚರಿತಧ್ಯಾತ್ಮ ಭರಿತವನು ||
ಹೇಳುವನು ಸಾಕ್ಷಾತ ಪರಮ ಕೃ
ಪಾಳು ಪರಶಿವ ತಾನೆಯರ್ಥಿಸಿ
ಕೇಳುವಳು ಜಗದಂಬೆ ಪಾರ್ವತಿ ಪರಮ ಕಲ್ಯಾಣಿ ||೧೭||

ತ್ರಿನಯನೋಕ್ತಧ್ಯಾತ್ಮ ರಾಮಾ
ಯಣವಿದರಲಾ ರಾಮಚಂದ್ರನ
ಗುಣಗಣೋರು ಚರಿತ್ರ ತನ್ನಾಮಾಮೃತದ ಮಹಿಮೆ ||
ಪ್ರಣತರಿಷ್ಟಾಭೀಷ್ಟ ತತ್ವದ
ದೆಣಿಕೆ ವಿರತಿ ವಿವೇಕ ಭಕುತಿಯ
ಭಣಿತಿಯಲ್ಲದೆ ಮಿಕ್ಕ ಗಡಬಡೆಯಿಲ್ಲದಿದರೊಳಗೆ ||೧೮||

ಭಕ್ತಿ ರಸ ಭಕುತರಿಗೆ ವಿಷಯ ವಿ
ರಕ್ತಿರಸ ವಿರತರಿಗೆ ಕರ್ಮಾ
ಸಕ್ತರಿಗೆ ಸನ್ಮಾರ್ಗ ಯೋಗಾಭ್ಯಾಸ ನಿಷ್ಠರಿಗೆ ||
ಮುಕ್ತರಿಗೆ ವಿಜ್ಞಾನ ಮುನಿಗಳಿ
ಗುಕ್ತ ತಪರಸವಿದನು ಕೇಳದ
ಮರ್ತ್ಯರಿಗೆ ಗತಿಯಿಲ್ಲವಿಂತೆನಲದನು ವಿವರಿಸುವೆ ||೧೯||

ತಾಮರಸನೊಳಗಾಗಿ ಕಾಶಿಯ
ಲಾ ಮಹಾ ಕ್ಷೇತ್ರದಲಿ ಸಹ ಶಿವ
ರಾಮ ನಾಮವ ಮರಣಕಾಲದಿ ತಾನೆ ಕಿವಿಯಲ್ಲಿ ||
ನೇಮಿಸುವ ಗಡ ರಾಮನಾಮ ವಿ
ದೇ ಮಹಿಮೆಯೋ ಸಕಲ ಸಮ್ಮತ
ಸೋಮಶೇಖರನೊಲಿದು ಜಪಿಸುವ ಸಾರ ಸರಹಸ್ಯ ||೨೦||

ಆರು ಕೆಲರಧ್ಯಾತ್ಮ ಸಂಯುತ
ಸಾರ ಸರ್ವ ಪುರಾಣ ಸಮ್ಮತ
ಪೇರುವಾದಿವ ಕೇಳಿ ಪೇಳುವರನ್ಯವನು ಬಿಸುಟು ||
ಘೋರ ಪಾಪವ ಕಳೆದು ಕಪಿಲೆಯ
ಧಾರೆಯೆರೆದಾ ಕೋಟಿ ಫಲವನು
ಮೀರಿ ಮುಕ್ತಿಯ ಪಡೆವರಿಂದನವರತ ಕೇಳುತಿ ||೨೧||

ಒಂದು ದಿನ ಕೈಲಾಸ ಗಿರಿವರ
ಮಂದಿರದಿ ರವಿಕೋಟಿ ತೇಜದ
ಗೊಂವಣಾದ ಹರಿ ಪೀಠದಲಿ ಕುಳಿತಾತ್ಮನಿಷ್ಠೆಯಲಿ ||
ಇಂದುಮೌಳಿ ತ್ರಿಣಯನಭವಾ
ನಂದ ಮೂರುತಿ ಸೇವ್ಯ ಸಿದ್ಧರ
ವೃಂದದೊಡ್ಡೋಲಗದಲೆಡದೊಡೆಯುಗಜೆ ಸಹವಾಗಿ || ೨೨ ||

ಆ ಸಮಯದಲಿ ಶಿವನೊಡನೆ ಸಂ
ತೋಷ ಕಾರಣವಾದ ಲೋಕ ಹಿ
ತೈಷಿಕರವಹ ವಾಕ್ಯವನು ಸರ್ವಾರ್ಥ ಸಾರವನು ||
ಭಾಸುರಾಂತರ್ವೃತ್ತಿಯನು ಪರ
ಮೇಶಸಂಪ್ರಿಯಲೆರಗಿ ಸಂಶಯ
ದಾಸರಡಗಲು ಕೇಳಿದಳು ಸಭೆಯೊಳಗೆ ಭಕುತಿಯಲಿ || ೨೩ ||

ಎಲೆ ಜಗತ್ರಯವಾಸ ಸಂವಿ
ನ್ನಿಳೆಯ ಸರ್ವಾಧ್ಯಕ್ಷ ಕಾರಣ
ಸುಲಭ ಪರಮೇಶ್ವರ ಸನಾತನನಾದಿ ಪೂರುಷನೆ ||
ಸಲಿಗೆಗೊಡು ಬಿನ್ನಹಕೆ ನಿನ್ನಯ
ಲಲನೆ ನಿನ್ನಯ ಭಕ್ತೆಯೆಂಬೀ
ಬಲದಿ ನಿನ್ನನು ನಮಿಸಿ ಕೇಳುವೆ ನಿನ್ನ ಕರುಣವಲಿ || ೨೪ ||

ಸಾರವಾದತಿ ಗೌಪ್ಯವಾದ ವಿ
ಚಾರಯುತ ವೈರಾಗ್ಯವಾದುದ
ನಾರಿಗೆನ್ನರಿಗೆನ್ನದಿದ್ದುದ ಸೂರಿ ಸಮ್ಮತವ ||
ಪಾರದರಿವಿನ ನಿಜದರಿವ ನಿಜ
ನಾರಿ ಮುಗುಧೆಗೆ ತಿಳಿವ ಪರಿಯಲಿ
ವಾರಿಜಾಕ್ಷ ತ್ರಿಯಕ್ಷ ಕರುಣಿಸುದಿದನು ನೀನೆನಗೆ || ೨೫

ರಾಮಚಂದ್ರನ ಸತ್ವ ಸಾರವ
ರಾಮಣೀಯಕ ಭಕ್ತಿ ದೃಢವೆಸ
ಲೇ ಮಹೇಶ್ವರನವಗೆ ದೊರಕುವದೆಂತು ಸಿದ್ಧಿವಲ ॥
ರಾಮಣೀಯಕ ಭಕ್ತಿ ಮುಕ್ತಿಗೆ
ನೇಹುವೆಂಬುದು ನಿಮ್ಮ ಚಿತ್ತದ
ಲೀ ಮತವೊ ಬೇರೊಂದು ಮತವೋ ಯೆಂದಳಂಬುಜಾಕ್ಷಿ ॥ ೨೬ ॥

ನಿರ್ಮಲೋಕ್ತಿಯಲಿನ್ನ ಸಂಶಯ
ಕರ್ಮ ಬಂಧವ ಕಡಿಯಬೇಹುದು
ರಮ್ಯವನು ಪರಮಾತ್ಮನೇಕನ ಮಾಯೆಯೆನುತಿಪರು ॥
ಬ್ರಹ್ಮವಿತ್ತುಗಳನವರತ ಪರ
ಬೊಮ್ಮನೆಂದೇ ಭಜಿಸಿ ಪಡೆವರ
ಹಮ್ಮಳಿದ ಗುಣರಹಿತ ಪರಮಾನಂದ ನಿಜ ಪದವ ॥ ೨೭ ॥

ಕೆಲರು ನುಡಿವರು ರಾಮನರಿಯದ
ಜಳನ ವಿದ್ಯಾವೃತ ಮನಸ್ಕನು
ತಿಳಿದಡನ್ಯರನರಿವನೇ ಪರಮಾತ್ಮ ತತ್ವವನು ॥
ಹಳವಿಸುವನೇ ಸೀತೆಯಗಲಿನ
ಲಳಲುವನೆ ಪ್ರಾಕೃತದ ತೆರನ
ಲ್ಲೊಳಗೆ ನಿರ್ಗುಣನಲ್ಲವೆಂಬರು ಹೀನ ಯುಕ್ತಿಯಲಿ ॥ ೨೮ ॥

ಅರಿಯದಜ್ಞರು ರಾಮನಾದಡೆ
ಯರಿವು ಮೋಕ್ಷೇಚ್ಛುಗಳಿಗಾರ್ಕೈ
ಯರಿವ ದೈವವು ಸರ್ವ ಸಾಮ್ಯನು ನಿಮ್ಮ ಮತದಲ್ಲಿ ॥
ಅರವಪೋಲೆನಗುರುಹಿ ಸಂಶಯ
ದೆರೆಯ ಭೇದಿಸೆನುತ್ತ ಕೇಳಿದ
ಳಕಿಯನನು ಬಹು ಭಕುತಿಭಾವದಲುಮ ಗಿರಿಜಾತೆ ॥ ೨೯ ॥

ಇಂತು ಕೇಳಿದ ಸತಿಯ ಮಾತಿಗೆ
ಸಂತಸವಲೀಶ್ವರನು ನುಡಿದನು
ಕಾಂತೆ ಕೇಳಾ ಧನ್ಯೆಯಾದಪರಾತ್ಮ ರೂಪಿನಲಿ ||
ಅಂತರಂಗದಿ ರಾಮ ತತ್ವದ
ಚಿಂತನವನರಿವಿಚ್ಛೆ ಹುಟ್ಟಿತ
ಸಂತ ಮಹಿಮನ ಮಹಿಮೆಯನು ಕೇಳೆಂದು ಕರುಣಿಸಿದ || ೩೦ ||

ಮುನ್ನ ತಾನಿನಿತು ದಿನವಾರಿಗೆ
ವರ್ಣಿಸೆನು ಪರಮಾರ್ಥ ಗೂಢವ
ನನ್ಯವಾಚಕವಾದುದನು ನಿನ್ನಿಂದದವರುಳಿಯೆ ||
ಉನ್ನತದ ಭಕುತಿಯಲಿ ಕೇಳಿದೆ
ನಿನ್ನ ನನಗದರಿಂದ ರಘುಕುಲ
ರನ್ನರಂಘ್ರಿಗೆ ನಮಿಸಿ ಪೇಳುವೆನೆಂದನಖಿಳೇಶ || ೩೧ ||

ರಾಮ ಸಾಕ್ಷಾತ್ ಪರಮ ಪೂರುಷ
ನಾಮ ಗುಣ ರೂಪಾದಿ ಮಾಯಾ
ಪ್ರೇಮ ಮೂರಾನಂದನೇಕಾತುಮನೆಯಾಪರೆಯೂ ||
ತಾ ಮುವದಿ ಮಾಯೆಯಲಿ ಸೃಜಿಸಿ
ದ್ವೀ ಮಹತ್ತುಗಳೊಳಹೊರಗೆ ಚಿ
ದ್ವ್ಯೋಮ ಗಗನದ ರೂಢನಾಗಿಯು ಚೇಷ್ಟಿಸುತ್ತಿಹನು || ೩೨ ||

ಈ ಜಗತ್ತಾವನ ಸಮೀಪದಿ
ಸೂಜಿ ಚಲಿಸಲು ಕಲ್ಲು ಚಲಿಸದ
ಓಜೆಯಲಿ ಜಗವಾಡೆ ತಾ ನಿಶ್ಚೇಷ್ಟನಾಗಿಹನು ||
ಮೂಜಗದಿ ಮೂಢಾತ್ಮರರಿಯರು
ತೇಜವುಳ್ಳ ದಿನೇಶ ಕಿರಣವ
ಮೂಜುವಂದದ ಪರಿಯಲಾತ್ಮನನರಿಯರದರಿಂದ || ೩೩ ||

ಪುತ್ರ ಮಿತ್ರಾದ್ಯಖಿಳ ಕರ್ಮವ
ಹೊತ್ತ ಕಲ್ಮಷ ಹೃದಯರಾತ್ಮನ
ನಿತ್ಯ ಶುದ್ಧನಮಾಯನಲಿ ಮಾಯೆಯನೆ ಹೊರಿಸುವರು ||
ಇತ್ತ ಹೃದಯದಲಿದ್ದು ಬೆಳಗುವ
ಚಿತ್ತ ಸಾಕ್ಷಿಯ ಕಾಣರಿಂತೆನೆ
ಮತ್ತೆ ಕೊರಳಲ್ಲಿದ್ದ ಪದಕವ ಹೊರಗರಸುವಂತೆ || ೩೪ ||

ಆವ ಕಾಲಕು ರವಿಗೆ ಕತ್ತಲೆ
ಯಾವರಿಸದೇ ಬೆಳಗುತಿಪ್ಪ ಸ್ವ
ಭಾವವಂತೀಶ್ವರನೆನಿಸಿಕೊಂಬಾ ರಘೂತ್ತಮನು ||
ಕೇವಲ ಪರಂಜ್ಯೋತಿ ಚಿದ್ಘನ
ಭಾವದೂರನಲರಿವು ಮರವೆಯ
ನೋವೆ ಹರಿಯಲ್ಲೆತ್ತಲಿದು ನೇಣುರಗನೆಂಬಂತೆ || ೩೫ ||

ಅದು ನಿಮಿತ್ತಾನಂದ ಚಿನ್ಮಯ
ಗೊದಗದೀ ಮಾಯಾ ವಿಕಾರವ
ದನರರಿವ ತಾ ಕಾಂಚನಾಗಿಯೆ ಸಾಕ್ಷಿಯೆನಿಸುವನು ||
ಪದುಮದೃಶನಾ ಮಾಯೆಗಾಶ್ರಯ
ನದುವೆ ತನಗಾಶ್ರಯವದಾಗದು
ಸುದತಿ ಮಾಯಾ ಮೋಹಿ ಮೂರುಖನಲ್ಲ ತಿಳಿಯೆಂದ || ೩೬ ||

ಇಲ್ಲಿ ಕೇಳೊಂದತಿ ರಹಸ್ಯದಿ
ದುರ್ಲಭವನೀ ಮೋಕ್ಷ ಸಾಧನ
ಕುಳ್ಳದನು ಮಾರುತಿಯ ಸೀತಾರಾಮ ಸಂವಾದ ||
ನಲ್ಲ ರಾಮಾಯಣದಿ ರಾಮನು
ಕಳ್ಳ ದೇವಾರಾತಿಯಲಿ ಬಲು
ಹುಳ್ಳ ರಾವಣನಸುವ ಕೊಂಡನು ಕದನ ಮುಖವಲ್ಲಿ || ೩೭ ||

ಸರ್ವ ಬಲ ವಾಹನವ ಕೊಂಡಾ
ಮರ್ಷಿನೀತನ ಪುರವ ಹೊರವಂ
ಟುರ್ವಿಸುತೆ ಸುಗ್ರೀವ ಲಕ್ಷ್ಮಣರೊಡನಯೋಧ್ಯೆಯನು ॥
ಸರ್ವಗತ ಹನುಮಾದ್ಯರೊಡನೆ ಸು
ಪರ್ವರಭ್ರದಲುಲಿಯಲೈದಿ
ದ್ದುರ್ವಿ ಸಿಂಹಾಸನದ ಪಟ್ಟವ ಧರಿಸಿ ರಂಜಿಸಿದ ॥ ೩೮ ॥

ಸುತ್ತ ಪರಿವರಿಸಿರೆ ವಸಿಷ್ಠಾ
ದ್ಯುತ್ತಮರು ಮುಂದೆಡದಲವನೀ
ಪುತ್ರಿ ಲಕ್ಷುಮಣ ಬಲದಿ ಭರತ ನಿಯೋಗಿ ಮಂತ್ರಿಗಳ ॥
ಪೊತ್ತದೊತ್ತೊತ್ತುಗಳ ಶಾಶ್ವತ
ವೃತ್ತ ಕಪಿನಾಯಕರ ವೀಜನ
ಸತ್ತಿಗೆಯು ಚಾಮರದ ಭಜಕರ ನಡುವೆ ರಂಜಿಸಿದ ॥ ೩೯ ॥

ನೀಲಮೇಘ ನಿಭಾಂಗ ಕಾಂತಿಯು
ಸಾಲ ಭೂಷಣ ನಿಚಯ ಮಿಂಚಿನ
ಮಾಲೆಯಂತಿರೆ ಕೋಟಿ ಸೂರ್ಯ ಸಹಸ್ರ ದೀಪ್ತಿಯನು ॥
ಯೇಳಿಸುವ ಚಿಜ್ಜ್ಯೋತಿಯಂಗ ವಿ
ಶಾಲ ಶರಧಿಯಲೊಡ್ಡುದೆರೆಯೆನೆ
ಮೇಲೆ ರತುನಾಕೀರ್ಣ ಮುಕುಟವು ಹೊಳೆಯೆ ರಂಜಿಸಿದ ॥ ೪೦ ॥

ಸಿರಿಮೊಗದ ಮಧುರಾರುಣೇಕ್ಷಣ
ದರಹಸಿತ ಕೌಮುದಿಯ ಬಿಂಬಾ
ಧರದ ಶೋಣದ ಮಕರ ಕುಂಡಲ ಗಂಡ ಮಂಡಲದ ॥
ಸಿರಿಮುಡಿಯ ಪರಿಮಳದ ತುಂಬಿಯು
ತರವ ಕರುಳಿನ ಭಾಳ ತಿಲಕದ
ಕೊರಳ ರೇಖಾ ಹಾರ ಹೀರಾವಳಿಯಲೆಸದೀರ್ದ ॥ ೪೧ ॥

ಬಾಹು ವಕ್ಷಸ್ಥಳದ ಗಂಧ ಸು
ಭೂರಿ ಭುವನದ ಜಠರ ತ್ರಿವಲಿಯ
ವಾರಿಜೋದರ ಕಟಿತಟದ ಪೀತಾಂಬರದ್ಯುತಿಯ ॥
ಊರು ಯುಗಳದ ಜಾನು ಜಂಘೋ
ದಾರ ಗುಲ್ಫನ ಖಡೆಯ ನೂಪುರ
ವೀರ ಬಾವುಲಿ ದಿವ್ಯ ಪದಪದ್ಮದಲೆ ರಂಜಿಸಿದ ॥ ೪೨ ॥

ತೋಳಬಳೆ ಮುಂಗಯ್ಯ ಕಂಕಣ
ಜೂಳೆಗಡಗದ ಸಾಲು ಮುದ್ರಿಕೆ
ಯೋಳಿ ಜಾನುನ್ಯಸ್ತ ವಾಮ ಕರಾವಲಂಬನದ ॥
ತಾಳಿದಭಯದ ವೋಲು ಬಲದಲಿ
ಶೀಲ ಸಂವಿನ್ಮುದ್ರೆಯಂತೆ ಕೈ
ವಾಳು ರಾಮನ ಮುಂದೆ ಕೈಮುಗಿದಿರ್ದನಾ ಹನುಮ ॥ ೪೩ ॥

ನೋಡಿದನು ಸಿರಿರಾಮನಂಜಲಿ
ಗೂಡಿ ಮುಂದಿದ್ದಾಂಜನೇಯನು
ಮಾಡಿದಗ್ಗದ ಸೇವೆಗಾತನ ನಿರ್ವಿಕಾರತೆಯ ॥
ಮಾಡ ನಿರಪೇಕ್ಷತೆಯ ಬುದ್ಧಿ
ಪ್ರೌಢನಾತ್ಮಜ್ಞಾನ ಯೋಗದ
ಲಾಡಬೇಕೆಂಬಂತರಂಗವನರಿದು ಕರುಣಿಸಿದ ॥ ೪೪ ॥

ಧರಣಿಸುತೆ ನೋಡಾತ್ಮ ಭಕ್ತನೆ
ಪರಮ ಸೇವೆಯನಾನತಿಯ ನೀ
ತರುಣಿನೀಗಳೆ ಹೇಳು ತತ್ವಜ್ಞಾನ ಸಂಸ್ಥಿತಿಯ ॥
ಹರದ ಕಲ್ಮಷ ನಮ್ಮ ಸೇವಾ
ಪ ಣದ ನಿರ್ವಿಷಯಿ ಸದ್ಗುಣ
ಭರಿತ ಯೋಗ್ಯನು ಕುಶಲಿ ತಿಳಿವದೊಳೆಂದನಾ ರಾಮ ॥ ೪೫ ॥

ಎಂದಡಸ್ತು ಯೆನುತ್ತ ತ್ರೈಜಗ
ವೃಂದ ಮೋಹಿಸಿ ರಾಮ ತಕ್ಷದಿ
ನಿಂದ ನಿಶ್ಚಿತದನುವನತಿ ಕರುಣದಲಿ ಮಾರುತಿಗೆ ||
ಮಂದಹಾಸ ಮನೋನುರಾಗಾ
ನಂದ ಕರದಲಿ ಕಲ್ಪಷಾಷಹ
ಪೆಂದೆನಿಪ ಸಿರಿರಾಮ ಮಹಿಮೆಯನೊರೆವಳೊಲವಿನಲಿ || ೪೭ ||

ಸಂಧಿ ಪದವಾಸರ್ಗದಲಿ ಪದ
ವೃಂದ ನಾಲ್ವತ್ತೈದೆನಲು ಶಿತಿ
ಕಂಧರನು ಪಾರ್ವತಿಗೆ ಪೇಳುವ ರಾಮ ಚರಿತದಲಿ ||
ಎಂದುವಗಲದೆ ಹೃದಯ ಕಮಲದ
ಮಂದಿರದಿ ನೆಲಸಿಪ್ಪ ದೇವ ಮು
ಕುಂದ ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹ ಸಲಹೆಮ್ಮ || ೪೮ ||

ಅಂತೂ ಸಂಧಿ ೧ ಕ್ಕೆ ಪದ ೪೭ ಕ್ಕೆ

ಮಂಗಳಮಹಾ ಶ್ರೀ ಶ್ರೀ

ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಎರಡನೆಯ ಸಂಧಿ

## ರಾಮನಿಂದ ಹನುಮಂತನಿಗೆ ನಿಜತತ್ವ ಬೋಧನೆ

ಸೂಚನೆ || ಸೀತೆ ತ್ರಿಜಗನ್ಮಾತೆ ಶ್ರೀ ರಘು
ಜಾತ ಮಹಿಮೆಯನೊರೆಯೆ ಹನುಮಂ
ಗೋತು ರಾಘವ ತಾನೆ ನಿಜತತ್ವವನು ಬೋಧಿಸಿದ ||

ಪದ || ಗಿರಿಜೆ ಕೇಳಾ ಹನುಮನಂತಃ
ಕರಣ ಬುದ್ಧಿಗೆ ಮೆಚ್ಚಿ ರಾಮನು
ಧರಣಿಸುತೆ ತಿಳುಹೆನಲು ನುಡಿದಳು ಕರೆದು ಮಾರುತಿಗೆ ||
ತರುಣ ತಿಳಿಯಾ ರಾಮ ಸಚ್ಚಿ
ತ್ಪರಮ ಸುಖ ಪರಿಪೂರ್ಣ ಬೊಮ್ಮದ
ತಿರುಳೆನಿಸುವದಖಂಡ ಚಿನ್ಮಯನಹ ಜಗನ್ಮಯನ ||೧||

ತಾನು ತಾನಾಗಿರ್ದು ಧಿಟದಿಂ
ತಾನೆನಿಪ್ಪುದು ತನಗದಿಲ್ಲ
ಜ್ಞಾನಮಯ ನಿರ್ಮಲ ನಿರಂಜನ ನಿರ್ವಿಕಾರ ನಿಜ ||
ಸ್ವಾನುಭವ ಸಂವೇದ್ಯ ಶಾಂತಾ
ಧೀರ ರಹಿತನ ಮಾಯನಕ್ರಿಯ
ನೇನನೂ ಹೊದ್ದದಿಹ ಸರ್ವವ್ಯಾಪಿ ವ್ಯಗುರೂಪಿ ||೨||

ನಾನು ಮೂಲಪ್ರಕೃತಿ ಸರ್ಗ
ಸ್ಥಾನ ನಾಶನಕಾದಿ ಕಾರಣೆ
ನಾನು ತತ್ಸಾಮರ್ಥ್ಯದಿಂದುಗುಳುವೆನು ನುಂಗುವೆನು ||
ನಾನವಿಧ ಸೃಷ್ಟಿಗಳನಲಸದೆ
ನಾನು ಮಾಡಿದ ಕರ್ಮವನು ಸು
ಜ್ಞಾನಮಯನಾರೋಪಿಸುವರಾತನಲಿ ಗುಣಗಣವ || ೩ ||

ಶುದ್ಧ ನಿರ್ಮಲ ರಘುಕುಲದಲಾ
ಯೋಧ್ಯ ನಗರದಿ ಜನಿಸಿ ಪಾಲಿಸ
ವಿಧ್ವರವನ್ನೈದಿವನು ವಿಶ್ವಾಮಿತ್ರನೊಡನೊಲಿದು ||
ಉದ್ದಿವನು ತಾಟಕಿಯನಸುರರ
ಗೆಸ್ದಹಲ್ಯಾ ಶಿಲೆಯ ಶಾಪವ
ನೊದ್ದನೈದಿವನೊಲಿದು ಜನಕನ ರಾಜಸಭೆಗಾಗಿ || ೪ ||

ಚಾಪವನು ಮುರಿದನು ಮಹೇಶನ
ಓಪನಾದನು ತನಗೆ ಯಿರುತಾ
ಟೋಪ ಮದವನು ನಿಲಿಸಿದನು ಭಾರ್ಗವ ಮುನೀಶ್ವರನ ||
ಲೇಪರಹಿತನಯೋಧ್ಯೆಯಲ್ಲಿರೆ
ಭೂಪ ವಚನವ ಸಲಿಸೆ ನಡೆದನು
ತಾಪವಿಲ್ಲದೆ ದಂಡಕಾರಣ್ಯವನನುಜ ಸಹಿತ || ೫ ||

ಕಳಚಿದನು ಕಾಯವ ವಿರಾಧನ
ಬಳಿಕ ಮಾಯಾ ಮೃಗವ ಕೊಂದನು
ಖಳನು ಮಾಯಾ ಸೀತೆಯೊಯ್ಯೆ ಜಟಾಯು ಮೋಕ್ಷವನು ||
ಸಲಿಸಿಕೊಡೆ ಕಾಬಂಧಕಾ ಪರಿ
ಯೊಲಿದು ಪೂಜಿಸೆ ಶಬರಿಯಲ್ಲಿಗೆ
ಕೆಳೆತನಕೆ ಸುಗ್ರೀವನಾಗಲು ಬಾಲಿಯನು ಕೊಂದ || ೬ ||

ಸೀತೆಯನ್ವೇಷಣವ ನೋಡುತ
ಸೇತುವನು ಕಟ್ಟಿದನು ಶರಧಿಗೆ
ಪಾತಕಿಯ ಪಟ್ಟಣವ ಕಪಿನಾಯಕರು ಸಹ ಮುತ್ತಿ ||
ಭೀತಿಸದೆ ರಾವಣ ದುರಾತ್ಮನ
ಜಾತ ಮಾತಾದ್ಯರನು ಕೊಂದಾ
ಭೂತಳವ ಲಂಕೆಯ ವಿಭೀಷಣಗಿತ್ತು ಪಾಲಿಸಿದಾ || ೭ ||

ಭಾಸುರವ ಪುಷ್ಪಕದ ಮೇಲೆ ವಿ
ಲಾಸದಿನ್ನಾ ಸಹಿತಯೋಧ್ಯಾ
ವಾಸವೈದಿ ಸಮಸ್ತ ರಾಜ್ಯದ ಪಟ್ಟವನು ಧರಿಸಿ ||
ಕಾಸು ವೀಸವ ಧರ್ಮ ತಪ್ಪದೆ
ಶಾಸಿಸುತ ನೃಪ ಮಾರ್ಗವನು ಜಗ
ದೀಶನೀಪರಿ ಮಾನುಷಾಂಗದ ಲೀಲೆಯನು ಧರಿಸಿ || ೮ ||

ಇನಿತು ಮೊದಲಹ ಗುಣವು ರಾಮನ
ಲೆನಿಸುತಿಹರು ನಿಜ ನಿರ್ವಿಕಾರನ
ಲಸುಹಮನನದ್ವಯನ ಮೂರ್ತ್ಯಾನಂದ ವಿಗ್ರಹನ ||
ಜನನ ದೂರನ ಜಾಡ್ಯ ಹೀನನ
ಚಿನುಮಯನ ಚೇತನಕೆ ಚೇತನ
ನೆನಿಸಿದಾಗಮ ಸಿದ್ಧ ಸತ್ತಾ ಮಾತ್ರ ವಿಗ್ರಹನ || ೯ ||

ರಾಮ ನಡೆಯನು ನಿಲ್ಲ ನಿಲಿಸನು
ರಾಮ ದುಃಖಿಸ ಬಯಸನೇನುವ
ರಾಮ ಪಿಡಿಯನು ಬಿಡನು ಬಿಡಿಸನು ಮಾಡ ಮಾಡಿಸನು ||
ರಾಮ ಚಲಿಸನು ಮರೆಯ ಮರೆಸನು
ರಾಮ ಪರಮಾನಂದಸದರಿಂ
ಕಾಮ ವಿಷಯವಿದೂರ ಗುಣಿಯೆಂಪಪಲಿ ಕಾಣುತಿಹ || ೧೦ ||

ಇಂತು ಸೀತಾದೇವಿ ತಿಳುಹಲ
ನಂತರದಿ ಶ್ರೀ ರಾಮ ತಾನೇ
ನಿಂತ ಹನುಮನ ಕೂಡೆ ನುಡಿದನು ನಗುತ ಕರುಣದಲಿ ||
ಶಾಂತಮತಿ ಕೇಳಾತ್ಮ ತತ್ವವ
ದೆಂತೆನಲು ತಿಳುಹುವೆನು ಆತುಮ
ನಂತರಾತುಮ ಪರಮನೆಂಬೀ ಮೂರು ತೆರನೆಂದ || ೧ ||

ಮಗನೆ ಮಹದಾಕಾಶ ಜಲದೊಳ
ಗೊಗೆದಿಹ ಪ್ರತಿಬಿಂಬ ಮಧ್ಯದ
ಗಗನವಚ್ಛಿನ್ನಾಖ್ಯ ಮೂರಿವು ತೋರುವಂದದಲಿ ||
ಬೆಗಡು ಬುದ್ಧಿಯೆ ಬಿಂಬ ಪೂರ್ಣನೆ
ಮಿಗೆ ಮಹತ್ಕಾರಣದ ಬೊಮ್ಮವು
ಸೊಗಯಿಸುವ ತತ್ಸಾಕ್ಷಿ ಮಧ್ಯವು ಯೆಂದನಾ ರಾಮ || ೨ ||

ಸತ್ಯ ಸಂವಿನ್ಮಾತ್ರನದ್ವಯ
ನಿತ್ಯ ನಿಷ್ಕಳವಾಗಿ ಹೇಳಲು
ಇತ್ಥವೆಂದಳೆವಡದ ಬೊಮ್ಮವೆ ಸುಪ್ತಿಯಂದದಲಿ ||
ಮತ್ತಯದರೊಳು ಕನಸು ಹೊಳವಾ
ವೃತ್ತಿ ತಾನಾಭಾಸ ಸಾಕ್ಷಿಯ
ಹೊತ್ತ ಹಮ್ಮಿನ ಜೀವ ಜಾಗ್ರದ ಬಿಂಬವೆನಿಸುವದು || ೩ ||

ಲೋಕವೀ ಪ್ರತಿಬಿಂಬವೆನಿಸುವ
ದೇಕನದ್ವಯ ಪೂರ್ಣನೇ ನಿ
ರ್ವ್ಯಾಕುಳಾಖಂಡೈಕವದರ ವಿಲಾಸವೇ ಸಾಕ್ಷಿ ||
ಜೋಕೆಯರಿಯದ ಮೂಢ ರಾಜೀ
ವಾಕೃತಿಯ ಸಾಕ್ಷಿಯಲಿ ಹೊರಿಸುವ
ರೀ ಕಳೇಬರ ದುಃಖಿಯುಭಿಮಾನವನು ವಿಚಾರಿಸದೆ || ೪ ||

ಮುಸಗಿದಡೆ ಜಲಬಿಂಬ ಗಗನವು
ಮುಸಗಿದಂದದಿ ಕಾಣೆ ಮಹದಾ
ಗಸಕೆ ಚಲನವದುಂಟೆ ಯೊಪರಿ ಕಲ್ಪಿತದ ಸಾಕ್ಷಿ ||
ಯೆಸಗಲಂಡವಸದರ ದೆಸೆಯಿಂ
ಬಸವಳಿವ ಪ್ರತಿಬಿಂಬ ಜೀವನು
ಮುಸಗದದ್ವಯ ರೂಪವಿರಹಿತನಾತ್ಮ ನೋಡೆಂದ || ೧೫ ||

ಇನ್ನುವಪ್ರತಿಮುಂಗೆ ಭೇದಾ
ಭಿನ್ನ ಪ್ರತಿಬಿಂಬಂಗಳಂತೆನೆ
ಕನ್ನಡಿಯಲೊಗದಿದ್ದ ಗಗನವು ಗಗನ ಹೊರತಾಗಿ ||
ಭಿನ್ನವಾದಾ ತೆರಹದುಂಟೇ
ತನ್ನೊಳಗೆ ತಾ ತೋರಿದಂದದಿ
ಗನ್ನ ಗತಕವ ಜೀವ ಪೂರ್ಣನೊಳೇಕವಾಗಿಹನು | ೧೬ ||

ಬಿಂಬ ಗಗನವು ವ್ಯರ್ಥವಾಗಿ ಮ
ಹಾಂಬರವೆಯುಳಿವಂತೆಯಾಭಾ
ಸಾಂಬರದ ಕಲ್ಪನೆಯಳಿಯಲಾ ಕಲ್ಪನೆಯಲೊಗದ ||
ಹಂಬಲಿಸುವಾ ಜೀವ ತಾನು ಚಿ
ದಂಬರವ ಕೂಡುವನು ಕೇಳ್ಳೈ
ನಂಬಿ ತಿಳಿಯೈ ತತ್ವಮಸಿ ವಾಕ್ಯಾರ್ಥವೆಂದಿದನು || ೧೭ ||

ವಿದ್ಯೆ ವಿದ್ಯೆಗೆ ಲಕ್ಷ್ಯ ವಿದ್ಯೆಗ
ವಿದ್ಯೆ ಪುನರಪಿ ಲಕ್ಷ್ಯವೆರಡಕು
ಶುದ್ಧ ವಿದ್ಯೆಯೆ ಲಕ್ಷ್ಯವದಕೇನಿಲ್ಲ ನಿರ್ಲಕ್ಷ್ಯ ||
ವಿದ್ಯದಾಭಾಸವು ಕೆಡಲಿಕೆಯು
ವಿದ್ಯೆಯೇ ಪ್ರತಿಬಿಂಬವುಳಿವುದು
ಶುದ್ಧ ವಿದ್ಯೆಯೆ ತಾನೆಯಾದಕೆ ತತ್ವಮಸಿಯೈಕ್ಯ || ೧೮ ||

ಇದುವೆ ತಾ ವಿಜ್ಞಾನವೆನಿಸುವು
ದಿದನು ನಾಸ್ತಿಕರಿಂಗೆ ಹೇಳದಿ
ರಿದನು ಬಲ್ಲರು ನೆನ್ನ ಭಕ್ತರು ನೆನ್ನ ಭಕುತಿಯಲಿ ॥
ಮುದವನೈದಿ ನಿರಾಯಸದಿ ಮು
ಕ್ತ್ಯದವ ಪಡೆವರು ಭಕ್ತಿಯುಕ್ತರ
ಪದಕೆರಗಿ ಹಿಂಗುವಳು ಮಾಯಾನಾರಿ ದೂರದಲಿ ॥ ೧೯ ॥

ಭಕ್ತಿ ವಿಮುಖರು ಶಾಸ್ತ್ರಜಾಲವ
ಗರ್ತದೊಳು ನೆರೆ ಮುಳುಗಿ ಮೋಹದಿ
ಮತ್ತರಾಗಿಹರವರಿಗೇ ಸುಸಹಸ್ರ ಯೋನಿಯಲಿ ॥
ಸತ್ತು ಹುಟ್ಟುತ್ತಿಹರು ಯೋಗದ
ಯುಕ್ತಿ ದೊರಕದೆ ಕಾಲ ಕರ್ಮವ
ನುತ್ತರಿಸರೆಂದೆಂದು ಹಮ್ಮಿನ ಬದ್ಧ ಬಿಡದೆಂದ ॥ ೨೦ ॥

ಹಮ್ಮು ಕರ್ಮವ ಮಾಡಿ ಮತ್ತಾ
ಹಮ್ಮು ಜೀವತ್ವವನು ಪಡೆವುದು
ಹಮ್ಮು ಕರ್ಮದ ಫಲವನುಣಲಲ್ಲಲ್ಲಿ ಜನಿಸುವದು ॥
ಹಮ್ಮಳಿದವರೆನ್ನ ಭಕುತಿಯು
ಧರ್ಮವಲ್ಲದೆ ಬೇರದೇನೂ
ನಿರ್ಮಲದ ಪಥವಿಲ್ಲ ಸಕಲಾಗಮದ ಪಥವೆಂದ ॥ ೨೧ ॥

ನನ್ನೊಳಾದೀ ಲೋಕ ಕಲ್ಪನೆ
ಭಿನ್ನ ಮಹದಾದಿಗಳಹಂಕೃತಿ
ಯನ್ನದಾನೆಂದೆರಡು ಭಾವದಲವನು ಗೆಲುವವರು ॥
ನನ್ನದಿದು ನಾನೆಂಬ ಹಮ್ಮಿನ
ಗನ್ನಗತಕವ ಜರಿದು ಭಕುತಿಯ
ಲೆನ್ನ ಭಜಿಸಲಿಕೆನ್ನ ತತ್ವವ ಪಡೆವರವರಿಂದ ॥ ೨೨ ॥

ಇದು ರಹಸ್ಯವು ಸಾರ ವೇದದ
ಹೃದಯವರಿತ ಮಹಾನುಭಾವರು
ಗೊದವಿ ಹೇಳಿದ ಮಾರ್ಗವೆಂದೆನ್ನು ಶುದ್ಧಮತಿ ನಿನಗೆ ॥
ಮದನುಭಕ್ತಿವಿಹೀನರಿಂಗೆ
ನ್ನದಿರು ದೇವೇಂದ್ರಾದಿ ರಾಜ್ಯದ
ಪದವಿಗಧಿಕವು ಯೋಗ ಸಾರವಿದೆಂದು ಕರುಣಿಸಿದ ॥ ೨೩ ॥

ಕಾಂತೆ ಕೇಳಿದು ಗೌಪ್ಯದೊಳಗ
ತ್ಯಂತ ಗೌಪ್ಯ ಮಹಾಘ ನಿಕರ
ಭ್ರಾಂತಿರಹ ಸುಪವಿತ್ರಕರ ವೇದಾಂತ ಸಂಸಿದ್ಧ ॥
ಸಂತಸದಿ ಶ್ರೀ ರಾಮನೇ ಹನು
ಮಂತಗೆಂದ ವಿವೇಕವಿದ ತಿಳಿ
ವಂತರಂಗದಿ ಪಠಿಸೆ ಪಡೆವರು ಮೋಕ್ಷ ಸಂಪದವ ॥ ೨೪ ॥

ಮಾತೃಪಿತೃವಧೆ ವಿಪ್ರ ಘಾತಕ
ಜಾತಿ ಸಂಕರ ಪರಧನಾಪಹ
ಕೈತವವು ಪರದಾರ ಕೂಟವು ಯೋಗಿಜನ ಬಾಧ ॥
ಪಾತಕವು ಸಹಿತಿದ್ದರೂ ನಿ
ರ್ಧೂತ ಕಲ್ಮಷ ಪೂಜ್ಯ ನೀ ರಘು
ಜಾತ ಚರಿತೆಯ ಹೃದಯಗತವೆನಲೊಲಿದು ಪಠಿಸಿದಡೆ ॥ ೨೫ ॥

ರಾಮ ಭಕುತಿಯ ಸವಿವನೇ ಸು
ತ್ರಾಮರೆಲ್ಲರಲಧಿಕ ಪೂಜ್ಯನು
ರಾಮನನು ಹೊಗಳುವನ ಕುಲಕೋಟಿಗಳು ಪಾವನವು ॥
ರಾಮನಂಘ್ರಿಸ್ಮರಣೆ ಕಾಮಿತ
ಕಾಮಧೇನು ಮುನೀಂದ್ರರಿದ್ದು
ದ್ದಾಮ ಪದವನು ಪಡೆವರೆಂದನು ಶಿವನು ಶಶಿಮುಖಿಗೆ ॥ ೨೬ ॥

ಆಯಿತಿಲ್ಲಿಗೆ ಸಂಧಿ ಯೆರಡಬು
ಜಾಯತಾಂಬಕ ರಾಮ ಚರಿತದಿ
ವಾಯುಪುತ್ರನ ಬೋಧಿಸಿದ ಶತ್ತಿತ್ರ ಪದ ಸಂಖ್ಯೆ ||
ಕಾಯ ಕರ್ಮ ಕಲಾಪ ದೂರನ
ಮಾಯನದ್ವಯ ನಂದ ಸದುಗುರು
ರಾಯ ಸಿರಿ ನಿತ್ಯಾತ್ಮ ಲಕ್ಷ್ಮಿನೃಸಿಂಹ ಸಲಹೆಮ್ಮ || ೨೭ ||

ಅಂತು ಸಂಧಿ ೨ ಕ್ಕೆ ಪದ ೭೪ ಕ್ಕೆ
ಮಂಗಳಮಹಾ ಶ್ರೀ ಶ್ರೀ
ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಮೂರನೆಯ ಸಂಧಿ

## ದೇವತೆಗಳು ನಾರಾಯಣನಲ್ಲಿ ಮೊರೆಯಿಟ್ಟದ್ದು

ಸೂಚನೆ || ರಾವಣಾದಿಗಳಟ್ಟುಳಿಯ ರಾ
ಜೀವ ಸಂಭವ ಮುಖ್ಯರರುಹಲು
ದೇವ ನಾರಾಯಣನು ಸಂತವಿಸಿದನು ಕರುಣವಲಿ ||

ಪದ || ಎಲೆ ಜಗದ್ಗುರುವರನೆ ಸಂಶಯ
ವಳಿದುದೀ ನೀವೆಂದ ಬೋಧೆಯ
ಸುಲಭದಿಂ ಕೃತಕೃತ್ಯೆಯಾದೆನು ಧನ್ಯೆಯೆನಿಸಿದೆನು ||
ಕಳೆದೆನಂತರ್ವ್ಯಥೆಯ ರಾಮನ
ಲಲಿತ ತತ್ವಾಮೃತವ ತನ್ಮುಖ
ಗಳಿತ ಪಾನದಲಾಶೆ ಹಿಂಗದಿದೆಂದಳಾ ಗಿರಿಜೆ || ೧ ||

ಈಗಲೆನಗಭಿವರ್ಣಿಸಿದಿರಾ
ಯೋಗ ಮೂರುತಿ ರಾಮ ಮಹಿಮಾ
ಸಾಗರದಿ ಸಂಕ್ಷೇಪ ಮಾತ್ರವೆ ಮತ್ತೆ ವಿಸ್ತರಿಸಿ ||
ನಾಗಭೂಷಣ ಭಕುತಿ ತೋಷಣ
ರಾಗ ಶೋಷಣ ವ್ಯಕ್ತದಿಂ ಸ್ಫುಟ
ವಾಗಿ ಕರುಣಿಸಬೇಹುದೆನಲೀಶ್ವರ ನಿರೂಪಿಸಿದ || ೨ ||

ಕೇಳು ದೇವಿ ಮಹಾಘ ನಿಕರೋ
ನ್ಮೂಲನೈಕ ಸಮರ್ಥ ಶಾಸ್ತ್ರದ
ಜಾಲದೊಳಗುತ್ತಮದ ಗೌಪ್ಯದಲತಿ ರಹಸ್ಯವನು ||
ಕೇಳಿದೆನು ನಾ ಮುನ್ನ ಪರಮ ಕೃ
ಪಾಳು ರಾಮನ ರಾಮನೇ ತಾ
ಪೇಳಿದನು ಅಧ್ಯಾತ್ಮ ರಾಮಾಯಣ ಮಹಾ ಕಥೆಯ || ೩ ||

ವರ್ಣಿಸಿದನಾ ಕಥೆಯನೊಲಿದಾ
ಕರ್ಣನವ ಮಾಡಿದಡೆ ಕೆಡುವುದು
ವನ್ಹಿಯುಂದದ ತಾಪ ಮಾರಜ್ಞಾನ ತೊಲಗುವದು ||
ಉನ್ನತದ ತಪ ಸಿದ್ಧಿಯಹುದು
ತ್ಪನ್ನ ಪುತ್ರರ ಸಂತತಿಗೆ ಸಂ
ಪನ್ನ ದೀರ್ಘಾಯುಷ್ಯವಾಗಿಷ್ಟಾರ್ಥವಹುದೆಂದ || ೪ ||

ರಾವಣಾದ್ಯರ ಭಾರದಿಂ ಭೂ
ದೇವಿ ಬೆಂದಳವಳಿದು ತಾ ಬಡ
ಗೋವೆನಿಸಿ ಮೈ ನಡುಗಿ ನಿಟ್ಟುಸಿರಿಡುತ ಕಂಪಿಸುತ ||
ದೇವ ಮುನಿಗಣರೊಡನೆ ಹೋದಳು
ತಾವರೆಯ ಮಗನೆಡೆಗೆ ಕಂಗಳ
ತೀವಿದುದಕದಲೆಲ್ಲವನು ಹೇಳಿದಳು ಮೊರೆಯಿಡುತ || ೫ ||

ನೀಚರನು ಗೆಲಲರಿದು ಘಳಿಗೆಯು
ಯೋಚಿಸಿ ಧ್ಯಾನದಲಜನು ಕಾ
ರ್ಯಾಚರಣೆಯನು ತಿಳಿದು ಕ್ಷೀರಾಂಬೋಧಿಯಾ ತಡಿಗೆ ||
ನಾಚದಮರರು ಧರೆ ಸಹಿತ ಸಚ
ರಾಚರಂತರ್ವೇದ್ಯನಜರ ವಿ
ಮೋಚ ಬಂಧನ ಹರಿಗೆ ಬಿನ್ನಹಮಾಡಲೈತಂದ || ೬ ||

ಸ್ತುತಿಸಿದನು ಸಿದ್ಧಾಂತ ನಿರ್ಮಲ
ಶ್ರುತಿ ಪುರಾಣಾಗಮದ ಶಾಸ್ತ್ರ
ಪ್ರತತಿಯಿಂದಗ್ಗದ ಗಳಾಕ್ಷರ ಲುಪ್ತ ವಚನದಲಿ ||
ಪ್ರತಿಯಿಡದ ದೈವದಲಿ ಮುಳುಗಿದ
ಪುತಿಯಲಾನಂದಾಶ್ರುಧಾರಾ
ವ್ರತನಿರಲು ಕರುಣದಲಿ ಮೈದೋರಿದನು ಮುರವೈರಿ ||೭||

ಕಂಡನಿದಿರಲಿ ಹೊಳೆಹೊಳೆವ ಮಾ
ರ್ತಾಂಡಕೋಟಿಪ್ರಭೆಯ ತೇಜದ
ಮಂಡಲಿಯ ಕತ್ತಲೆಯ ಮೂಡಣ ದೆಸೆಯ ಭಾಗದಲಿ ||
ಹಿಂಡು ದೈವದ ದೈವದಿರವನು
ಪುಂಡರೀಕಜ ನೋಡಲಾರದೆ
ಕಂಡನೆಂತೈಕ್ಯದಲಿಯುಳ್ಳದರು ಕಾಣಲಳವಹುದೆ ||೮||

ಇಂದ್ರನೀಲ ನಿಭಾಂಗ ಕಾಂತಿಯ
ಮಂದಹಾಸಾಸ್ಮೇರ ವದನದ
ಕುಂದ ಕುಟ್ಮಳ ದಂತಪಂಕ್ತಿಯ ಪಲ್ಲವಾಧರದ ||
ಚಂದ್ರಕೋಟಿ ಪ್ರಭೆಯ ಮುಕುಟದ
ಗೊಂಡಣದ ರತುನಾಳಿ ಖಚಿತರ
ವಿಂದ ನೇತ್ರದ ಭ್ರೂಲತಾ ರಾಜಿಯಲಿ ರಂಜಿಸಿದ ||೯||

ಮಕರ ಕುಂಡಲ ಕಾಂಡ-ವದನಾ
ಸಿಂದ ಮೌಕ್ತಿಕ ಬಿಂದು ಭಾಳವ
ಚಚಿತ ಕಸ್ತುರಿ ತಿಲಕ ಸುಂಗೊರಳೆಸವ ರೇಖೆಗಳ ||
ಸಕಲರನು ಮೋಹಿಸುವ ಸವಿನುಡಿ
ಯುಕುತ ವಚನದ ಮೃದುಮಧುರ ಸೂ
ಚಕದ ಗುರು ಗಂಭೀರದಿಂದಸುರಾರಿ ರಾಜಿಸಿದ ||೧೦||

ಚಾರು ದೀರ್ಘ ಚತುರ್ಭುಜದ ಕೇ
ಯೂರ ಕಂಕಣ ಬಾಹು ಪುರಿಗಳ
ವೀರಮುದ್ರಿಕೆವೆರಳ ಚಳ್ಳುಗುರ್ಗೊನೆಯ ಸೌಭಗದ ||
ಮಾರನನು ಪೆತ್ತಿರ್ದ ಚೆಲುವಿನ
ಮೂರುತಿಯು ಕರಕಲಿತ ಚಕ್ರೋ
ದಾರ ಶಂಖಗದಾ ಪದುಮ ಶೋಭೆಯಲಿ ರಂಜಿಸಿದ || ೧೧ ||

ಹಾರಹಾರಾವಳಿಯ ಝುಳವಟಿ
ತೋರ ಕೌಸ್ತುಭ ವೈಜಯಂತಿಯ
ಪೇರುರದ ಸಿರಿವತ್ಸಲಾಂಛನ ಗಂಧಲೇಪನದ ||
ಚಾರುಹೇಮ ಬ್ರಹ್ಮಸೂತ್ರದ
ಭೂರಿ ಭುವನದ ಬಸುರ ತ್ರಿವಳಿಯ
ವಾರಿಜದ ದಳದೋಳಿಯೊಪ್ಪುವ ನಾಭಿಯಲಿ ಮೆರೆವ || ೧೨ ||

ಪೀತವಸನಾಲಂಕೃತದ ಸಂ
ವೀತ ಜಘನದ ಭೂರಿ ಭಾಸೆಯ
ನೂತನದ ಮಣಿ ಖಚಿತ ಕಾಂಚೀಧಾಮದೂರುಗಳ ||
ಆತಗರುಡೋಪರಿ ನಿವಿಷ್ಟದ
ಲೋತ ಜಾನುದ್ವಯದ ಜಂಘೆಯ
ಕಾತರದ ಕಣೆಗಾಲ ಖಡೆಯದ ವೀರ ಬಾವುಲಿಯ || ೧೩ ||

ಗರುವ ಕರತಳ ನಿಹಿತ ಹೇಮಾಂ
ಬುರುಹ ನಿಜಪದಯುಗದ ಚೆಲ್ವಿನ
ಬೆರಳದಳದೋಳಿಗಳ ತಳಗತ ಪುಣ್ಯಲಾಂಛನದ ||
ಸಿರಿಯವನಿಯುರು ಕೂಡೆ ಸನಕಾ
ದ್ಯರು ಸುಪಾರ್ಷದ ಸಿದ್ಧ ಸಂಗದ
ಸುರಮುನೀಂದ್ರರ ನಡುವೆಯೊಪ್ಪುವ ದೈವವನು ಕಂಡ || ೧೪ ||

ಸತ್ತಿಗೆಯ ಸಾಲುಗಳ ಚಾಮರ
ದೊತ್ತುಗಳ ಝಲ್ಲರಿ ಪತಾಕಾ
ವೊತ್ತದಣಿಮಾದಿಗಳ ಮಹದೈಶ್ವರ್ಯ ಸಿದ್ಧಿಗಳ ||
ನೃತ್ತ ಗೀತ ಸುವಾದ್ಯ ಗಾಯಕ
ಸತ್ತಮರ ಪಾಠಕರ ಪಾವನ
ಕೀರ್ತಿಯೊಡನೊಡನೋಲಗಿಸಲೊಪ್ಪುವ ವಿಭವವನು ಕಂಡ || ೧೫ ||

ನೋಡಿ ಹರ್ಷಾನಂದ ಜಲ ಕಡೆ
ಗೋಡಿವರಿಯಲು ಕಂಗಳಲಿ ಮಾ
ತಾಡಲರಿದೆನೆ ಗದ್ಗದಾಕ್ಷರದಿಂದ ಸಂಸ್ತುತಿಯ ||
ಮಾಡಿದನು ಕೈಮುಗಿದು ಜಯ ಜಯ
ಗೂಢ ಪ್ರಾಣೇಂದ್ರಿಯ ಮನೋವೃತಿ
ಯಾಡಿಸುವ ಸನ್ಮಾತ್ರ ನಿರ್ಮಲಗಾತ್ರ ಶರಣೆನುತ || ೧೬ ||

ಆರವಶದಲಿ ಮಾಯೆ ಜಗವನು
ಸೇರಿ ಸ್ಥಿತಿಗೈಸುವಳೊ ಹರಿಸುವ
ಳಾರ ನೀ ಮೋಕ್ಷೇಚ್ಛುಗಳು ಹೃದಯದಲಿಯನವರತ ||
ಸಾರಿಚಿಂತಿಸಿ ಕರ್ಮಪಾಶವಿ
ಕಾರವನು ಖಂಡಿಸುವರಾತ್ಮ ವಿ
ಚಾರವಂತರಿಗಾರು ಗತಿಯಾತನನೆ ಮರೆವೊಕ್ಕೆ || ೧೭ ||

ಇಲ್ಲದೀ ಜಗವಳಿವಕಾಲ
ಕ್ಕಿಲ್ಲ ನಿನಗಳಿವಾತ್ಮ ಸುಖರಸ
ದಲ್ಲಿ ಮುಳುಗಿದ ಪಾದಮಹಿಮಂಗೀ ವಿಷಯ ಭೇದ ||
ಎಲ್ಲಿಯದು ನಿನ್ನಮಳ ಸಿರಿಪದ
ಪಲ್ಲವೈಕ ಪರಾಯಣರು ಸೊ
ತೊಲ್ಲರನ್ಯವ ನಿಜಕಥಾಮೃತಪಾನ ತೃಪ್ತಿಯಲಿ || ೧೮ ||

ಶುದ್ಧ ಬುದ್ಧಿಯಲಿನವರತ ಬಿಡ
ದಿದ್ದು ನಿನ್ನನು ಭಜಿಸುತಿಪ್ಪಾ
ಬುದ್ಧಿವಂತರಿಗಪ್ಪ ಸುಖ ಮಿಕ್ಕುಳಿದ ಕರ್ಮದಲಿ ||
ಹೊದ್ದಿದಾಚಾರದಲಿ ಜಪತಪ
ವಧ್ಯಯನ ಮುಖದೇನ ಮಾಡಿಯು
ಶುದ್ಧರಾಗರು ಸುಖದ ಲೇಶವ ಪಡೆಯರವರೆಂದೆ || ೧೯ ||

ನನ್ನ ಚಿತ್ತದ ದೋಷವನು ನಿ
ನ್ನುನ್ನತಾಂಘ್ರಿಯು ಕೆಡಿಸಲತಿ ಸಂ
ಪನ್ನ ಮುನಿಗಳ ಹೃದಯ ಸಾರವೆನಿಪ್ಪ ನಿಮ್ಮಡಿಯ ||
ಮುನ್ನಿನಪರೋಕ್ಷದಲಿ ನೆನನೆನ
ದಿನ್ನವರ ಭಜಿಸಿದೆಸು ಶ್ರುತಿಶಿರ
ರನ್ನವನು ಭಾಪುರರೆ ಧನ್ಯರದಾರು ತನ್ನಂತೆ || ೨೦ ||

ದೇವ ನಿನ್ನುರದಲ್ಲಿರುತ ರಾ
ಜೀವಭವೆ ಮತ್ತಂತೆ ಪದ ತುಳ
ಸೀ ವಿಶಿಷ್ಟದ ಮೂಲೆಯನು ಕಂಡದಕೆ ವತ್ಸರಿಸಿ ||
ವೋವೊ ಸವತಿಯು ಪರಿಯಲಳಲುವ
ಳಾವ ಚೆಲುವೋ ನಿನ್ನ ಪದಯುಗ
ಸೇವೆ ನಿಜಭಕುತರಿಗೆ ಸಿರಿಯಂದಧಿಕ ತರವೆಂದ || ೨೧ ||

ಭಕುತಿಯನೆ ಬಯಸುವರು ನಿರ್ಗುಣ
ಭಕುತರಕು ಸಾರಜ್ಞರದರಿಂ
ಭಕುತಿಯೇ ಸಂಸಾರ ರೋಗಿಗಳಿಂಗೆ ಭೇಷಜವು ||
ಮುಕುತಿನಾಥನೆ ನಿನ್ನ ಸಿರಿಪದ
ಭಕುತಿಯೆಂದೂ ತೊಲಗದಂದದಿ
ಸಕಲರೊಡೆಯನೆ ತನಗೆ ಕರುಣಿಸೆನುತ್ತ ಪೊಡವಂಟ || ೨೨ ||

ಕಾಂತೆ ಕೇಳಿಂತೆನಲು ಲಕ್ಷ್ಮೀ
ಕಾಂತನೆಂದನ ಜಂಗ ದೇನ್ನೈ
ಚಿಂತಿತಾರ್ಥವು ನಿನಗೆಸಲಿಕೆಂದನು ಸರೋಜಭವ ||
ಅಂತರಾತುಮ ನೀನರಿಯ ದಿ
ಗ್ದಂತರವು ಧಿಟಕುಂಟೆ ದೇವರು
ಮುಂತೆ ಹೇಳೆಂಮುದಕೆ ಬಿನ್ನಹವೆಂದನಬುಜಭವ || ೨೩ ||

ರಾವಣನು ಪೌಲಸ್ತ್ಯ ಸಂಭವ
ನಾವಿಗಡ ದಾನವರಿಗೊಡೆಯನು
ಜೀವಜಾತಕೆ ಲೋಕಪಾಲರಿಗೆಲ್ಲ ಕಂಟಕನು ||
ಯೇವೆನದನಾನಿತ್ತ ವರಮುದ
ವಾವರಿಸಿ ಮೂಜಗದ ವೀರರ
ಹೇವ ಹರಿಕರಿಸುತ್ತ ಬಗೆಯನು ತೃಣಕೆ ಸಮವೆನುತ || ೨೪ ||

ಮಾನವರಲಾತಂಗೆ ಮರಣವ
ನಾನೆ ಕಲ್ಪಿಸಿದೊಂದು ಮಂಗಲ
ವೇನ ಹೇಳಲಿ ದೇವ ನೀ ಮನುಜಾವತಾರವಲಿ ||
ದಾನವನ ಗೆಲಿದೀವುದೆಮ್ಮ ಭಿ
ಮಾನ ನಿನ್ನದೆನುತ್ತ ಸರಸಿಜ
ಸೂನು ಬಿನ್ನವಿಸಿದಡೆ ಮುಗುಳಿಂತೆಂದನಸುರಾರಿ || ೨೫ ||

ಆಯಿತೇಳ್ಳೆ ದ್ರುಹಿಣ ಕಾಶ್ಯಪ
ಜಾಯೆ ತಪಸಹದಿಂದ ನನ್ನ
ಪ್ರೀಯವಡಿಸುತ ಬೇಡಿದರು ಮುನ್ನೆನ್ನ ಸುತನಾಗಿ ||
ಕಾಯಬೇಕೆನೆ ಮೆಚ್ಚಿ ಭಕುತಿಯು
ದಾಯಿಗನು ವರವೀಯುಲಾತನು
ರಾಯದಶರಥನಾಗಿ ಧರಣಿಯನಾಳುತಿಹನೀಗ || ೨೬ ||

ಅವನ ಮಗ ನಾನಾಗಿ ಕೌಸಲೆ
ಗವತರಿಸುವೆನು ಶುಭವ ಬೆಳಸುವೆ
ಕವಲು ನಾಲ್ಕೆನಲಾನೆ ಜನಿಸುವೆನಂಜಬೇಡೆಂದು ||
ಭುವನವಂದಿತೆ ಯೋಗಮಾಯೆಯು
ಯುವತಿ ತನಗೆಂದೆನಿಸಿ ಜನಿಸುವ
ಳವನಿಪತಿ ಜನಕನ ಗೃಹದಿ ಸೀತಾ ಸಮಾಖ್ಯೆಯಲಿ || ೨೭ ||

ಮುಂತಣಾಗ್ರದ ಕಾರ್ಯವೆಲ್ಲವ
ಸಂತವಡಿಸುವೆನೆಂದು ಲಕ್ಷ್ಮೀ
ಕಾಂತನಂತರ್ಧಾನದಲಿ ನಿಲಲಜನು ದಿವಿಜರಿಗೆ ||
ಮುಂತೆ ನುಡಿದನು ಕೇಳಿದಿರೆ ಹರಿ
ಯಂತರಂಗವ ರಘುಕುಲದಿ ನಿ
ಶ್ಚಿಂತ ಮಾನುಷನಾಗಿ ಜನಿಸುವನಿಳೆಗೆ ಹಿತವಾಗಿ || ೨೮ ||

ನರನು ನರಹರಿಯುಪ್ಪ ಗಡ ವಾ
ನರರು ನೀವೆಂದೆನಿಸಿಯಂಗದ
ಲರಸು ಭೃತ್ಯರ ಪರಿಯ ಸೇವಾರ್ಥದಲಿ ಭೂತಳದಿ ||
ಹರಿಯಿ ಹನ್ನೆಗವೆಂದು ದಿವಿಜರ
ನೆರವಿಯನು ಸಂತವಿಸಿ ಹೊಕ್ಕಳ
ಹಿರಿಯ ಮಗ ಹರುಷದಲಿ ಹೊಕ್ಕನು ತನ್ನ ಮಂದಿರವ || ೨೯ ||

ಹರಿಯ ಕರುಣವ ಹಾರಿ ದಿವಿಜರು
ಹರಿಗಳಾದರು ಹರಿ ಸಹಾಯಕೆ
ಹರಿಗಳಕ್ಷೋಹಿಣಿಗೆ ಬಲುನಾಯಕರು ತಾವಾಗಿ ||
ಹರಿಯ ಬರವನು ಪರ್ವತಾಗ್ರದಿ
ಹರಿಹರಿದು ಹಾರುತ್ತ ದನುಜರ
ಗಿರಿತರುಗಳೆತ್ತಿಕ್ಕಿ ಮುರಿವ ಮಹಾಪರಾಕ್ರಮರು || ೩೦

ಇತ್ತ ಕೇಳಿಲಿ ಗಿರಿಜೆ ದಶರಥ
ಲತ್ತಲವನಿಯಲರಸೆನಿಸಿ ಘನ
ಸತ್ಯಗುಣನಿಧಿ ಭಾಗ್ಯನಿಧಿ ಮೂಲೋಕ ವಿಶ್ರುತನು ||
ಕೀರ್ತಿಯಲಿ ಶೌರ್ಯದಲಿ ಧೈರ್ಯದ
ಲುಕ್ತ ಸತ್ಕರ್ಮದಲಿ ಧರ್ಮದ
ನುತ್ತಮೋತ್ತಮನಾಗಿ ಪಾಲಿಸಿದನು ಮಹೀತಳವ || ೩೧

ತಕ್ಕಗುಣವೆಲ್ಲುಂಟು ಭೂಪಗೆ
ಮಕ್ಕಳೊಂದೇ ಯಿಲ್ಲವದರಿಂ
ದಕ್ಕಟೆನುತವೆ ಸುಯ್ದು ಚಿಂತಿಸಿ ವರ ವಸಿಷ್ಠನನು ||
ಯಕ್ಕತುಳದಲಿ ಕರೆದು ಚರಣದ
ಲೊಕ್ಕನೊಡಲನು ಸ್ವಾಮಿ ಸದುಗುಣ
ಲಕ್ಷಣಾನ್ವಿತ ಪುತ್ರರೆನಗೆಂತಹರು ಹೇಳೆಂದ || ೩೨ ||

ಚಂದ್ರನಿಲ್ಲದ ರಾತ್ರಿ ಸೇನಾ
ವೃಂದವಿಲ್ಲದ ನೃಪತಿ ಶಾಂತಿಯು
ಲಿಠದವಡೆಯವ ಯೋಗ ಸದುಗುಣವಿಲ್ಲದಾ ವಿದ್ಯೆ ||
ಮುಂದಣಾರಿಯದ ಮಂತ್ರ ಗೋವುಗ
ಳಿಂದ ವಿರಹಿತ ಗೋಷ್ಠವಾ ಪರಿ
ಕಂದನಿಲ್ಲದ ರಾಜ್ಯವಿದರಲ್ಲೇನು ಫಲವೆಂದ || ೩೩ ||

ಎನಲು ನಗುತ ವಸಿಷ್ಠನೆಂದನು
ಜನಪ ಚಿಂತಿಸಬೇಡ ಪುತ್ರರು
ಜನಿಸುವರು ನಾಲ್ವರು ಮಹಾತ್ಮರು ದೇವತೋಪಮರು ||
ಮುನಿಪನೊಬ್ಬನು ಋಷ್ಯಶೃಂಗಾ
ಖ್ಯನು ತಪೋಧನ ಶಾಂತನಾತನ
ನನುವರಿಸಿ ಬರಿಸೀಗಳಂತಿರೆ ಕಾರ್ಯವಹುದೆಂದ || ೩೪ ||

ನಾ ಸಹಿತವೇ ಪುತ್ರಕಾಮೇ
ಷ್ಟೀ ಸಹಾಯವ ಮಾಳ್ಪನೆನೆ ಸಂ
ತೋಷದಲಿ ಶಚಿವರರ ಕಳುಹಿಯನೇಕ ಯತ್ನದಲಿ ||
ಭೂಸುರಾಂತಃಕರಣ ಶುಚಿ ನಿ
ರ್ದೋಷಿಯನು ನೆರೆ ಬರಿಸಿ ಯಾಗದ
ವಿೂಸಲಿನ ಕರ್ಮವನು ಮಾಡಿದರುಕ್ತ ವಿಧಿಗಳಲಿ || ೩೫ ||

ಶ್ರದ್ಧೆಯಿಂ ಮುನಿವರರು ಯಜಿಸಿದ
ರಧ್ವರದ ಕುಂಡದಲಿ ಪಾವಕ
ನೆದ್ದು ಕರದಲಿ ಜಾಂಬುನಪ್ರಭ ಸ್ವರ್ಣ ಪಾತ್ರದಲಿ ||
ಶುದ್ಧ ಪಾಯಸವಿಡಿದವನಲ ಮುಂ
ದಿರ್ದ ನೃಪತಿಗೆ ಕೊಟ್ಟನಿದ ಕೊ
ಳ್ಳಿದ್ವಯನೆ ಮಗನಹನು ಸಂಶಯಬೇಡ ನಿನಗೆಂದ || ೩೬ ||

ಎಂದು ಪಾಯಸವಿತ್ತನಲ ತಾ
ನಿಂದನಂತರ್ಧಾನದಲಿ ನೃಪ
ವಂದಿಸಿದನತಿ ಭಕುತಿಯಿಂ ಮುನಿವರರ ಚರಣದಲಿ ||
ನಿಂದ ಹರ್ಷದಿ ಋಷ್ಯಶೃಂಗ ಮು
ನೀಂದ್ರ ವಾಸಿಷ್ಠರನುಮತದಿಂ
ದಿಂದುಮುಖಿ ಕೌಸಲ್ಯೆ ಕೈಕಾ ಸತಿಯರಿಗೆ ಕೊಟ್ಟ || ೩೭ ||

ಆ ಸಮಯದಿ ಸುಮಿತ್ರೆ ಬಂದಾ
ಗ್ರಾಸವನು ಬೇಡಿದಡೆ ತಮ್ಮ
ಗ್ರಾಸದೊಳಗರ್ಧರ್ಧವನು ಸಪ್ರೇಮದಿಂ ಕೊಡಲು ||
ತೋಷದಿಂ ಮೂವರು ಯಜನ ಚರು
ಶೇಷವನು ಕೊಳಲವನಿಪನ ಮನ
ದಾಸರಡಗಲು ಗರ್ಭ ಹೊರದುದು ಸತಿಯರುದರದಲಿ || ೩೮ ||

ಲೋಕಪತಿಗಳ ಸಲಹಲಜನ
ವ್ಯಾಕುಲವ ಕೆಡೆಯೊದೆಮ ಸುಜನಾ
ನೀಕವನು ಪಾಲಿಸಲು ಧರಣಿಯ ಕಳೆಬ್ಬವ ನಿಗುಚಿ ||
ಏಕನವ್ಯಯನು ಸಮಲನಕ್ರಿಯ
ನಾಕೃತಿಯ ಪ್ರತ್ಯಯನೆನಿಪ ಜಗ
ದೇಕನಾಥನು ಕೌಸಲಾ ಜಠರದಲಿ ರಂಜಿಸಿದ || ೩೯ ||

ಸಕಲ ಲೋಕೇಶ್ವರನು ಸಕಲಾ
ತ್ಮಕನು ಸಕಲಾಧಾರ ಮಾಯಾ
ಶಕುತಿಯಂಗೀಕರಿಸಿ ಸಕಲ ಜಗದ್ಧಿತಾರ್ಥದಲಿ ||
ಮುಕುತಿ ಬಂಧನನಾದ ಪರಮನು
ವ್ಯಕುತವೆನಲರಿವಂತೆ ದಿವ್ಯ
ಪ್ರಕೃತಿ ರೂಪವ ಧರಿಸಿಯವತರಿಸಲಿಕೆ ರಂಜಿಸಿದ || ೪೦ ||

ಸಂಧಿ ಮೂರಿಲ್ಲಿಗೆ ನಿಧಾನದಿ
ಸಂದ ಪದ ನಾಲ್ವತ್ತು ದೇವನು
ಕುಂದನಿದ್ದನು ಕೌಸಲಾ ಜಠರದೊಳಗೆಂಬಲ್ಲಿ ||
ಸಂದು ಸಾಕ್ಷಿತೆ ಹೊರದ ನಿಜನಿ
ರ್ದ್ವಂದ್ವ ನಿರುಪಮನಾದ ಸನ್ನುತ
ಬಂಧುಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹೆಮ್ಮ || ೪೧ ||

ಅಂತು ಸಂಧಿ ೩ ಕ್ಕೆ ಪದ ೧೧೪ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ನಾಲ್ಕನೆಯ ಸಂಧಿ

## ರಾಮ ಲಕ್ಷ್ಮಣ ಭರತ ಶತ್ರುಘ್ನರ ಜನನ ಬಾಲಲೀಲೆ

ಸೂಚನೆ || ಭೂಮಿಪತಿ ದಶರಥಗೊಲಿದು ಶ್ರೀ
ರಾಮ ಲಕ್ಷ್ಮಣ ಭರತ ಶತ್ರು
ಘ್ನಾಮಳರು ಸಹಿತಾಡಿದರು ನಿಜ ಬಾಲಲೀಲೆಗಳ ||

ಪದ || ಗಿರಿಜೆ ಕೇಳಚ್ಯುತನ ಗರ್ಭವ
ಧರಿಸಿದಾ ಕೌಸಲೆಯ ತನು ಸಂ
ಸ್ಫುರಣೆಯದು ಹೊಳಹೊಳದು ಬೆಳಗಿತು ರಾಜಮಂದಿರವ ||
ಸರಸಿಯೊಳಗಣ ರವಿಯೊ ಮೇಘದಿ
ಹೊರದ ಮಿಂಚಿನ ಮಿಡುಕೊ ದರ್ಪಣ
ದೊರೆಯೊಳಿಹ ಸುಜ್ಯೋತಿಯೆಂದೆನಲಿಕೊಪ್ಪಿದಳು ||೧||

ನೋಟಕರು ಬೆರಗಾಗಲಬಳೆಯ
ಮಾಟ ಪಲ್ಲಟಿಸಿತ್ತು ವಿಷಯದ
ಕೋಟಿ ಕೋಟಲೆಯಡಗಿ ಪರಮಾನಂದ ರಸದೊಳಗೆ ||
ನಾಟಿ ಚಿತ್ತವು ಯೋಗ ರಾಜ್ಯದ
ಪೀಠವೇರುವುದಚ್ಚರಿಯೆ ಮಝು
ಕೋಟಿ ಬ್ರಹ್ಮಾಂಡವನು ತಾಳಿದ ಬ್ರಹ್ಮವನು ಧರಿಸಿ ||೨||

ಹತ್ತು ತಿಂಗಳ ಕಳಿಯಲದ್ವಯ
ಪುತ್ರನನು ಪಡೆದಳು ಮೃಗಾಕ್ಷಿ ಸ
ರಿತ್ತಟಾಕಾದಿಗಳು ನಿರ್ಮಲ ಜಲದಲುಕ್ಕುತಿರೆ ||
ಸುತ್ತಲವನಿಯಲಭ್ರದಲಿ ಸ
ದ್ವೃತ್ತವಾಯಿತು ದಿವ್ಯ ಮಂಗಲ
ದತ್ತಲಮರಾಳಿಕ ಸುರಿದರು ಪುಷ್ಪವೃಷ್ಟಿಗಳ || ೩ ||

ಪೂಷದರ್ಕದ ಸಂತ ಋತು ಮಧು
ಮಾಸ ಶುದ್ಧದ ನವಮಿ ಕರ್ಕಟ
ರಾಶಿಗ್ರಹರುಚ್ಚಸ್ಥ ಪಂಚಕದಲಿ ಪುನರ್ವಸಿನ ||
ಆಸುರದ ನಕ್ಷತ್ರ ಶುಭದಿನ
ವಾಸರದಿ ಕೌಸಲೆಗೆ ಜಗತೀ
ವಾಸ ರಾಘವ ಜನಿಸಿದುತ್ತಮ ಪುಣ್ಯತಿಥಿಯಂದು || ೪ ||

ಆ ದಿನದ ಉಪವಾಸ ಪೂಜಾ
ರ್ಘ್ಯಾದಿ ಜಾಗರ ರಾಮ ಚಿಂತಾ
ವಾದ ತನ್ನಾಮಾಮೃತದ ಸಲ್ಲಾಪದಿಂದಿರ್ದು ||
ಭೂ ದಿವಿಜರಿಗೆ ದಾನ ಭೋಜನ
ವಾದಿ ಸತ್ಕಾರಗಳ ಮಾಡಲು
ಸಾಧಿಸಿಷ್ಟಾರ್ಥವನು ಪರದಲಿ ಮುಕುತರಹರೆಂದ || ೫ ||

ಅಲ್ಲಿ ಜನಿಸಿದನಾಗ ಜಗತೀ
ವಲ್ಲಭನು ಸಿರಿರಾಮನಮಳೋ
ತ್ಫುಲ್ಲಲೋಚನದಿಂದ್ರನೀಲನಿಭಾಂಗ ಕಾಂತಿಯಲಿ ||
ಮೊಲ್ಲೆ ಮಲ್ಲಿಗೆಮುರುಬಿಗೆರಗಿದ
ಚೆಲ್ವ ಮರಿದುಂಬಿಗಳ ಬಳಗ ಸ
ಮುಲ್ಲಸಿತ ರವಿ ದಿಪ್ತಿ ಗಣದ ಕಿರೀಟದಿಂದೆಸೆದ || ೬ ||

ನೊಸಲ ತಿಲಕದ ಕುರುಳುಗಳ ಕೆಂ
ಪೆಸೆವ ಕಡೆಗಂಗಳ ಸುನಾಸಿಕ
ನಸುನಗೆಯ ವರ ಕೋಮಲಾಧರ ದಂತ ಪಂಕ್ತಿಗಳ ||
ಮಿಸುಪ ಕುಂಡಲಗಂಡ ಮಂಡಲ
ರಸುಮೆಗಳ ತಾಂಡವವ ಮುನಿಜನ
ವಿಸರ ಕುಮುದ ಶಶಾಂಕ ಮಂಡಲ ವದನದಿಂದೆಸೆವ || ೭ ||

ಕೊರಳ ಮೂರೇಖೆಗಳ ನಾಲುಕು
ಕರದ ಶಂಖಗದಾರಿ ಪದುಮದ
ವರರತುನ ಮುದ್ರಿಕೆಯ ಕಂಕಣ ಬಾಹು ಭೂಷಣವ ||
ಉರದ ತುಳಸೀ ವೈಜಯಂತಿಯು
ಸರದ ಮೌಕ್ತಿಕಹಾರ ಕೌಸ್ತುಭ
ಸಿರಿಯು ಸಿರಿವತ್ಸಾಂಕದಿಂದ ಸುರಾರಿ ರಂಜಿಸಿದ || ೮ ||

ತ್ರಿವಲಿ ವಲ್ಗೂದರದ ನಾಭಿಯ
ಭುವನ ಕೋಟಿಯನಾಂತ ದೊಳ್ಳಿನ
ವಿವರವಾಳ ನಿತಂಬ ಪೀತಾಂಬರ ವಿರಾಜಿತದ ||
ವಿವಿಧ ರಚನಾ ಕೌಶಲದಲೊ
ಪ್ಪುವ ಸುಕಾಂಚೀದಾವು ನೂಪುರ
ರವದ ಖಡೆಯದ ಹಾಹೆದೊಡರುಗಳೆಸೆಯೆ ರಂಜಿಸಿದ || ೯ ||

ಕದಳಿ ಕಾಂಡೋರುಗಳ ದರ್ಪಣ
ದಧಟನಂದದ ಜಾನು ಜಂಘೆಯ
ಪದದ ಗುಲ್ಫದ ಪವಳವೊಳೆವೆರಳುಗಳ ತಳಗತದ ||
ಪದುಮ ಯವ ಝುಷ ಚಕ್ರ ಲಾಂಛನ
ದಮಭುತದ ಪರಮಾತ್ಮರೂಪನ
ಮುದವ ನೀಕ್ಷಿಸಿ ಬೆರಗಿನಿದ್ದಳು ದೇವಿ ಕೌಸಲ್ಯೆ || ೧೦ ||

ಹರುಷ ಗದ್ಗದ ಸ್ವರದಲಂದು
ಬುರುಹಮುಖಿ ನಯನಾಂಬುಪೂರಿತ
ವಪುಷದಲಿ ಮೈ ನೆನೆದು ಕೈಮುಗಿದೆರಗಿ ಭಕುತಿಯಲಿ ||
ತರಳೆ ನುಡಿದಳು ಚಕ್ರಧರದ್ಧೃತ
ಕರನೆ ಪೂರ್ಣ ಪುರಾಣ ಪುರುಷನೆ
ಕರುಣಿ ಪರಮಾತ್ಮಾಚ್ಯುತಾನಂತನೆ ನಮಸ್ತೇಸ್ತು ||೧೧||

ಸತ್ವಗುಣ ಸಂಪನ್ನರಮಳ ಚ
ರಿತ್ರರಿಗೆ ಸುಹಿತರಿಯಲರಿದಹ
ವಸ್ತುನೀ ವಾಙ್ಮತಿಗಳಿಂದ್ರಿಯಗಳಿಗಗೋಚರನು ||
ಅಸ್ತಿ ಮಾತ್ರ ಜ್ಞಾನಮಯನೆಂ
ಬುಕ್ತಿಯ ಶ್ರುತಿ ಹುಸಿಯೆ ಸಂ ವಿ
ತ್ತತ್ತ್ವ ಸಾಕ್ಷಿಯೆ ದೇವ ಶರಣಾಗೆಂದಳಬುಜಾಕ್ಷಿ ||೧೨||

ಲೋಕವನು ಮಾಯೆಯಲಿ ಸೃಜಿಸುವೆ
ಸಾಕಿ ಕಡೆಯಲಿ ಹರಿಸುವೀ ಗುಣ
ಡಾಕೆವಾಳನು ನೀನೆಯಾದಡು ನಿನಗವರ ಗುಣವು ||
ಸೋಕದಚಲ ನಿರೀಹ ನಿಷ್ಕಳ
ನೇಕನಕ್ರಿಯನದ್ವಿತೀಯ ಪಿ
ನಾಕಿ ಹರಿಯಜರೆಂಬ ಸಂಜ್ಞಾಭೇದ ಹೊದ್ದದಿಹೆ ||೧೩||

ಮಾಡಿವಡು ನಿನಗಿಲ್ಲ ಕರ್ತೃತೆ
ನೋಡಿ ನೋಡದೆ ನಡೆವೆ ನಡೆಯದೆ
ಕೂಡೆ ಕೇಳಿಯು ಕೇಳೆ ಸಕಲದೊಳಿದ್ದು ಕಾಣದಿಹೆ ||
ಗೂಢ ಶುಭ್ರಘ್ರಾಣ ಮನವೆಂ
ದಾಡುವ ಶ್ರುತಿ ಬರಿದೆಯರಿಯದ
ಮೂಢನೆಂಬರು ವ್ಯಕ್ತನೆಂದು ವಿಲಾಸವಿಗ್ರಹನ ||೧೪||

ನಿನ್ನುದರದೊಳಗಣುವಿನಂದದ
ಉನ್ನತವ ಬ್ರಹ್ಮಾಂಡ ಕೋಟಿಗ
ಳನ್ನುದರದಲಿ ಜನಿಸಿದ್ದೈ ಮಾಯಾ ವಿಡಂಬದಲಿ ॥
ನಿನ್ನ ಭಕುತರ-ಪಾರವಶ್ಯ ಪ್ರ
ಸನ್ನತೆಯನಾರರಿವರೆಲೆ ಕರು
ಣಾರ್ಣವನೆ ರಘುನಾಥ ಶರಣಾಗೆಂದಳಬುಜಾಕ್ಷಿ ॥ ೧೫ ॥

ಅದ್ಯ ನೀ ಭವಸಾಗರದ ನಡು
ಗದ್ವಯನೆ ಕೈವಿಡಿದು ತೆಗೆ ಪತಿ
ಹೃದ್ಯಧನ ಸುತರೆಂಬ ಕೊಡೆ ಹ್ಯೊಲಿಂದ ತನ್ನುವನು ॥
ಸದ್ಯದಲಿ ಲೋಕವನು ಮೋಹಿಸು
ತಿದ್ದ ಮಾಯೆಗೆ ಮಾರದೆನ್ನೊಳ
ಗಿದ್ದು ನೀನನವರತ ಸಲಹೆಂದಳು ರಮಾಪತಿಗೆ ॥ ೧೬ ॥

ಸಾಕು ನಿಜರೂಪವಿದು ಕಂಗಳ
ನಾಕರಿಸುತಿದೆ ತೇಜ ತೋರಿಸು
ಲೌಕಿಕದ ಕೋಮಲದ ನಾಟಕ ಬಾಲಭಾವವನು ॥
ನೂಕುವೆನು ದುಸ್ತರದ ನಿನ್ನಾ
ಲೋಕ ಲಾಲನ ಪೋಷಣಾದಿಯ
ಲೋಕ ಪರಮಾನಂದ ಸೌಖ್ಯಲೆಪಂದಳಾ ತರಳೆ ॥ ೧೭ ॥

ಎನಲು ನುಡಿದನು ತಾಯೆ ನಿನ್ನಯ
ಮನದ ಬಯಕೆಯನಿತ್ತೆ ನಿನ್ನಯ
ಜನನವನು ಕೇಳಜನು ರಾವಣ ಮುಖ್ಯ ದಾನವರ ॥
ಹನನಕೆನ್ನನು ಬೇಡಲಿಳಿದೆನು
ಮನುಜನಾದೆನು ನಿಮಗೆ ದಶರಥ
ಜನಪತಿಯು ನೀ ಸಹಿತ ಪೂರ್ವದಿ ಚರಿಸಿದಿರಿ ತಪವ ॥ ೧೮ ॥

ಆ ತಪಕೆ ನಾಮೆಚ್ಚಿ ಬೇಡಿದಿ
ರಾ ತುಮನೆ ಮಗನಾಗು ತಮಗೆನೆ
ಜಾತನಾದೆನು ಭಕುತರಿಚ್ಛೆಯು ದೇವ ನಾನಾಗಿ ||
ನೂತನವ ಮದ್ರೂಪವಿದು ವಿ
ಖ್ಯಾತ ರಲ್ಲದೆ ಕಾಣಲರಿಯರು
ಮಾತೆ ಕಂಡಡೆ ದುರ್ಲಭವ ನಿಜಮೋಕ್ಷವೇ ಫಲವು || ೧೯

ನಮ್ಮ ಸಂವಾದ ಸ್ತುತಿಯನೊಲಿ
ದೊಮ್ಮೆ ಕೇಳಲು ಪಠಿಸಲಂತ್ಯದ
ಲೆಮ್ಮನೈದುವರೆನುತ ಬಳಿಕಾ ಸೂತಿಕಾಗೃಹದಿ ||
ರಮ್ಯ ನರಶಿಶುತನವಲೊದರುತ
ಕಾರ್ಮುಗಿಲ ತನುರುಚಿಯ ಶೋಭೆಯ
ರಮ್ಯಣೀಯಕ ಬಾಲಸೂರ್ಯ ಸಮದ್ಯುತಿಯ ಲೆಸೆವ || ೨೦ ||

ಅತ್ತಲಾ ಸಭೆಯೊಳಗೆ ದಶರಥ
ಪುತ್ರನಾದುತ್ಸವವ ಕೇಳುತ
ಹೊತ್ತ ಹರುಷದ ಜಲಧಿಯಲಿ ಮನವಾಡಿ ಮುಳುಗಾಡಿ ||
ಕೃತ್ಯವರಿಯದೆ ಗುರುವಿನಂಘ್ರಿಗೆ
ತೆತ್ತಿಸಿದ ನಿಜಶಿರವನಂಬುಜ
ಪತ್ರಲೋಚನ ರಾಮನೆಡೆಗೈದಿದನು ಗುರು ಸಹಿತ || ೨೧ ||

ಜಾತ ಕರ್ಮವ ಮಾಡಿದನು ಗುರು
ಜಾತನಾದನು ಭರತನಾಗಳೆ
ಯಾ ತಳೋದರಿ ಕೈಕೆಯೆಂಬಳಲಾ ಸುಮಿತ್ರೆಯಲಿ ||
ಖ್ಯಾತ ಲಕ್ಷ್ಮಣ ಶತ್ರುಜಿತರೆಂ
ಬಾತ ರಮಳ ಶಶಾಂಕ ಪೂರ್ಣಕ
ಲಾತಿಶಯದಿಂಮತ್ತರೋತ್ತರವಾಯ್ತು ನೃಪನುದಯ || ೨೨ ||

ಕೊಟ್ಟನಗಣಿತ ಗೋ ಸಹಸ್ರವ
ಸೃಷ್ಟಿಯಮರರ ಕರೆಸಿ ನೃಪನು
ತೃಷ್ಟರತುನ ಸುವರ್ಣರಾಶಿ ಸುವಸ್ತು ಸುರಭಿಗಳ ||
ಪೆಟ್ಟಿಗೆಯು ಭಂಡಾರವನು ಬರು
ಗುಟ್ಟಿದನು ಹರುಷದಲಿ ಸಕಲವ
ನುಟ್ಟು ತೊಟ್ಟುದು ಮಾತ್ರವುಳಿಯಲು ಜಾತಕರ್ಮದಲಿ || ೨೩ ||

ಆ ಮುನಿಪ ಮಾಡಿದನು ಯೋಚಿಸಿ
ನಾಮಕರಣವನೆ ಖಿಳ ಮುನಿಗಳು
ತಾಮಸಾವಿದ್ಯೆಯಸದೀತನ ನೆನೆಹದಲಿ ಗೆಲಿದು ||
ಪ್ರೇಮದಿಂ ಕ್ರೀಡಿಸುವನದರಿಂ
ರಾಮನಾತ್ಮಾನಂದನಾಗಿಯು
ರಾಮನತಿಸೌಂದರ್ಯ ಸುಖನಿಧಿಯಾಗಿಯೂ ರಾಮ || ೨೪ ||

ಭರಿತನಾದುದರಿಂದ ಲೀತನು
ಭರತನೀತನು ಸರ್ವ ಲಕ್ಷಣ
ಕರನೆನಿಸುವದರಿಂದ ಲಕ್ಷ್ಮಣನೀತ ಶತ್ರುಘ್ನ ||
ಒರಸುವನು ಶತ್ರುಗಳನೆಂದೀ
ಪರಿಯನಾಮವ ಕಲ್ಪಿಸಿದನಾ
ವರ ವಸಿಷ್ಠಮುನೀಂದ್ರ ನಿಜದಲನಾಮ ರೂಪರಿಗೆ || ೨೫ ||

ಹೊನ್ನ ತೊಟ್ಟಿಲ ಮೇಲೆ ಮಿಳಿಯಸು
ದಾಮದಲಡಿಯಲೊಪ್ಪುವ
ರನ್ನ ಹಲಗೆಯಲುತ್ತಮಾಂಬರ ಮುಸುಕಿ ಮಲಗಿಸುತ ||
ಚಿನ್ನುಮಯನನು ಪಾಡಿ ತೂಗಿದ
ಳುನ್ನತೋಚ್ಚವದಿಂದಲಾ ಸಂ
ಪನ್ನೆ ಕೌಸಲೆ ದಿಗ್ವಿವರದಘ ಜಾಲ ಹರಿವಂತೆ || ೨೬ ||

ದೇವ ಜೋ ಜೋ ಭಕ್ತಜನ ಸಂ
ಜೀವ ಜೋ ಜೋ ದುರಿತದಟವಿಯ
ದಾವ ಜೋ ಜೋ ಸಕಲ ಸುರರನು ಕಾವ ಜೋ ಜೋ ಜೋ ||
ಜೀವ ಜೋ ಜೋ ತನ್ನ ನಿರುಪವು
ಭಾವ ಜೋ ಜೋ ಮುಕುತಿ ಮಾರ್ಗದ
ಸೋನೆ ಜೋ ಜೋ ಯೆನುತ ಪಾಡಿದಳಂದು ಕೌಸಲ್ಯೆ || ೨೭ ||

ಚಿತ್ತ ಜೋ ಚಿನ್ಮಯದ ತಿರುಳಿನ
ಸತ್ತ ಜೋ ನಿಜಸುಖದ ಮಡುವಿನ
ವರ್ತೆ ಜೋ ವಾಗೀಶ ಮುಖ್ಯಾರಾಧ್ಯ ಜೋ ಜೋ ಜೋ ||
ನಿತ್ಯ ಜೋ ಜನನಾದಿ ರಹಿತ ಚ
ರಿತ್ರ ಜೋ ಜೋ ಸಕಲ ಮುನಿಜನ
ಸುತ್ತ ಜೋಜೋ ಪಾರಿಜಾಕ್ಷ ಮುಕುಂದ ಜೋಜೋಜೋ || ೨೮ ||

[ ಕಂದ ಜೋ ಕಮನೀಯ ಜೋ ಜೋ
ನಂದಜೋ ಗುಣಧಾಮ ಜೋ ಜೋ
ಚಂದ ಜನ ಸಂಸ್ತುತ ರೂಪನೆ ಮುದ್ದು ಜೋ ಜೋ ಜೋ || ]
ಇಂದು ಜೋ ರವಿಕುಲಕುಮುದ ನಿಜ
ಬಂಧು ಜೋ ಸನ್ನುತ ಶರಣ ಸುಖ
ಸಿಂಧು ಜೋ ಜೋ ಯೆನುತ ಪಾಡಿದಳಂದು ರಘುಪತಿಯ || ೨೯ ||

ರಾಮ ಜೋ ಜೋ ಸಕಲ ಭುವನೋ
ದ್ಧಾಮ ಜೋ ಜೋ ದನುಜವಂಶವಿ
ರಾಮ ಜೋ ಜೋ ಭೀಮ ಭಯಹರ ನಾಮ ಜೋ ಜೋ ಜೋ ||
ಸ್ವಾಮಿ ಜೋ ಜೋ ರೂಪ ನಿರ್ಜಿತ
ಕಾಮ ಜೋ ಜೋ ನೀಲಮೇಘ
ಶ್ಯಾಮ ಜೋ ಜೋ ಸೋಮ ಜೋ ಸುಕ್ಷೇಮ ಜೋ ಜೋ ಜೋ||೩೦||

ಹಾರಿ ಜೋ ಜೋ ಭಕುತ ಜನ ಸಂ
ಹಾರಿ ಜೋ ಜೋ ದಶಶಿರಾನ್ವಯ
ಮಾರಿ ಜೋ ಜೋ ಸಕಲಜನಸುದ್ಧಾರಿ ಜೋ ಜೋ ಜೋ ||
ವಾರಿ ಜೋ ವರ ಚಕ್ರ ಶಾರು ಜ
ಧಾರಿ ಜೋ ನಿಗಮಾವಳೀ ನಿ
ಸ್ತಾರಿ ಜೋ ಯೆನುತಬಳಿ ಪಾಡಿದಳಾ ಪರಂದ್ಯುಶಿಯು || ೩೧ ||

ಇಂತು ಪಾಡುತ್ತಬಳೆ ವರ ವೇ
ದಾಂತ ವಿಶ್ರುತ ರಾಮನನು ತ
ನ್ನಂತರಾತ್ಮನೆಂದು ತಿಳಿದರೆ ಬಾಲಲೀಲೆಯನು ||
ಮುಂತೆ ರಾಘವನನುಕರಿಸಿ ಭೂ
ಕಾಂತಯುರ್ಥಿಯು ಸಲಿಸೆ ಲಕ್ಷ್ಮೀ
ಕಾಂತ ಹರಿದಾಡಲಿಕೆ ತೊಡಗಿದನನುಜರೊಡಗೂಡಿ || ೩೨ ||

ರಾಮನೊಡನೈದುವನು ಲಕ್ಷ್ಮಣ
ಭೂಮಿಯಲಿ ಹರಿದಾಡುವಂದೇ
ಪ್ರೇಮದಿಂ ಶತ್ರುಘ್ನನೈದುವನಾ ಭರತನೊಡನೆ ||
ಹೋಮ ಶೇಷದ ಪಾಯಸವನಾ
ಭಾಮೆಯರು ಕೊಟ್ಟಂಶವಾ ಶ್ರೀ
ರಾಮ ಲಕ್ಷ್ಮಣನೊಡನೆ ಲೀಲೆಯಲಾಡಿ ರಂಜಿಸಿದ || ೩೩ ||

ಮುತ್ತು ತೆತ್ತಿಸಿದರಳೆಲೆಯ ಪಣೆ
ಯೊತ್ತಿನಲಿ ಕಮನೀಯ ಕುರುಳುಗ
ಳೊತ್ತರದ ಮರಿದುಂಬಿಯಂದದ ನೀಲ ಕುಂಚಿತದ ||
ಉತ್ತಮದ ಮಾಗಾಯಿ ಕಿರುಗುಳ
ರತ್ನ ಖಚಿತ ಸುವರ್ಣ ಕುಂಡಲ
ಹತ್ತೆಕಟ್ಟಿದ ಹುಲಿಯುಗುರ್ಗಳಿಂದ ರಂಜಿಸಿದ || ೩೪ ||

ಕುಂದಣದ ಸಿರುಗಡಗ ತೋಳ್ಬಳೆ
ಚೆಂದವಾದುಡಿದಾರ ರತುನದ
ಗೊಂದಣದ ಸಿಂಜಾನ ಮಣಿ ಮಂಜೀರ ಶೋಭನದ ||
ಮುಂದುಲಿವ ಕಿರುಗೆಜ್ಜೆ ಘಲಘಲಿ
ಪಂದ್ಯುಗೆಯು ಚಳಚಳಿಪ ನಯನ
ಸ್ಪಂದ ಚುಂಚುಕ ಭಾಷಿತದ ಕಿರುನಗೆಗಳಿಂದೆಸೆದ || ೩೫ ||

ನಗುವ ನೆಗಪುವ ತಾಯ ಹಸ್ತ
ಕ್ಕಗಿವ ನಿಲುಕುವ ಬೆರಳ ತೋರುವ
ಜಗುಳಿ ಜೋಲುವ ಬಾಯ ಕಿವಿಮೂಗಿಸಲಿ ಕಯ್ಯಿಡುವ ||
ಉಗಿವ ಹಾರುವ ಕೆನ್ನೆಗೆರಗುವ
ಮಗುಚಿಯ್ಯುರುಳುವ ತೊಲೆಗೆ ಜೋಲುವ
ಬಗೆವನುಗುಳ್ಳುವ ಪಾಲ ಕಟವಾಯಿಂದ ಸಿರಿ ರಾಮ || ೩೬ ||

ಪರಿವಸಂಕಣದಿಂದೆ ಬೆಂಕಿಗೆ
ಮರಳಿ ತಂದಡೆ ಮತ್ತೆ ಹೋಗುವ
ಮುರಿಪುರಿರುಗಳ ಜಗಲಿಯಲಿ ಜಾರೂರಿ ಬಸವಳಿವ ||
ಹೊರಳಿ ಹೊಂಗುವ ಕಂಡು ಕಂಡುವ
ಕರದಿನುಂಗುವ ರಾಮಚಂದ್ರನ
ತರಹರಿಸಲಳವಲ್ಲದಾಯಿತು ತಾಯಿ ಕೌಸಲೆಗೆ || ೩೭ ||

ಹರಿಹರಿದು ಮುಂದ್ಯೆದಿ ಹಮ್ಮನೆ
ಹರಿಮ ತೆಕ್ಕನೆ ತಿರುಗಿ ತಮ್ಮನ
ಕರೆಮು ಕರವಲಿ ಪಿಡಿದು ಮೊಗವನು ತನ್ನ ಮೊಗಕೊಡ್ಡಿ ||
ಮರಳಿ ನೂಕುತ ಮತ್ತೆ ಕರೆವುತ
ಭರದಲೆಳೆವುತ ತಾಯ ನೋಡುತ
ನರಶಿಶುಗಳಂದದಲಿ ನಾರಾಯಣ ನಟಿಸುತಿರ್ದ || ೩೮ ||

ಆಗ ಕಂಪಾ ತಾಯಿತಂದೆಯ
ರಾಗಪುವನಾಟವನು ಮರೆವರು
ಯೋಗಿಗಳವೋಲಖಿಳ ವಿಷಯನಾತ್ಮ ಸುಖವೈದಿ ||
ರೋಗಿಗಳು ಸಹ ಕೇಳಿ ದುಃಖವ
ನೀಗುವರು ತನ್ನಾಮ ಮಾತ್ರದಿ
ಮೇಗರೆಯ ನಾಟಕವೆ ಶ್ರೀ ರಘುರಾಮ ಚಾರಿತ್ರ || ೩೯ ||

ಒಂದುದಿನ ನೃಪನೂಟ ವೇಳೆಯ
ಲಿಂದುಮುಖಿ ಕೌಸಲೆಗೆ ಕರತಾ
ಕಂದನಾವೆಡೆ ಹಸಿದನೆನ್ನ ಪ್ರಾಣನಾಯಕನು ||
ಯೆಂದು ಕಳುಪಲು ಹೊರಗೆ ಬಾಲರ
ವೃಂದದೊಡನಾಡುತಿರಲತಿ ಮುದ
ದಿಂದ ಕರೆದಳು ನೋಡಿ ಬಾಲಕ್ರೀಡನಾಕೃತಿಯ || ೪೦ ||

ರಾಮ ಬಾರೆನ್ನರಸ ಬಾ ಶುಭ
ನಾಮ ಬಾ ಚಿದ್ವ್ಯೋಮ ಬಾ ಸು
ಕ್ಷೇಮ ಬಾ ನಿಸ್ಸೀಮ ಬಾರಾನಂದನಿಧಿ ಬಾರೈ ||
ಪ್ರೇಮ ಬಾ ಸುರಧಾಮ ಬಾ ಭವ
ಭೀಮ ಬಾ ಯೆನ್ನರಸ ಬಾ ಯೆಂ
ದಾ ಮಹಿಳೆ ಕರೆಯುತ್ತ ಬರೆಬರೆ ಮರೆಗೆ ಸಾರಿದನು || ೪೧ ||

ಮುಟ್ಟಿ ಕರೆತಹೆನೆನುತ ಬರೆ ಹಿಂ
ಮೆಟ್ಟಿ ಪುಲ್ಲನೆಯೋಡಿದನು ಬೆ
ನ್ನಟ್ಟಿದಳು ನಿಲ್ಲೆನುತ ಯೋಗಿಮನಂಗಳಾವನನು ||
ಮುಟ್ಟಲರಿಯದಪಾರ ಮಹಿಮನ
ಮುಟ್ಟಲರಿವಳೆ ಬಳಿಕ ತಾನಿದಿ
ರಿಟ್ಟು ನಿಂತನು ನಗುತ ಪಂಕಾಂಕಿತದ ಹಸ್ತದಲಿ || ೪೨ ||

ಹಸ್ತವನು ತೊಳೆದೈದಿ ಕರಿತಂ
ದುತ್ತಮಾನ್ನವನೂಡಲೊಂದೇ
ತುತ್ತು ಮಾತ್ರವ ಕೊಳುತ ಬಿಟ್ಟೋಡಿವನು ಮಹಿಲದಲಿ ||
ಮತ್ತೆ ಕರೆತಂದೂಡಿ ವಿಮಲ ಸು
ವಸ್ತ್ರಭೂಷಣ ಗಂಧ ಕಸ್ತುರಿ
ಮುತ್ತು ಮಾಣಿಕದಿಂದಲಂಕರಿಸಿದಳು ಚಿನುಮಯನ || ೪೩ ||

ರಾಮ ಬಾಯೆನೆ ಬಪ್ಪನೇಳ್ಳೆ
ರಾಮ ಕುಣಿದಾಡೆನಲು ಕುಣಿವನು
ರಾಮ ಮಾತಾಡೆನಲು ಸವಿ ಸುಸ್ವರಗಳಿಂ ನುಡಿವ ||
ರಾಮನಪ್ಪಪ್ಪೆಂದಡಪ್ಪುವ
ನಾ ಮಹಿಳೆ ದಶರಥನ ಸೌಖ್ಯದ
ಸೀಮೆಯೆಂತುಟೊ ಬಲ್ಲರಾರೆಲೆ ಗಿರಿಜೆ ಕೇಳೆಂದ || ೪೪ ||

ಈ ಪರಿಯ ಬಹು ಬಾಲಲೀಲೆಯ
ನಾ ಪರಮಸದ್ವಯುಸಜನು ನಿ
ರ್ಲೇಪನಾಡುತಯೋಧ್ಯೆಯಲಿ ಮಾನವನೊ ಯೆಂಬಂತೆ ||
ಕಾ ಪುರುಷರಿಗೆ ತಿಳಿವ ದಿವ್ಯ ಮ
ಹಾಪುರುಷರಿಗೆ ದಿವ್ಯ ಪಚ್ಚೆ
ದ್ವೀಪನಾಗಿರೆ ಕಳೆದುದಾ ಪೌಗಂಡ ಕೈಶೋರ || ೪೫ ||

ವರ ಕುಮಾರಾವಸ್ಥೆ ಮೇಲಂ
ಕುರಿಸೆಯಾನೃಪನಾ ವಸಿಷ್ಠನ
ಬರಿಸಿಯುಪನಯನಾದಿ ವಿದ್ಯಾಭ್ಯಾಸವನು ಕಲಿಸಿ ||
ಪರಿಪರಿಯ ಸರ್ವಜ್ಞ ಶಾಸ್ತ್ರದ
ಉರು ಧನುರ್ವೇದಾಸ್ತ್ರ ಶಸ್ತ್ರದ
ಪರಮ ಸಾರವನೆಲ್ಲವರಿತರು ರಾಮ ಲಕ್ಷ್ಮಣರು || ೪೬ ||

ಅನವರತವೂ ಸೇವ್ಯ ಸೇವಕ
ನೆನಿಸಿ ರಾಮನ ಬಿಡನು ಲಕ್ಷುಮಣ
ನನುಪಮನು ಶತ್ರುಘ್ನನಾಪರಿ ಭರತನನು ಬಿಡನು ||
ಧನು ಶರವ ತೂಣೀರವನು ಕೊಂ
ಡನುಜ ಸಹಿತೊಂದು ದಿನ ರಾಘವ
ಘನ ತುರಂಗವನೇರಿ ಬೇಂಟೆಗೆ ಕಾನನಕೆ ನಡೆವ || ೪೭ ||

ಕೊಂದು ಬಹಳ ಕ್ಷುದ್ರ ಮೃಗವನು
ತಂದು ತಂದೆಗೆ ವೊಪ್ಪಿಸಿದ ನರ
ವಿಂದಲೋಚನನಿಂತಿರುತ ದಿನದಿನವಲುವಯುವಲಿ ||
ಮಿಂದು ಶುಚಿಯುಹ ನಿತ್ಯ ಶುದ್ಧನು
ತಂದೆ ತಾಯಿಗೆ ಗುರುಹಿರಿಯರಿಗೆ
ವಂದಿಸುತ ಗೋವಿಪ್ರತಿಥಿ ಸತ್ಕಾರವನು ಮಾಳ್ಪ || ೪೮ ||

ಪೌರಕಾರ್ಯವನೆಲ್ಲ ವಿನಯದ
ಲಾರಯಿದು ನಿಜಬಂಧು ಜನಸಹಿ
ತೋರಣದಿ ಕುಳಿತುಂಡು ಸಭೆಯುಲಿ ಮುನಿಗಳೊಡಗೂಡಿ ||
ಸಾರ ಶಾಸ್ತ್ರ ರಹಸ್ಯ ಧರ್ಮ ವಿ
ಚಾರವನು ಮಾಡುವನದೀಪರಿ
ಯಾಳುಬಲ್ಲನು ಪರಮಪುರುಷನ ಲೋಕ ಸಂಗ್ರಹವ || ೪೯ ||

ಲೋಕವನುಸರಣೆಯಲಿ ಮಾನುಷ
ನಾ ಕೃತಿಯನಜ್ಞರಿಗೆ ಕಾಂಬನ
ನೇಕ ಪರಿಪರಿ ನಾಮ ಹೀನ ವಿಕಾರಿಯಂದದಲಿ ||
ಏಕನದ್ವಯನೇನ ಮಾಡನು
ಸೋಕನಕ್ರಿಯ ಬಲ್ಲವರಿಗೆಲೆ
ಲೋಕವಂದಿತೆ ಗಿರಿಜೆ ಕೇಳೆಂದನು ಮಹೇಶ್ವರನು || ೫೦ ||

ದೇವ ಸಂಖ್ಯೆಯ ಸಂಧಿಯಲಿ ಪದ
ವಾದವೈವತ್ತೊಂದು ಕೇಳಿದ
ಡೋದಿದಡೆ ಭವಬಂಧಹರ ಸರ್ವಾರ್ಥ ಸಿದ್ಧಿಕರ ||
ವಾದದೂರ ನಿರೀಹ ನಿಷ್ಕಳ
ಬೋಧರೂಪ ನಿರಾಳ ಕರುಣಾಂ
ಬೋಧಿ ಗುರುನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹೆಮ್ಮ || ೫೧ ||

ಅಂತು ಸಂಧಿ ೪ ಕ್ಕೆ ಪದ ೧೬೬ ಕ್ಕೆ
ಮಂಗಳಾಮಹಾ ಶ್ರೀ ಶ್ರೀ ಶ್ರೀ
ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಐದನೆಯ ಸಂಧಿ

## ವಿಶ್ವಾಮಿತ್ರರ ಯಜ್ಞರಕ್ಷಣೆ ರಾಕ್ಷಸರ ಸಂಹಾರ

ಸೂಚನೆ || ಸತ್ರ ರಕ್ಷಾರ್ಥದಲ್ಲಿ ವಿಶ್ವಾ
ಮಿತ್ರ ಬರೆ ಮುನಿ ನೃಪನ ತಿಳುಹಿ ಪ
ವಿತ್ರ ಕೀರ್ತಿಯ ಕಳುಹೆ ರಾಘವ ದನುಜರನು ಗೆಲಿದ ||

ಪದ || ಒಂದು ದಿನ ಕೌಶಿಕನಯೋಧ್ಯೆಗೆ
ಬಂದನನಲಪ್ರಭನು ದೇವ ಮು
ಕುಂದನಾ ಶ್ರೀರಾಮನಾದುದನರಿತು ಕಾಣಲಿಕೆ ||
ಅಂದದನು ಕಾಣುತ್ತ ದಶರಥ
ಮುಂದೆ ಗುರುಸಹಿತಿದಿರುಗೊಂಡಾ
ನಂದ ಸತ್ಕಾರೋಪಚಾರವ ಮಾಡಿ ಮನ್ನಿಸಿದ ||೧||

ಶಿವಗೆರಗಿ ಕೈಮುಗಿದು ಭಕುತಿಯ
ಲರಸನೆಂದನು ಮುನಿಪ ನಿಸ್ಮಯ
ಬರವಿನಲಿ ಕೃತಕೃತ್ಯನಾದೆನು ನನ್ನ ಮೇಲೊಲಿದು ||
ಕರುಣೆ ಬಿಜಯಂಗೈದೆ ಸಾಕ್ಷಾ
ತ್ಪರಮಪುರುಷನನರಿತ ಹಿರಿಯರ
ಬರವು ಗೃಹಿಗಳಿಗಖಿಳ ಸಂಪತ್ಸಿದ್ಧಿಕರವೆಂದ ||೨||

ದಾನ ಫಲ ತಪ ಸತ್ಯಯಾಗ ವಿ
ಧಾನ ಫಲ ಜಪ ಮಂತ್ರ ತೀರ್ಥ
ಸ್ನಾನ ಫಲ ವೇದಾರ್ಚನಾಗಮ ವೇದ ಪಾಠ ಫಲ ||
ಮೌನ ಫಲ ಸತ್ಕರ್ಮ ಮಾರ್ಗ ವಿ
ಧಾನ ಫಲವಷ್ಟಾಂಗ ಯೋಗ
ಧ್ಯಾನ ಫಲ ಸಹಿತಹುದು ಸಾಧು ಸಮಾಗಮದಲೆಂದ || ೩ ||

ಬಲ್ಲ ಹಿರಿಯರದಾವೆಡೆಯಲಿಹ
ರಲ್ಲಿ ತೀರ್ಥ ಕ್ಷೇತ್ರವವರೀ
ಸಿಲ್ಲಮುತ್ತಮ ಗತಿಗೆ ಕಾರಣ ವರಮಹಾಲಕ್ಷ್ಮಿ ||
ಅಲ್ಲಿಹಳು ಸಂದೇಹವೇಕೆ
ಮ್ಮಲ್ಲಿಗೇನು ನಿಮಿತ್ತ ಬಂದಿರ
ದಿಲ್ಲಿ ಕರುಣಿಸು ಮುನಿಪ ಸತ್ಯವು ಮಾಳ್ಪೆ ನಾನೆಂದ || ೪ ||

ಎನಲಿಕತಿ ಹರುಷದಲಿ ಕೌಶಿಕ
ಮುನಿಪನೆಂದನು ನಾನು ಪರ್ವಣಿ
ದಿನದಿ ಸುರಪಿತೃ ತುಷ್ಟಿಕರ ಯಾಗವನು ಮಾಡುತಿರೆ ||
ದನುಜ ಮಾರೀಚನು ಸುಬಾಹುಗ
ಳನುಚರರು ಸಹವವಕೆ ವಿಘ್ನದ
ಲನಿತುವನು ಕೆಡಿಸಿದರು ಪಾಪಿಗಳಧ್ವರವನೆಂದ || ೫ ||

ಅವರ ವಧಿಸಲು ಬೇಡಬಂದೆನು
ತವಕುಮಾರ ಜ್ಯೇಷ್ಠ ರಾಮನ
ನವನನುಜ ಲಕ್ಷ್ಮಣ ಸಹಿತ ನಿನಗಖಿಳ ಸಂಪದವು ||
ಭವಿಸುವುದು ಯೋಚಿಸು ವಸಿಷ್ಠನ
ವಿವರದಲ್ಲೆನೆ ಕೇಳಿ ಚಿಂತಿಸಿ
ಶಿವಯೆನುತ್ತೇಕಾಂತದಲ್ಲಿ ವಸಿಷ್ಠಗಿಂತೆಂದ || ೬ ||



ರಾಮ ಲಕ್ಷ್ಮಣರನ್ನು
ವಿಶ್ವಾಮಿತ್ರರಿಂಗೆ ಒಪ್ಪಿಸಿದ್ದು



ಶಿವಧನುರ್ಭಂಗ

ಏನ ಮಾಡಲಿ ಗುಹ್ಯವೆ ರಾಮನ
ನಾಮ ಕಳುಹುವೆನೆಂತು ಕಳಿದೆನ
ನೂನ ಬಹು ಸಾಹಸ್ರವರ್ಷವ ಪುತ್ರನಾಗಿರ್ದು ||
ಮಾನವಹ ಯತ್ನದಲಿ ಯಮುನ ಸ
ಮಾನರಾದರು ನಾಲ್ವರವರಿಗು
ತಾನಧಿಕ ದುರ್ಲಭನು ರಾಘವನೆಂದನಾ ಭೂಪ || ೭ ||

ಇಂದು ರಾಮನ ಕಳುಹಿ ಜೀವಿಸು
ವಂದವೆನಗಿಲ್ಲಳುಪಿ ಕಳುಹದ
ಡೊಂದೆ ನಿಮಿಷದಲುರುಹಿ ಕಳೆವನು ಮುನಿಪನುರೆ ಶಪಿಸಿ ||
ಸಂದೆಹವೆ ನೀವೆಲ್ಲ ಬಲ್ಲಿರಿ
ಕುಂದು ಸತ್ಯಕೆ ಬಾರದಂದದಿ
ಮುಂದೆ ಶ್ರೇಯವಪ್ಪಾವುದೆನಗದ ಕರುಣಿಸುವುದೆಂದ || ೮ ||

ಎಂದಡೆಂದನು ಮುನಿಪ ಕೇಳಿ
ನ್ನೊಂದು ಗೌಪ್ಯದಲತಿ ರಹಸ್ಯವ
ನೆಂದವೆನು ಸಿರಿರಾಮ ಮಾನವನಲ್ಲ ಗಡ ನಿನಗೆ ||
ಬಂದು ಜನಿಸಿದನಾದಿ ವಿಷ್ಣು ಮು
ಕುಂದನೀ ಕೌಸಲೆಗೆ ಮುನ್ನರ
ವಿಂದಭವ ಬೇಡಿದಡೆ ಭೂಮಿಯ ಹೊರೆಯನಿಳುಹಲಿಕೆ || ೯ ||

ನೀನು ಪೂರ್ವದಿ ಕಾಶ್ಯಪಾಂಶಯ
ನಾನವಬ್ರಹ್ಮನ ಮಗನು ನಿ
ನ್ನೀನಿತಂಬಿನಿ ದೇವಮಾತೆ ಮಹಾವನಿತೆಯದಿತಿ ||
ಜ್ಞಾನ ಮೂರುತಿ ವಿಷ್ಣು ಪೂಜಾ
ಧ್ಯಾನದಿಂ ಬಹುವರ್ಷತಪದ
ಧ್ಯಾನದುಗ್ರತೆಯಿಂದ ಭಜಿಸಿದಿರಳಿದು ವಿಷಯಗಳ || ೧೦ ||

ಮೆಚ್ಚಿದನು ಹರಿ ಬಂದು ವರವನು
ಸಚ್ಚರಿತ್ರರ ಬೇಡಿಯೆಂದೆನ
ಲುಚ್ಚರಿಸಿದಿರಿ ದೇವ ನಿಮಗಾನಾಗಬೇಕೆಂದು ||
ನಚ್ಚಿನರಿರಾಗಲಿ ಯೆನುತ್ತಾವಿ
ಳೀಚ್ಛಕನು ಸಲಿಸಿದನದಕ್ಕಿಂ
ದಚ್ಯುತನು ಮಗನಾದ ನೀ ರಾಮಾಖ್ಯೆಯಲಿ ನಿಮಗೆ || ೧೧ ||

ಲಕ್ಷ್ಮಣನೆ ತಾ ಶೇಷ ಭರತನ
ಧೋಕ್ಷಜನ ನಿಜಶಂಖ ದುಷ್ಟರ
ಶಿಕ್ಷಿಸುವ ಚಕ್ರವು ಕಣಾ ಶತ್ರುಘ್ನನೆಂಬವನು ||
ಅಕ್ಷಯನ ವರಯೋಗಮಾಯೆ ಸ
ಲಕ್ಷಣಾನ್ವಿತೆ ಸೀತೆ ಜನಕನ
ರಕ್ಷೆಯಿಂ ಲಾಲನದಲಿಹಳಿಂತರಿತುಕೊಳ್ಳೆಂದ || ೧೨ ||

ಇದನು ಹೇಳದಿರಾರಿಗಾದಡು
ಸದಮಳನೆ ಬಲುಗೌಪ್ಯ ಸಾಕ್ಷಾತ್
ಚಿದುಘನಾನಂದಾತ್ಮನೇ ರಘುನಾಥನೆಂದರಿದು ||
ಮುದದಿ ವಿಶ್ವಾಮಿತ್ರಯಂಗಾ
ಭ್ಯುದಯಕೀ ರಾಘವನ ಕರವನು
ಉದನವೀಪರಿ ತಿಳಿಯೆನುತ್ತಾ ವಸಿಷ್ಠ ವರ್ಣಿಸಿದ || ೧೩ ||

ಎಂದಡತಿ ಹರುಷದಲಿ ಮುನಿನುಡಿ
ಯಿಂದ ಕೇಳಿ ನಮಃ ಶಿವಾಯ ಮು
ಕುಂದನೇ ಶ್ರೀರಾಮನಾದನೆ ಭಾಪು ತನ್ನಂತೆ ||
ಸಂದ ಸುಕೃತಿಗಳಾರು ಕಳುಹುವೆ
ನಿಂದೆ ರಾಮನ ಲಕ್ಷ್ಮಣನ ಸಹಿ
ತೆಂದು ಕೌಶಿಕ ಮುನಿಯ ಪೂಜಿಸಿದನು ಸರಾಗದಲಿ || ೧೪ ||

ರಾಮ ಬಾ ಯೆನ್ನಯ್ಯ ಬಾ ಸು
ಕ್ಷೇಮ ಬಾ ಗುಣನಿಧಿಯೆ ಲಕ್ಷ್ಮಣ
ನಾವು ಬಾಯೆನುತಪ್ಪಿ ಮೂರ್ಧಾಘ್ರಾಣವನು ಮಾಡಿ ||
ರೋಮ-ಹರುಷಾನಂದ ಜಲವೊಗ
ಲಾ ಮುನಿಪ ಕೌಶಿಕಗೆ ಕೊಟ್ಟನು
ಕ್ಷೇಮನಿಮ್ಮದೆಸೆತ್ತ ನೆರೆ ಮೂಲೋಕ ರಕ್ಷಕರ || ೧೫ ||

ಬಳಿಕ ಮುನಿಯಾನಂದ ರಸದಲಿ
ಮುಳುಗಿಯಾಶೀರ್ವಚನ ಪೂರ್ವಕ
ದೊಲವಿನಿಂ ಹರಸುತ್ತ ಕಳುಹಿಸಿಕೊಂಡು ಭೂಪನಲಿ ||
ಬಲಯುತರು ಸೌಮಿತ್ರ ರಾಮರು
ಬಳಿಯುಲೈದಿದನಾ ಮುನೀಂದ್ರನ
ಕೆಳೆಯರಸಿ ತೂಣೀರ ಶರಚಾಪವನು ನೆರೆ ಧರಿಸಿ || ೧೬ ||

ಅತ್ತಲಮಳ ಸಮಾಧಿಯಲಿ ಸ
ದ್ವೃತ್ತರಯ್ದಲು ನೆರೆಯುರರಿಯರು
ಕಿತ್ತಲೀ ಮುನಿವರನ ಬೆಂಬಳಿ ನೋಡಿ ನಡೆವ ಗಡ ||
ಅತ್ತಲೊರಲುವ ವೇದನಾಲಗೆ
ಹತ್ತಿಹುದುಹೆಡತಲೆಯನಿತ್ತಲು
ಚಿತ್ತವಿಸು ಮುನಿರಾಯ ಬೆಸಸೇನೆಂಬನಡಿಗಡಿಗೆ || ೧೭ ||

ಆವ ಕರುಣಾನಿಧಿಯೊ ರಾಘವ
ನಾವ ಮಹಿಮಾ ಮೂರ್ತಿಯೋ ರಾ
ಜೀವಲೋಚನನಾವ ಭಕ್ತಾಭೀಷ್ಟದಾಯಕನೊ ||
ದೇವ ದೇವರಿಗೆಲ್ಲ ತಾನೇ
ದೇವ ಗಡ ನಿಜ ಭಕುತ ಮುನಿಯನು
ಸೇವಿಸುವ ಮಾಯಾವಿನೋದವನರಿವರಾರೆಂದ || ೧೮ ||

ಕೆಲವು ದೇಶವ ಕಳೆದು ಭಕುತಿಯು
ಲಲಘು ಮಹಿಮರು ಬರಲು ಕೊಟ್ಟನು
ಚೆಲುವ ವಿದ್ಯೆಯನೆರಡ ಬಲವತಿಬಲವೆನಿಪ್ಪುದನು ||
ಒಲಿದು ಗ್ರಹಿಸಲು ಹಸಿವು ತೃಷೆಗಳ
ಗೆಲುವ ಸತ್ವವದೆನೆವ ವಿದ್ಯೆಯ
ಬಳಿಕ ಗಂಗೆಯು ಕಳೆದು ಹೊಕ್ಕರದೊಂದು ಕಾನನವ || ೧೯ ||

ಇತ್ತಲಿದೆಯಿದೆ ರಾಮ ನೋಡೈ
ಸತ್ವಗುಣವಾರಿಧಿಯೆ ರೂಪದಿ
ಮೃತ್ಯು ಬಾಯ್ದೆರೆದಂತೆ ತಾಟಕಿಯೆಂಬ ದಾನವಿಯು ||
ಉತ್ತಮದ ರೂಪದಲಿ ಲೋಕವ
ತುತ್ತುಗೊಂಬಳು ಬೇಗ ಕೆಡಹೆನ
ಲಿತ್ತವನು ತಿರುವಿಂಗೆ ತಿಬ್ಬನು ವೀರ ರಘುರಾಯ || ೨೦ ||

ತಿಬ್ಬನೊವರಿಸಲಾ ಮಹಾಧ್ವನಿ
ಹಬ್ಬಿತಾ ವನದೊಳಗೆ ಕೇಳುತ
ಗಬ್ಬಿ ತಾಟಕಿ ಘೋರರೂಪಿಣಿ ಬಂದಳಾಕ್ಷಣಕೆ ||
ಮಬ್ಬಿನಿಂದಾ ಕ್ರೋಧಮೂರ್ಚ್ಛಿತೆ
ಸರ್ಬಗತಗಿದಿರಾಗೆ ಸರಸ್ತು
ತುಬ್ಬಿಬಿಡೆ ಹೇರೊಡಲ ಹೊಕ್ಕಿತು ಮುಗಿಲ ರವಿಯಂತೆ || ೨೧ ||

ಕಾರಿದಳು ರಕುತವನು ವನವನು
ಚಾರಿವರಿವುತ ಬಿದ್ದಳಾಗಳೆ
ನಾರಿಯತಿ ಸೌಂದರ್ಯ ಸರ್ವಾಭರಣ ಸಂಪನ್ನೆ ||
ಚಾರುಮುಕ್ತಿಣಿಯಾಗಿ ಶಾಪವು
ತೀರಿ ಬಲಬಂದೆರಗಿ ರಾಮನ
ಪಾವಕರುಣದಿ ದಿವಕೆ ನಡೆದಳನುಜ್ಞೆಯನು ಪಡೆದು || ೨೨ ||

ಅಪ್ಪಿದನು ಮುನಿನಾಥ ರಾಮನ
ನೊಪ್ಪ ಮೂರ್ಧಾಘ್ರಾಣಗೈವುತ
ತೆಪ್ಪವಾದನು ಪರಮ ಹರ್ಷಾನಂದ ವಾರಿಧಿಗೆ ||
ತಪ್ಪದಂದದಿ ಸಕಲ ಶಾಸ್ತ್ರವ
ನುಪ್ಪರದ ಬಹುಮಂತ್ರ ನಿಕರವ
ನೊಪ್ಪಿಸಿದನಾ ರಾಮಚಂದ್ರಗೆ ಸುಖಸುಸಾಂದ್ರಂಗೆ || ೨೩ ||

ಅಲ್ಲಿ ಕಾಮ್ಯಾಶ್ರಮ ಸುರಮ್ಯ ಸ
ಮುಲ್ಲಸಿತಮುನಿನಿಕರ ದೊಡನಾ
ಫುಲ್ಲವೃಕ ರಾತ್ರಿಯನು ಕಳಿದಾ ಮರುದಿವಸ ಬಳಿಕ ||
ಮೆಲ್ಲನಾ ಸಿದ್ಧಾಶ್ರಮಕೆ ನಡೆ
ದಲ್ಲಿ ಸಿದ್ಧಗಣೌಘ ಸೇವ್ಯವ
ದೆಲ್ಲವನು ಪೂಜಿಸುತನುಜ ಸಹಿತಿರ್ದನಾ ರಾಮ || ೨೪ ||

ರಾಮ ವಿಶ್ವಾಮಿತ್ರಗೆಂದನು
ಸ್ವಾಮಿ ದೀಕ್ಷೆಯ ಧರಿಸು ತೋರಾ
ತಾಮಸಾಧಮರೆಲ್ಲಿಹರು ರಾಕ್ಷಸರೆನಲು ಬಳಿಕ ||
ಆ ಮುನಿಪ ಯಾಗವನು ತೊಡಗಲು
ನೇಮದಿಂ ಋಷಿ ನಿವಹ ಸಹಿತಿರೆ
ಕಾಮುಕರು ಕವಿತಂದರಾ ಮಧ್ಯಾಹ್ನ ಸಮಯದಲಿ || ೨೫ ||

ಬಂದು ಮಾರೀಚನು ಸುಬಾಹುಗ
ಳೆಂದೆನಿಪ ರಾಕ್ಷಸರು ಯಾಗದ
ಮಂದಿರದಿ ಸೂಸಿದರು ರುಧಿರಾಸ್ಥಿಗಳ ವೃಷ್ಟಿಗಳ ||
ಕ್ರಂದನವನದ ಕೇಳಿ ರಾಘವ
ನಂದು ಸೆಳೆದನು ವಾಯುವಾಗ್ನೇಯ
ವೆಂದೆರಡು ಬಾಣವನು ತೆಗೆದಾರ್ದೆಚ್ಚನಾ ರಾಮ || ೨೬

ವಾಯುಬಾಣವು ತಿರುಗಿಸಿತ್ತಾ
ಮಾಯಿ ಮಾರೀಚನನದತ್ತಲು
ಹಾಯೆನುತ ಶರಧಿಯಲಿ ಬಿದ್ದನು ಪೇಳೆ ಮತ್ತೊಂದು ||
ವಾಯುಸಖನಾಗ್ನೇಯ ಬಾಣವು
ಹಾಯಿತಸುರ ಸುಬಾಹು ದನುಜನ
ಕಾಯ ಸಹ ಭಸುಮವನು ಮಾಡಿತು ನಿಮಿಷ ಮಾತ್ರದಲಿ || ೨೭ ||

ಮಿಕ್ಕ ದಾನವರೆಲ್ಲರನು ಕಡಿ
ದಿಕ್ಕಿದನು ಸೌಮಿತ್ರ ನಿಮಿಷದಿ
ಲೆಕ್ಕವನು ಬರೆಸಿದನು ರವಿಜನ ಸೇನಬೋವಂಗೆ ||
ರಕ್ಷರಕ್ಷಯೆನುತ್ತ ದಿವಿಜರು
ತಕ್ಕ ಹೂವಿನ ಮಳೆಯ ಸುರಿದರು
ಲಕ್ಷ್ಮಣನು ಸಹ ರಾಮನಿದ್ದನು ಮೂರು ದಿನವಲ್ಲಿ || ೨೮ ||

ಉಮ್ಮಹದಿ ನಾಲ್ಕನೆಯ ದಿನ ಬರೆ
ಬ್ರಹ್ಮವಿದ ಕೌಶಿಕನು ನುಡಿದನು
ರಮ್ಯರಮ್ಯಮಹಾಮುಖಕೆ ಹೋಗುವೆವು ನಾವೆನುತ ||
ರಮ್ಮ ಜನಕನು ಸತ್ಯನಿಧಿಗುಣ
ಧರ್ಮದಿಂದಿರುತಿರಲು ಜನಕನು
ಸಮ್ಮತದಿ ನಾವ್ ನಡೆವುವಲ್ಲಿಗೆ ಕಾರ್ಯವಿಹುದೆಂದ || ೨೯ ||

ಜನಕನಾತ್ಮಜ್ಞಾನಿಯೆಂಬುವ
ಜನಜನಿತವು ವಿದೇಹ ನಗರದಿ
ಮನಸಿಜಾಂತಕನಲ್ಲಿ ಚಾಪವನಿರಿಸಿಹನು ಮುನ್ನ ||
ಅನುಪಮನೆ ನಿನ್ನತುಳ ಶಕ್ತಿಯ
ಘನತೆಗಾಣಲಿ ಪೂಜಿಸಲಿ ಯೇ
ಳೆನುತ ನಡೆದನು ರಾಮಲಕ್ಷ್ಮಣರೊಡನೆ ಮುನಿನಾಥ || ೩೦ ||

ಇಂತೆನುತ ಮುನಿವರನು ಲಕ್ಷ್ಮೀ
ಕಾಂತ ರಾಘವ ಸಹಿತ ಗಂಗಾ
ಪ್ರಾಂತದ ಸಮೀಪದಲಿ ಕಂಡರು ಗೌತಮಾಶ್ರಮವ ||
ಸಂತಸದ ಫಲಕುಸುಮ ತರುಗಳ
ತಿಂಥಿಣಿಸು ಶೋಭಾಯಮಾನದ
ನಂತ ಪುಣ್ಯ ಸ್ಥಳವ ನೋಡುತ್ತಿರ್ದರರ್ಥಿಯಲಿ || ೩೧ ||

ಐದನೆಯದೀ ಸಂಧಿ ಪದನಗ
ಳೈದು ಷಟ್ಕದಲೆರಡಧಿಕ ವಾ
ವೇದದೂರನು ಗೌತಮಾಶ್ರಮದಲ್ಲಿಗೈದಿರ್ದ ||
ಸಾಧು ವೃತ್ತಾಂತವನು ಮುದದಿಂ
ದೋದಿ ಲಾಲಿಸಿದವರ ಕಾವನು
ಬೋಧಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನೊಲವಿನಲಿ || ೩೨ ||

ಅಂತು ಸಂಧಿ ೫ಕ್ಕೆ ಪದ ೧೯೭ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ
ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ಆರನೆಯ ಸಂಧಿ

## ಅಹಲ್ಯಾ ಶಾಪ ವಿಮೋಚನೆ

ಸೂಚನೆ ॥ ಬಲ್ಲವರಿಗಿಹಪದವ ಕೊಡುವುದು
ದುರ್ಲಭವೆ ಹರಿಯಂಘ್ರಿ ಶಾಪದ
ಕಲ್ಲ ಹೆಣ್ಣಾಸು ಮಾಡೆ ಕೂಡಿತು ಪತಿಯು ನಿಜಗತಿಯು ॥

ಪದ ॥ ಕೇಳು ಪಾರ್ವತಿ ಬಳಿಕ ರಾಘವ
ಕೇಳಿದನು ಕೌಶಿಕನ ವಸವಿದು
ಹೋಲಿಸುವಡಪ್ರತಿಮ ವನವೆಲೆ ಕುಸುಮ ತರು ಗಿಡವು ॥
ಹೇಳು ಖಗಮೃಗ ಜಂತು ನಿಕರವ
ಜಾಳವೊಂದೂವಿಲ್ಲ ಸಂತಸ
ದೇಳಿಗೆಯಲತಿ ರಮ್ಯವಾಗಿದೆಯೆಂದನಾ ರಾಮ ॥ ೧ ॥

ಆಶ್ರಮವು ತಾನಾರದೆನೆಯಿದು
ಆಶ್ರಯಿಸುವವರಾರು ವನದಲಿ
ಯಾಶ್ರಯಿಸುವವರಿಂಗೆ ಪಣ್ಫಲವಿಲ್ಲಲಾಯೆಂದ ॥
ಆಶ್ರಮವು ತಾನಾರದೆನೆ ಜಗ
ದಾಶ್ರಯಿಸಿತಪವಿರಲು ಕೊಟ್ಟನು
ಪುತ್ರವೆನಲಜ ತನ್ನಮಗಳನು ರೂಪಗುಣಯುತೆಯ ॥ ೨ ॥

ಬ್ರಹ್ಮಚರ್ಯೆಯಲಾ ಮಹಾಸತಿ
ಯೊಮ್ಮೆಯೂ ಪತಿಪದವನಗಲದೆ
ಧರ್ಮಚಾರಿಣಿ ಮುನಿವರೇಣ್ಯನೆ ಗತಿಯೆನುತ್ತಿರಲು ॥

ರಮ್ಯ ಕೇಳೈ ಕಾಮ ಕಲುಷವಿ
ಕರ್ಮದಿಂ ದೇವೇಂದ್ರ ರಮಿಸಲಿ
ಕೊಪ್ಮ್ರಿಯೂ ತೆರಹಾಗದೀಕ್ಷಿಸುತಿರ್ದನಂತರವ || ೩ ||

ಒಂದು ದಿನ ಮುನಿಹೊರಗೆ ಹೋಗಿರ
ಲಂದು ಮುನಿವೇಷವನು ತಾಳಿ ಪು
ರಂದರನು ವೊಳಹೊಕ್ಕು ರಮಿಸುತ್ತಿರಲಿ ಕಷ್ಟದೊಳು ||
ಬಂದನಾಗಳೆ ಮುನಿಪನೊಳಗೆ
ಸ್ನಂವವಾಗಿಹರಾರೆನ್ನುತ ಕಂ
ಡಂದು ಕೆರಳಿದನೆರಡನೇ ಕಾಲಾಗ್ನಿಯೆನೆ ಮುಳಿದು || ೪ ||

ಭ್ರಷ್ಟ ನೀನಾರೆನ್ನದೋಷವ
ದುಷ್ಟಧರಿಸಿದೆ ಹೇಳು ಸತ್ಯವ
ಸುಟ್ಟುಭಸಿತವ ಮಾಳ್ಪೆನನ್ಯಾಯುವನು ಬಗುಳಿದಡೆ ||
ಕೊಟ್ಟೆನೆಂದರಿಯೆನಲು ಮಿಗೆ ಕಂ
ಗೆಟ್ಟು ರಕ್ಷಿಸು ಮುನಿಪ ಮಾಡಿದ
ಚೇಷ್ಟೆಯೆನ್ನದು ಕಾಮಕಿಂಕರನಿಂದ್ರ ನಾನೆಂದ || ೫ ||

ಕಾರಿದನು ಕಂಗಳಲಿ ಕೇಂಡವ
ತೋರಿತುರಿಸ್ಫುಲಿನಲಿ ಪಾಪಾ
ಚಾರ ಕಳ್ಳ ದುರಾತ್ಮದುರ್ಭಗ ಚರಿತ ನಿನಗಿಂದು ||
ನಾರಿಯರ ಪರಿ ಭಗಸಹಸ್ರ ವಿ
ಕಾರವಂಗದಲಾಗಲೆಂದಾ
ವೀರಮುನಿವೊಳಹೊಕ್ಕು ನಡುಗುವಹಲ್ಯೆಯನು ಕಂಡ || ೬ ||

ಶಿರವೆರಗಿ ನಡುಗುತಿರೆ ನಿಂದಿರು
ದುರುಳೆ ಮಾಡಿದ ದುಷ್ಟೆ ಶಿಲೆಯಾ
ಗಿರು ಮಮಾಶ್ರಮ ಸನ್ನಿಧಿಯಲನವರತ ತಪದಿಂದ ||

ವರುಷ ವಾಶಾ ತಪದಿ ಪರಮೇ
ಶ್ವರನೆನಿಸುವವ ರಾಮಚಂದ್ರನ
ಚರಣವನೆ ಭಾವಿಸು ನಿರಂತರ ಹೃದಯದೊಳಗೆಂದ || ೭ ||

ಹಕ್ಕಿಮೊದಲಾದಾವ ಪ್ರಾಣಿಯು
ಹಕ್ಕೆಯಾಗಿರಬೇಡವಿದರೊಳು
ಲೆಕ್ಕವಿಲ್ಲದ ವರ್ಷಸಾವಿರಗಳಿಯೆ ಮೇಲಿಲ್ಲಿ ||
ಬಕ್ಕನುಜ ಸಹ ರಾಮ ದಶರಥ
ಚಕ್ರವರ್ತಿಯ ಮಗನವನ ಪದ
ಮುಕ್ಕುವುದು ನಿನ್ನಘವ ಸೋಂಕಿದಡೆಂದನಾ ಮುನಿಪ || ೮ ||

ರಾಮಪದ ಸೋಂಕಿದಡಘಕೆ ನಿ
ರ್ನಾಮವಾತನ ಪೂಜೆ ವಂದನೆ
ನಾಮ ಸಂಸ್ತುತಿಯಿಂದ ಬಲಬರೆ ಶಾಪವದು ಹೋಗಿ ||
ನೀ ಮೊದಲಿನಂತೆನ್ನ ಸೇವೆಗೆ
ಭಾಮೆ ಬಹೆಯೆಂದತ್ತ ಗೌತಮ
ನೇಮದಿಂದುತ್ತಮದ ಹಿಮವದ್ಗಿರಿಗೆ ತೆರಳಿದನು || ೯ ||

ಅಂದು ಮೊದಲಾಹಲ್ಯೆ ಭೂತದ
ವೃಂದಕಾಣದವೋಲು ರಾಘವ
ನೆಂದು ಬಹನೆನುತನಿಲ ಮಾತ್ರಾಹಾರವನು ಮಾಡಿ ||
ಇಂದುನಾಳೆಯು ತವ ಪದಾಂಘ್ರಿ
ದ್ವಂದ್ವರಜವನು ಬಯಸುತಿಹಳರ
ವಿಂದಭವಸುತೆ ರಾಮಪಾವನಮಾಡಬೇಕೆಂದ || ೧೦ ||

ಎಂದು ರಾಮನ ಕರವ ಪಿಡಿದೈ
ತಂದು ತೋರಿದನುಗ್ರ ತಪದಲಿ
ನಿಂದಹಲ್ಯೆಯ ಶಿಲೆಯನಿದೆ ನೋಡೆನುತ ಕೌಶಿಕನು ||

ಅಂದು ರಾಮನ ಪದಶಿರಗು ಸೋಂ
ಕಿಂದು ಮುಖಿಯಾ ಶಿಲೆಯ ರೂಪವ
ಹಿಂದುಗಳೆದಿರೆ ನಮಿಸಹಲ್ಯೆಗೆ ರಾಮನಾನೆಂದ ||೧೧||

ಆಗ ಕಂಡಳು ಮುಂದೆ ನಿಂದಾ
ಯೋಗಿವರನನಪ್ರಮೇಯನ
ಭಾಗವತರಾಳುದನನಂತನ ಶರಧನುರ್ಧರವ ||
ಪೂಗಣೆಯ ಸಾಹಸ್ರ ಚೆಲುವಿನ
ಸಾಗರನ ನಸುನಗೆಯ ಮೋಹನ
ದಾಗರನ ಲಕ್ಷುಮಣ ಸಹಿತ ಹೊಳೆಹೊಳೆವ ನಿರುಪಮನ ||೧೨||

ಪೀತ ಕೌಶೇಯಾಂಬರದಿ ಸಂ
ವೀತ ಜಘನದ ಚಾರು ವಕ್ಷದ
ಸಾತಿಶಯ ಸಿರಿವತ್ಸ ಮೌಕ್ತಿಕ ಹಾರ ಶೋಭನದ ||
ಜ್ಯೋತಿಯಿಂದದ ರತುನ ಕಂಕಣ
ನೂತನಾಂಗದ ವೀರ ಮುದ್ರಿಕೆ
ಯಾತ ಬೆರಳಿನ ಶೋಭಮಾನಾಯತದಿ ರಂಜಿಸಿದ ||೧೩||

ಮುದ್ದುಮೊಗಕುಂಡಲದಧರರದ
ನದ್ಯುತಿಯ ಕೌಮುದಿಯ ಕರುಣ ರ
ಸಾರ್ದನಯನದ ಸುಳಿಗುರುಳ ಮಣಿಮುಕುಟ ದೀಧಿತಿಯ ||
ಚಿದ್ರಸಾಂಗವ ಕಂಡಬಳಿ ಮುನಿ
ಹೃದ್ಯ ನಾರಾಯಣನೆಯವನೆಸು
ತಿದ್ದಳಾನಂದಾಶ್ರುಜಲದೊಳಗಾ ವಿಧಾತೃಸುತೆ ||೧೪||

ಗೌತಮನು ಹೇಳಿಹನಲಾ ಸಾ
ಕ್ಷಾತ ರಾಮನೆ ಬಹನೆನುತ್ತಾದ
ನೀತಿವಿದೆಯಾಚರಿಸು ವಿಧಿಯಿಂದರ್ಘ್ಯಪಾದ್ಯವನು ||

ಸಾತಿಶಯ ಫಲ ಪುಷ್ಪವಲಿ ಪರ
ಮಾತುಮನೆ ಪೂಜಿಸಿ ಮಗುಳೆ ಮಾಂ
ಪಾತು ಪರಮೇಶ್ವರ ಎನುತ್ತೆರಗಿದಳು ಚರಣದಲಿ || ೧೫ ||

ಬಿದ್ದು ಪುನರಪಿ ಪುನರಪಿಯಲಂ
ದೆದ್ದು ಸುರಿವಾನಂದ ಜಲದಿಂ
ದೊದ್ದೆಯಾಗಲು ತನು ಮುಕುಂದನ ಮೂರ್ತಿಯನು ನೋಡಿ ||
ಗದ್ಗದವಾಕ್ಷರದಿಂದ ಶ್ರುತಿಗಳ
ಹೃದ್ಯದಿಂ ಹೊಗಳಿದಳು ಶಿವ ಶಿವ
ಬಿತ್ತೆ ಬಿದ್ದೆಸು ರಾಮಕರುಣಾನಿಧಿಯೆ ತಾನೆಸುತ || ೧೬ ||

ಅರರೆ ತನ್ನಂತಾರು ಧನ್ಯರು
ಧರೆಯಲಿಲೆ ಜಗದಾತ್ಮ ನಿನ್ನೀ
ಚರಣ ಲಗ್ನರಜಃಕಣವ ಧರಿಸುವ ಸುಭಾಗ್ಯವಿದು ||
ಸರಸಿಜಾಸನ ರುದ್ರ ಮುಖ್ಯಾ
ಮರರು ಸಂತನವ್ರತ ತಪವನು
ಚರಿಸಿಯರಸಿಯು ಕಾಣಲರಿಯರು ಯೆಂದಳಬುಜಾಕ್ಷಿ || ೧೭ ||

ಅಚ್ಚರಿಯಲಾ ರಾಮ ನಿನ್ನಯ
ಸಚ್ಚರಿತ ಮಾಯಾ ವಿಡಂಬನ
ವೆಚ್ಚರಿಯದೆಂತೀ ಜಗತ್ರಯವೆಲ್ಲ ಮೋಹಿಸುವ ||
ಮೆಚ್ಚಿ ಹೊರಗನವರತ ಚಲಿಸಿಯು
ಚಿಚ್ಚಮತ್ಕಾರದೊಳು ಚಲಿಸದೆ
ಸಚ್ಚಿದಾನಂದಾತ್ಮನಾಗಿಹ ವಿಗತ ಮಾಯಕವ || ೧೮ ||

ನಿನ್ನ ಪಾದ ಪರಾಗದಿಂದು
ತ್ಪನ್ನವಾದ ಪವಿತ್ರ ಗಂಗಾ
ಜಾಹ್ನವೀ ಸ್ನಾನವನು ಬಯಸುವರಜಭವಾಮರರು ||

ಧನ್ಯರೆನಿಸುವರಾಸದಾವಳ
ದೆನ್ನ ದೃಗ್ವಿಷಯಕ್ಕೆ ತೋರಿ ಪ್ರ
ಸನ್ನನಾದ್ಯೆ ರಾಮ ಕರುಣಾನಿಧಿಯೆ ತನಗೆಂದ || ೧೯ ||

ಮನುಜನಾದೀ ದಿವ್ಯಗಾತ್ರದ
ವನಜನೇತ್ರದ ಚಾರು ವಕ್ತ್ರದ
ಘನಮಕರ ಕುಂಡಲದ ಪೀತಾಂಬರ ವಿರಾಜಿತದ ||
ಅನುಜನೊಡನಾನಂದದಿಂ ಕರ
ಧನುಶರದಲೊಪ್ಪುವ ರಘೂತ್ತಮ
ನೆನಕದಿಂದಗಲದೆ ನಿರಂತರ ನಿತ್ಯನಾಗಿಕ್ಕೆ || ೨೦ ||

ಆವನಂಘ್ರಿ ಸರೋಜರಜ ನಿಗ
ಮಾವಳೀ ಮಸ್ತಕದಿ ಗಡ ರಾ
ಜೀವ ಭವನಾವನ ಸುನಾಭಿಯಲುದಿಸಿ ಬಂದಗಡ ||
ಆವನುರುನಾಮಾಮೃತವ ಸವಿ
ದಾವಗಂ ತ್ರಿಪುರಾರಿ ಬಿಡನಾ
ದೇವ ರಾಮನೆ ತನಗೆ ಗತಿಯೆಂದಳು ಸರೋಜಮುಖಿ || ೨೧ ||

ಆವನಮಳವತಾರ ಚರಿತವ
ನಾ ವಿರಿಂಚ ಮಹೇಶ ನಾರದ
ರಾವಗಂ ಗಾನವನು ಮಾಡಲು ಸತ್ಯಲೋಕವಲಿ ||
ಆವರಿಸಿ ಕಂಗಳಲಿ ಸುಖಜಲ
ತೀವಿ ಕುಚದಲ್ಲಿಳಿವುದಾ ವಾ
ಗ್ದೇವಿಗಾ ಪರಮಾತ್ಮ ರಾಮನೆ ತನಗೆ ಗತಿಯಕ್ಕೆ || ೨೨ ||

ಈತನಾದಿ ಪುರಾಣ ಪೂರುಷ
ನಾತುಮನು ನಿರ್ಗುಣ ನಿರಾಳ
ಜ್ಯೋತಿ ನಿಷ್ಕಳನಂತ ಮಾಯಾ ತನುವಿಡಿದು ಜಗವ ||

ಪ್ರೀತಿಯಿಂ ಮೋಹಿಸುವನೆಂದೆನು
ತಾತುಮಜ್ಞರು ಹೊಗಳರೇ ರಘು
ನಾಥ ನಿನ್ನಾನಂತ ಲೀಲೆಯನಾರರಿವರೆಂದ || ೨೩ ||

ಉಂಟುಮಾಡುವೆಯಜನೆನಿಸಿ ನಿ
ಷ್ಕಂಟಕದಿ ಹರಿಯೆನಿಸಿ ಪಾಲಿಸಿ
ಯೆಂಟೊಡಲ ಹರನಾಗಿ ಕಡೆಗದ ಹರಿಸಿ ತಮ್ಮ ಗುಣದಿ ||
ಷಂಠಿಸಿದ ಕರ್ಮವನು ಮಾಯಾ
ಶುಂಠಿಯೆಂಬಳ ತಲೆಯ ಮೇಲದ
ಗಂಟಕಟ್ಟುವೆ ನಿಜದಿ ನೀನೊಂದೊಂದು ವನು ಹೊರದೆ || ೨೪ ||

ಅಕ್ಷಯನೆ ನಿನ್ನಂಘ್ರಿಯುಗಲವ
ಲಕ್ಷಿಸುವಳನವರತ ಸಿರಿನಿಜ
ವಕ್ಷವಾಸದಲಿದ್ದಡೆಯು ಯೋಗಿಗಳು ಧ್ಯಾನದಲಿ ||
ಭಿಕ್ಷೆಯನು ಸಹಬಿಟ್ಟು ಸುಖಿಸುವ
ರೀಕ್ಷಮೊಯುನಳಿವಂದು ಲೋಕವ
ಮಿಕ್ಕಿತೊಂದೇ ಪಾದವಾ ಪಾದವನೆ ಮರೆಪೊಕ್ಕೆ || ೨೫ ||

ಆದಿಯೋಂಕಾರದಲಿ ನೀನೇ
ವೇದರೂಪನು ವಾಚ್ಯ ವಾಚಕ
ವಾದುದಿಲ್ಲಿಂದಿತ್ತ ಕಾರಣ ಕರ್ತು ಫಲ ಭೇದ ||
ಸಾಧಿಸುವೆ ಹಲವಂಗ ಕೊಟ್ಟನೆ
ಯಾದಿ ಕಾರಣ ನೀನು ನಿನ್ನಿಂ
ದಾಮುದಲ್ಲೈ ರಾಮ ಸಕಲಜಗಜ್ಜನನ ಭೇದ || ೨೬ ||

ನೀನೆ ಸಕಲಕ್ಕಾದಿ ಭೂತನು
ನೀನಸಂಗನ ಮಾಯಿನಕ್ರಿಯ
ಹೀನ ತಾಪನಿಯಂತ್ರ ಯೆಂಬುದಕೆಲ್ಲರುತ್ತಮರು ||

ಏನೆನರಿಯದ ನಿನ್ನ ಮಾಯಾ
ಮಾನಿನೀ ಮೋಹಿತರು ಬಗೆವರು
ಮಾನುಷರು ತಮ್ಮಂತೆ ಸುತ್ತತಿಪಾಪರತರಿಂದ || ೨೭ ||

ಮಾಡಿ ಗುರಿಯನು ಮಾಯೆಯನು ನೀ
ನಾಡಿವಡೆ ನಿನಗಿಲ್ಲ ಸಂಗವು
ಕೂಡಿಯೊಳಹೊರಗಿದ್ದ ಗಗನಕೆ ಲೇಪ ಘಟಿಸುವದೆ ||
ನೋಡೆಯಾಪರಿ ನಿತ್ಯಶುದ್ಧ ನಿ
ಗೂಢನದ್ವಯನೇಕನೇನನು
ಮಾಡೆಮಾಡಿಯು ಮಾತದಚಲ ನಿರಾಮಯನು ನೀನೆ || ೨೮ ||

ಆರು ತಾನೆಲೆ ರಾಮ ನಿನ್ನ ವಿ
ಹಾರವರಿವಡೆ ಚಿತ್ತಶುದ್ಧ ವಿ
ಚಾರವಿಲ್ಲದ ಮೂಢೆ ಮೊದಲೇ ನಾರಿಯರಿಗರಿವು ||
ಸೇರದೆಂಬರು ನಿನ್ನ ಪದಯುಗ
ಚಾರುದರುಶನವಾಯ್ತು ಸಾವಿರ
ಬಾರಿ ನಮಿಸಿದೆ ನನ್ನವರಿಯಿಸು ಯೆಂದಳಿಂದುಮುಖಿ || ೨೯ ||

ಎಲ್ಲಿ ಜನಿಸಿದ ಡೆಲ್ಲಿ ತಿರುಗಿದ
ಡೆಲ್ಲಿಯಿದ್ದಾವಾವ ಕೃತ್ಯದ
ಲೊಲ್ಲೆನೆಂವಡು ಬಿಡದಿಹ ಪ್ರಾರಬ್ಧ ಕೃತ್ಯದಲಿ ||
ಅಲ್ಲಿಗಲ್ಲಿಗೆ ದೇವ ಕಡು ಕೃಪೆ
ಯುಳ್ಳಡೆನ್ನಲನಾಥೆಗೀವುದು
ಸಲ್ಲಲಿತ ನಿಜಪದ ಭಕುತಿಯು ನಿರಂತರವೆನಲೆನಗೆ || ೩೦ ||

ಬೇಡುವವಳಾನಲ್ಲ ದುಃಖವ
ತೋಡುವಿಂದ್ರಾದಿಗಳ ಸುಖವನು
ಬೇಡದಿಚ್ಛಿತವೀವ ನಿಜಪದ ಭಕುತಿ ಹೊರಗಾಗಿ ||

ಬೇಡುಬೇಡುವ ಬಟ್ಟೆ ತಪ್ಪದು
ಬೇಡವಂದವ ಳೆನಗನುಗ್ರಹ
ಮಾಡು ನಿಜಪದ ಭಕುತಿ ಭಕುತರ ದಾಸ್ಯವೊಂದುಳಿಯೆ || ೩೧ ||

ರಕ್ಷಿಸೆಲೆ ರಘುನಾಥ ಪುರುಷಾ
ಧ್ಯಕ್ಷ ಸನ್ನುತ ಭಕ್ತವತ್ಸಲ
ಅಕ್ಷಯಾತ್ಮ ನಮೋ ನಮೋ ನಾರಾಯಣಾನಂತ ||
ಕುಕ್ಷಿಗತ ಜಗದಂಡ ದಿವಿಜ ವಿ
ಪಕ್ಷ ಶಿಕ್ಷಕ ಪರಮ ಪುರುಷಂ
ಧೋಕ್ಷಜಾ ಹೃಷಿಕೇಶ ಜಯಜಯ ಜಯ ನಮೋ ಜಯತು || ೩೨ ||

ಸಕಲ ಭಯಹರ ಭಾನುಕೋಟಿ
ಪ್ರಕರ ತೇಜದ ಚಾಪಶರ ಸಾ
ಯಕದ ಹಸ್ತದ ಕಾಳಮೇಘನಿಭಾಂಗ ಕಾಂತಿಗಳ ||
ವಿಕಸಿತಾನನವರಳುಗಂಗಳ
ಮಕರ ಕುಂಡಲ ಕನಕ ವಸನದ
ಯುಕುತ ಸಾನುಜ ರಾಮಚಂದ್ರನೆ ತನಗೆ ಗತಿಯೆಂದ || ೩೩ ||

ಎಂದು ಸಾಕ್ಷಾತ್ ಪರಮ ಪುರುಷನ
ಮುಂದೆ ನೋಡುತ ಬಲಬರುತ ನೆರೆ
ವಂದಿಸುತ ಹೊಗಳುತ್ತ ರಾಮನಾನುಜ್ಞೆಯನು ಪಡೆದು ||
ಸಂದಳಾ ಪತಿಯೆಡೆಗಹಲ್ಯಾ
ವಂದನಾ ಸ್ತುತಿಯಿದನು ಪಠಿಸಲು
ಬೆಂಮ ಸಕಲಾಘೌಘವೈದು ಪರಾತ್ಮ ಸಂಸ್ಥಿತಿಯ || ೩೪ ||

ವರುಷವೊಂದನು ರಾಮಚಂದ್ರನ
ನಿರದೆ ಹೃದಯದಿ ನೆನೆವುತಿವನಾ
ದರದಿ ಪಠಿಸಲು ಬಂಜೆಯಾದಡು ಪುತ್ರನುದಿಸುವನು ||

ನಿರುತ ನಿಷ್ಕಾಮದಲಿ ಕೇಳಿವ
ಡರಿವೆ ಸಂಸಾರಾಂಬುಧಿಯನು
ತ್ತರಿಸಿ ಪಡೆವನು ರಾಮಸಾಯುಜ್ಯವನು ಕೇಳೆಂದ || ೩೫ ||

ಕೊಂದು ಪಿತೃಮಾತೃ ದ್ವಿಜರ ಬಲು
ಹಿಂಪ ಗುರುವಧುವೆಳೆದು ಸುರೆಗುಡು
ಹಿಂದ ಲೋಗರ ಧನವ ಕದ್ದನ್ಯಾಯ ಭೋಗವಲಿ ||
ಸಂದ ಪಾಪಿಗಳಿಗಲಿದ ನಲ
ವಿಂದ ಪಠಿಸುತ ಭಕುತಿಯಲಿ ರಘು
ನಂದನನ ಭಾವಿಸಲವರು ಸಹ ಮುಕುತರವರೆಂದ || ೩೬ ||

ಸತ್ಯದಯ ದಾಕ್ಷಿಣ್ಯ ವಿಷಯ ನಿ
ವೃತ್ತಿ ಮೃದುನುಡಿ ಸರ್ವಭೂತದಿ
ಪ್ರೈತ್ರಿ ಜಪತಪ ದೇವ ಪಿತೃಗುರುಪೂಜೆ ಮೊದಲಾದ ||
ಉತ್ತಮಾಚಾರದಲಿ ನಡೆದಿ
ದ್ದುತ್ತಮರು ಭಜಿಸಿದಡೆ ರಾಮನ
ಮುಕ್ತರಹರೆಂದೆಂಬುದರಿಯದೆ ಯೆಂದನೀಶ್ವರನು || ೩೭ ||

ಆರನೆಯದೀ ಸಂಧಿ ಮೂವ
ತ್ತಾರರಿಂದೆರಡಧಿಕಹಲ್ಯಾ
ನಾರಿ ಶಾಪ ವಿಮೋಕ್ಷವನು ಪಡೆದೀ ಪ್ರಬಂಧದಲಿ ||
ಆರುತರ್ಕವನಾರು ಚಕ್ರವ
ನಾರು ಭಾವವು ಸಹಿತ ಮೀರಿದ
ಪಾರಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಜಯ ಶರಣು || ೩೮ ||

ಅಂತು ಸಂಧಿ ೬ಕ್ಕೆ ಪದ ೨೩೬ ಕ್ಕೆ

ಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀ

|| ಶ್ರೀ ರಾಮಚಂದ್ರಾಯ ನಮಃ ||



# ಏಳನೆಯ ಸಂಧಿ

## ಸೀತಾ ಸ್ವಯಂವರ

ಸೂಚನೆ || ಭೂತನಾಥನ ಬಿಲ್ಲ ಮುರಿದಾ
ಸೀತೆಯನು ಸೌಂದರ್ಯ ಗುಣವಿ
ಖ್ಯಾತೆಯನು ರಘುನಾಥ ವರಿಸಿದನಖಿಳ ವಿಭವದಲಿ ||

ಪದ || ಗಿರಿಜೆ ಕೇಳಾ ರಾಮಲಕ್ಷ್ಮಣ
ರಿಂದಹಲ್ಯಾಶ್ರಮದಿ ಕೌಶಿಕ
ವರಮುನಿಪನೆಂದನು ಮಿಥಿಲೆಯೆಂದೆಂಬ ಪಟ್ಟಣಕೆ ||
ಅರಸೆನಿಸಿ ಪಾಲಿಸುವ ಜನಕನ
ವರಮುಖವು ಗಡನೋಡಿ ನಾ ಸಹ
ನಿರುತಯೋಧ್ಯೆಗೆ ಬಳಿಕ ತೆರಳುವುದುಚಿತ ನಿಮಗೆಂದ || ೧ ||

ಅಂದು ಗಂಗೆಯನುತ್ತರಿಸಿ ರಘು
ನಂದನನು ಸಹ ವಾ ವಿದೇಹ ನೃ
ಪೇಂದ್ರ ಪುರದ ಪ್ರಾಂತ ಋಷಿವಾಟದಲಿರಲು ಬಳಿಕ ||
ಬಂದ ಮುನಿಪನ ವಾರ್ತೆಗರ್ಘ್ಯಾ
ಲಂಧುಪಾದ್ಯರು ಸಹಿತಿದಿರು ನಡೆ
ತಂದನಾ ಮಿಥಿಲೇಶ ಪೂಜಾದ್ರವ್ಯ ಸಹವಾಗಿ || ೨ ||

ದಂಡವಂತಿರೆ ನಮಿಸಿ ಮುನಿ ಮಾ
ರ್ತಾಂಡನನ್ನು ಪೂಜಿಸಿ ಬಳಿಕ ಬೆಸ
ಗೊಂಡನಿತ್ತಲು ನೋಡಿ ಶ್ರೀ ರಘುರಾಮ ಲಕ್ಷ್ಮಣರ ||
ಚಂಡಕಿರಣ ಶಶಾಂಕರಂತಿರ
ಲಂಡಲಿಯು ತನುಕಾಂತಿ ದಿಸೆಯನೆ
ಖಂಡ ಲಕ್ಷ್ಮಣ ರೂಪಯುತರಿವರಾರ ಸುತರೆನುತ || ೩ ||

ಇವರು ನರನಾರಾಯಣೋಪಮ
ರಿವರು ದೇವಾಂಗಿಗಳು ನೋಡುವ
ದಿವ್ಯರೂಪವು ನರರೊಳಿಲ್ಲವರಾರೊ ಮಯ್ಯಯೆನುತ ||
ಭುವನಪತಿ ಬೆಸಗೊಳಲು ಮುನಿಪುಂ
ಗವನು ಹರ್ಷದಲೆಂದನರಸಾ
ರವಿಕುಲೇಶ್ವರ ದಶರಥಾತ್ಮಜ ರಾಮ ಲಕ್ಷ್ಮಣರು || ೪ ||

ನಾನಿವರ ಕರೆತಂದೆ ಯಾಗ ವಿ
ಧಾನ ರಕ್ಷೆಗೆ ಬರುತ ಮಾರ್ಗದಿ
ದಾನವಿಯು ತಾಟಕಿಯ ನಿಕ್ಕಿದನೊಂದೆ ಬಾಣದಲಿ ||
ಕಾನನದಲಿಹ ಲೋಕ ಕಂಟಕಿ
ಹಾನಿಯಾದಳು ರಾಮ ಶರದಲಿ
ಯೇನನೆಂಬೆನು ಬಳಿಕ ಬಂದಿದ್ದರು ಮದಾಶ್ರಮದಿ || ೫ ||

ಯಾಗರಕ್ಷೆಯಲಾ ಸುಬಾಹುವ
ನೀಗಿದನು ಮಾರೀಚ ದನುಜನ
ಸಾಗರದಲಿಡುಕಿದನು ಬಳಿಕಾ ಗೌತಮಾಶ್ರಮಕೆ ||
ಸಾಗಿ ಗಂಗಾತಟಕಹಲ್ಯೆಯ
ನೀ ಗರುವನಡಿಧೂಳು ಸೋಂಕಲು
ಹೋಗಿ ಶಾಪದ ಕಲ್ಲು ನಿಮಿಷಕೆ ದಿವ್ಯತನುವಾಯ್ತು || ೬ ||

ಅವಳ ಪೂಜೆಯನಾಂತು ಬಂದೆವು
ತವಗೃಹದಲಿದ್ದೀಶ ಚಾಪವ
[ ತವಕದಲಿ ತೋರಿಸುವೆ ನಿಮಗೆಂದೆನುತ ಕರತಂದೆ ||
ಅವನಿಪತಿ ನೀ ಪೂಜಿಸುತ್ತಿಹ
ಭವನ ಚಾಪವ ತಿರುವನೇರಿಸ ]
ಲವಲವಿಕೆ ಘನವರ್ಥಿಯಾಗಿದೆ ನೃಪಕುಮಾರರಿಗೆ || ೭ ||

ಎನಲು ಚಾಪವ ತರಿಸಿ ಮಂತ್ರಿಗ
ಳನು ಕಳುಹಿ ಮುನಿನಾಥಗೆಂದನು
ಧನುವ ರಾಘವನೆತ್ತಿ ತಿರುವನು ತೊಡಿಸಿದಾಕ್ಷಣಕೆ ||
ತನುಜೆ ಸೀತೆಯ ನೀವು ತಿದ್ದೆನು
ಜನಜನಿತ ಬಲು ಚಾಪವೆಂದೆನೆ
ಮುನಿಪನಾಗಲಿ ಯೆನುತ ರಾಮನ ನೋಡಿ ನಗುತಿರ್ದ || ೮ ||

ತಡವ ಮಾಡದೆ ತರಿಸು ಚಾಪವ
ಬಡವನಲ್ಲೀ ರಾಮನೆನುತಿರೆ
ಕಡುಗಿ ಪಂಚ ಸಹಸ್ರ ಭುಜಬಲರಾದವ ಬಲುಪಿಂದ ||
ಹೊಡಕರಿಸಿ ತರುತಿರಲು ಮಂತ್ರಿಗ
ಳೊಡನೆ ಕಂಡನು ರಾಮಧನುವನು
ಗಡಣ ಘಂಟಾಮಾಲೆ ಮಣಿವಸ್ತ್ರಾದಿ ಭೂಷಿತದ || ೯ ||

ಕಂಡು ಚಾಪವನರ್ಥಿಯಲಿ ಮುಂ
ಕೊಂಡು ಪರಿಕರಗಳನು ಬಂಧಿಸಿ
ಕೊಂಡನೆಡಗೈಯ್ಯಿಂದ ಮೇಲಕೆ ನೆಗಹಿ ತೋರಿಸುತ ||
ಮಂಡಲೇಶ್ವರರೆಲ್ಲ ಬೆರಗಿನ
ದಂಡಿಯಲ್ಲಿರೆ ತೊಡಿಸಿ ತಿರುವಿಗೆ
ಕೊಂಡೆರಡು ಹಸ್ತದಲಿ ಮುಗಿವನು ಮೆಲ್ಲನಾ ಧನುವ || ೧೦ ||

ಮುಟ್ಟಿಯುಗಿಯಲು ಬಿಲ್ಲು ಮುರಿಯಿತು
ಧೊಟ್ಟೆನಲು ರವ ಮೂರು ಲೋಕದ
ಲಷ್ಟದಿಕ್ಪರ ನಜನಿರವ ಪಾತಾಳ ಲೋಕವನು ||
ನೆಟ್ಟನಮರರು ನೋಡಿಯದ್ಭುತ
ವಟ್ಟು ರಾಮನ ಹೂವಿನಲಿ ಮುಸು
ಕಿಟ್ಟು ಜಯ ಜಯ ಯೆನುತ ಹೊಗಳುತ್ತಿರ್ದರಭ್ರದಲಿ || ೧೧ ||

ದೇವದುಂದುಭಿ ಶಂಖರವವಿರ
ದಾವರಿಸೆ ದಿಗುತಟವನಾ ಸುರ
ದೇವಿಯಪ್ಸರಸೆಯರ ಪೆಕ್ಕಣಮುತ್ಸವೋತ್ಸವದ ||
ಭೂಪರನು ತೆಗೆದಪ್ಪಿದನು ರಾ
ಜೀವನೇತ್ರನನತ್ತ ಸೀತೆಗೆ
ಜೀವ ಬಂದಂತಾಯ್ತು ತಾ ತನ್ಮಾತೃಗಳು ಸಹಿತ || ೧೨ ||

ಬಂದಳಾಗಳೆ ಸೀತೆ ಬಲಗೈ
ಯಿಂದ ಹೂಮಾಲೆಯ ಪಿಡಿದು ಪೂ
ರ್ಣೇಂದು ವದನದ ಚಾರು ಚಾಮೀಕರ ತನುದ್ಯುತಿಯ ||
ಮಂದಹಾಸಾಭರಣ ಭೂಷಣ
ವೃಂದ ಮುಕ್ತಾಹಾರ ಕಂಕಣ
ದಂದುಗೆಯ ಝಣಾಝಣತು ಗೌರ ಮನೋಹರಾಂಗದಲಿ || ೧೩ ||

ಯಸಳುಗಂಗಳ ಭ್ರೂಲತೆಯ ಕೆಂ
ಪೆಸೆವಧರ ದೀಧಿತಿಯ ಕರ್ಣ
ಪ್ರಸರಮೋಲೆಯ ದಂತ ಪಂಙ್ತಿಯ ಚಾರುಮುಂಗುರುಳ ||
ನಸಿದ ನಡುವಿನ ದಿವ್ಯವಸನದ
ಮಿಸುಪ ಮೊಲೆ ನಳಿದೋಳ ನಾಂಚಿಪ
ನಸುಬೆವರುವಂಗದಲಿ ಬಂದಳು ಮುಂದೆ ರಘುಪತಿಯ || ೧೪ ||

ಮಾಲೆಯನು ಪರಿದಂಶದೇಶದ
ಮೇಲಿರಿಸಿಮುದವನೈದಿ ನಾಂಚುವ
ಬಾಲೆಯಂಗವ ರಾಜಮಹಿಷಿಯರಾ ಗವಾಕ್ಷದಲಿ ||
ಜಾಳರಂಧ್ರದಿ ನೋಡಿ ಸಂತಸ
ವಾಳಿದರು ರಘುನಾಥನೀಕೆಯ
ಶೀಲಕನು ಗುಣವೆನುತ ತಮತಮ್ಮೊಳಗೆ ಬಣ್ಣಿಸುತ || ೧೫ ||

ಇತ್ತ ಜನಕನ ಕೂಡೆ ವಿಶ್ವಾ
ಮಿತ್ರನೆಂದನು ಬರೆಸು ಬೇಗದಿ
ಪತ್ರಿಕೆಯ ದಶರಥಗೆ ರಾಮವಿವಾಹಕಾರಿಯಕೆ ||
ಮತ್ತಕಾಶಿನಿ ಸುತರು ಮಂತ್ರಿಗು
ರೋತ್ತಮನು ಸಹ ಬರಲೆನಲು ಕೇ
ಳುತ್ತ ಜನಕನು ಕಳುಹಲಿವಕೈದಿವರಯೋಧಿಯನು || ೧೬ ||

ಹೇಳಿದರು ದಶರಥಗೆ ರಾಘವ
ನೇಳಿಗೆಯ ಕಾರ್ಯವನದನು ನೃಪ
ಕೇಳಿದನು ಹರ್ಷಾಶ್ರುಪೂರ್ಣಾನಂದ ಜಲಧಿಯಲಿ ||
ಮೇಲೆಯಿಟ್ಟನು ಮಂದಹಾಸ ವಿ
ಶಾಲವಸ್ತ್ರವ ರಾಮಗುಣಗಣ
ಜಾಳರತುನದ ಮೇಲೆ ದೊಟ್ಟಾಕ್ಷಣದಿ ನಿಂದಿರ್ದ || ೧೭ ||

ಮಂತ್ರಿಗಳ ಕರೆದೆಂದನೇಳಲಿ
ಮುಂತೆ ರಥದಲ್ಲಾ ವಸಿಷ್ಠನು
ಕಾಂತೆಯರ ಕರೆ ರಾಮಮಾತೆಯ ಭರತ ಶತ್ರುಘ್ನರ ||
ದಂತಿರಥಹಯವಾಳು ನಡೆಯಲಿ
ಪಂಥದಲಿ ಯೆನುತಾ ಗುರುವನೊಲಿ
ದಂತೆ ಯೋಚಿಸಿ ನಡೆದನಾ ಮಿಥಿಲಾ ಪುರಾಂತಿಕಕೆ || ೧೮ ||

ಆ ಶತಾನಂದಾಖ್ಯ ಗುರುಸಹಿ
ತಾಸನಾರ್ಘ್ಯವ ಪಿಡಿದಿದಿರು ಗೊಂ
ಡಾ ಸುಮಂಗಲದಿಂದ ಪೂಜಿಸಿ ಜನಕನತಿ ಮುದದಿ ||
ಲೇಸೆನಿಪ ಸತ್ಕಾರದಿಂ ಸಂ
ತೋಷ ನಡಿಸುತ ದಶರಥನನಾ
ವಾಸದಿಂದಿರಾಗಿ ಬಂದರು ರಾಮ ಲಕ್ಷ್ಮಣರು || ೧೯ ||

ಬಂದು ಚರಣದಲೆರಗಲತಿ ಮುದ
ದಿಂದ ಗಾಢಾಲಿಂಗನದ ಲ
ಸ್ಪಂದದಿಂ ನೆರೆ ಹರಸಿ ನುಡಿದನು ರಾಮನಿನ್ನೆಸೆವ ||
ಚಂದಮುಖ ದರುಶನವು ಮುನಿಕೃಪೆ
ಯಿಂದಿಸಿತು ಸಂಪದವು ಸೇರಿ
ತ್ತೆಂದು ನೆತ್ತಿಯ ಘ್ರಾಣ ಸುಖದಲಿ ಯೋಗಿಯಂತಾದ || ೨೦ ||

ಬಳಿಕ ಸುತರೊಡಗೊಂಡು ಜನಕನ
ನಿಳಯವನು ಹೊಕ್ಕನು ಸುಶೋಭನ
ಗಳಲಿ ಸತಿಯರು ಸಹಿತ ಪರಮೋತ್ಸದ ರಸ ಮಿಗಿಲು ||
ಇಳೆಯ ಧರ್ಮಜ್ಞರನು ಬರಿಸಿದ
ನೊಲಿಮ ಜನಕನು ಶುಭದಿನದ ಲ
ಸ್ಖಲಿತ ಸುಮುಹೂರ್ತವನು ನಿಶ್ಚೈಸಿದರು ಮುನಿವರರು || ೨೧ ||

ವರವಿವಾಹದ ಮಂಟಪವ ವಿ
ಸ್ತರದ ರತುನಸ್ತಂಭ ಚತ್ವರ
ಪರಿವಿತಾನ ಸುಕಲಶ ಕನ್ನಡಿ ತೋರಣಂಗಳಲಿ ||
ನೆರೆದ ವಿಪ್ರ ಸುವಾಸಿನಿಯರಂ
ಬರಿಸು ಭೂಷಣ ನಿಷ್ಕ ಕಂಠಿಯು
ತಿರಲು ನೊಳಗಿತು ಭೇರಿ ದಂದುಭಿ ನೃತ್ತ ಗೀತಗಳು || ೨೨ ||

ಹೇಮರತುನದ ಸ್ವರ್ಣ ಪೀಠದಿ
ರಾಮನನು ಕುಳ್ಳಿರಿಸಿ ವಸಿಷ್ಠ ಮ
ಹಾಮುನಿಪ ಕೌಶಿಕ ಶತಾನಂದಾಖ್ಯರಂದೊಲಿದು ||
ನೇಮ ತಪ್ಪದೆಯಗ್ನಿ ಜನನವ
ನಾ ಮುನಿಗಳು ಜ್ವಲಿಸಿ ಪಾರ್ಶ್ವದಿ
ಭೂಮಿಜೆಯ ಕರಿಸಿದನು ಸರ್ವಾಭರಣಭೂಷಿತೆಯ || ೨೩ ||

ಬಳಿಕ ಜನಕನು ತನ್ನ ಸತಿ ಸಹ
ತೊಳೆದನಾ ಶ್ರೀರಾಮ ಚರಣವ
ಜಲವನತಿ ಭಕುತಿಯಲಿ ಶಿರದಲಿ ಧರಿಸಿದನು ಮಗುಳೆ ||
ನಳಿನಭವಭವ ಮುನಿಗಳಾನತಿ
ತಿಳಿಯಲಾ ಜಾಹ್ನವಿಯ ಸೀತೆಯ
ಬಳಿಕ ಹಸ್ತವ ಹಿಡಿದು ಧಾರೆಯ ನೆರೆವ ನೊಲವಿನಲಿ || ೨೪ ||

ಅಕ್ಷತೋದಕ ಸಹಿತ ಧಾರೆಯ
ಸಕ್ಷ್ಮಯನ ಹಸ್ತದಲಿ ಕೊಟ್ಟನು
ಲಕ್ಷಣದಿ ಸೌವರ್ಣ ಭೂಷಣ ಭೂಷಣಾನ್ವಿತೆಯ ||
ರಕ್ಷಿಸೆಲೆ ರಘುನಾಥ ನೀ ಕಮ
ಲಾಕ್ಷಿಯನು ವತ್ಪ್ರೀತನಾಗಿ ನಿ
ರೀಕ್ಷಿತಾತ್ಮಜ್ಞಾನವನು ಕೃಪೆಮಾಡು ತನಗೆಂದ || ೨೫ ||

ಹಾಲ ಶರಧಿಯ ವಿಷ್ಣು ರಮೆಯುರ
ಪೋಲಿರಲು ಸೌಮಿತ್ರನಿಗೆಯು ಸು
ಶೀಲೆ ಯೂರ್ಮಿಳೆಯೆಂಬಳನು ನಿಜಸುತೆಯ ಭರತಂಗೆ ||
ಮೇಲೆ ಶ್ರುತಕೀರ್ತಿಯನು ಕೊಟ್ಟನು
ಮಾಳವಿಯ ಶತ್ರುಘ್ನಗಿತ್ತನು
ನಾಲ್ವರು ನಿಜ ಸತಿಯರೊಡನೊಪ್ಪಿದರು ವಿಭವದಲಿ || ೨೬ ||

ರಾಮಲಕ್ಷ್ಮಣ ಭರತ ಶತ್ರು
ಘ್ನಾಮರ ಪ್ರಭರಿಂಗೆ ಸಮಗುಣ
ದಾಮಭೂಷಣೆಯರನು ಕೊಟ್ಟು ಸಭೆಯೊಳಗೆ ಕುಳಿತು ||
ಭೂಮಿಪತಿ ಮಿಥಿಲೇಶನೆಂದನು
ಸಾಮದಿಂ ಕೌಶಿಕ ವಸಿಷ್ಠರಿ
ಗಾ ಮಹಿಳೆ ಸೀತಾಜನನವನು ನಾರದೋಕ್ತಿಗಳ || ೨೭ ||

ಯಾಗಕೋಸುಗ ನೆಲನ ಶುದ್ಧಿಸೆ
ನೇಗಿಲಿಂ ಸವೆವುತಿರೆ ನೆಲನೊಳ
ಗೀ ಗರುವೆ ಸೀತೆಯನು ಶುಭಲಕ್ಷಣ್ಯ ಯೂಥೆಯನು ||
ಆಗ ಕಂಡಾತ್ಮಜೆಯ ಪರಿಯನು
ರಾಗವಡೆದಾ ಚಂದ್ರ ಮುಖಿಯನು
ಬೇಗ ಪಟ್ಟದ ರಮಣಿಗಿತ್ತೆನು ಸಲಹಿಕೊಳ್ಳೆನುತ || ೨೮ ||

ಪ್ರಾಣಕಿಮ್ಮಡಿಯಾಗಿ ಬಳಿಕಾ
ಜಾಣೆ ಸಲಹುತ್ತಿರಲು ವೀಣಾ
ಪಾಣಿ ರಣಿತ ಕ್ವಣಿತ ನಾರಾಯಣ ನಿನಾದದಲಿ ||
ಕ್ಷೀಣಿಸುತ ಜಗದಘವನಾತ್ಮ
ತ್ರಾಣ ನಿಷ್ಠೆಯಲಪ್ರತಿಮ ಗೀ
ರ್ವಾಣವಂದಿತ ನಾರದಾಂಕನು ಬಂದನೊಂದು ದಿನ || ೨೯ ||

ಬರವ ಕಾಣುತ್ತೆದ್ದು ಕರಶಂ
ದಿರದೆ ವಂದಿಸಿ ಪೂಜಿಸುತ್ತಿರೆ
ತರಣಿ ನುಡಿವನು ನೃಪತಿ ಕೇಳೆನ್ನಮಳ ವಚನವನು ||
ಪರರಿಗೆನಬೇಡೊಂದು ಗೌಪ್ಯವು
ಹಿರಿದು ನಿನಗಭ್ಯುದಯ ಸಾಕ್ಷಾ
ತ್ಪರಮ ಪುರುಷನ ಮಹಿಮೆಯನು ಕೇಳೆಂದನಾ ಮುನಿಪ || ೩೦ ||

ವಾಸುದೇವ ಪರಾತ್ಮನಪಗತ
ವಾಸನನು ಭಕ್ತಾನುರಾಗದಿ
ವಾಸವಾದ್ಯರ ಕಾರ್ಯಕೋಸುಗ ರಾವಣಾದಿಗಳ ||
ನಾಶವನು ಮಾಡಲಿಕೆ ಮಾನುಷ
ವೇಷವನು ಮಾಯೆಯಲಿ ತಾಳುತ
ದಾಶರಥಿ ರಾಮಾಖ್ಯನಾವನು ನಾಲ್ಕು ರೂಪಿನಲಿ || ೩೧ ||

ಸೀತೆಯೆಂಬಳು ನಿನ್ನ ಗೃಹದಲಿ
ಜಾತೆಯಾಗಿಹಳವಳು ತ್ರಿಜಗ
ನ್ಮಾತೆ ಯೋಗಾಧಾರ ಮಾಯೆ ಕಣಾ ಮಹಾಲಕ್ಷ್ಮಿಯೊ ||
ಖ್ಯಾತೆ ಪೂರ್ವದ ರಾಣಿ ರಾಮಂ
ಗಾತಗಲ್ಲದೆ ಮಿಕ್ಕ ನರರಿಗೆ
ಮಾತನಾಡದಿರೆಂದು ದಿವವಡರಿದನು ಮುನಿ ಬಳಿಕ || ೩೨ ||

ಅಂದು ಮೊದಲಾ ಮುನಿಯ ಮಾತಿನ
ಲಿಂದು ಮುಖಿಮಗಳಲ್ಲಿ ಸಾಕ್ಷಾ
ದಿಂದಿರೆಯ ಯೆಂದರಿತು ಭಾವಿಸುತಿಹೆನು ಮನದೊಳಗೆ ||
ಯೆಂದು ಬಹನೋ ರಾಮದೇವ ಮು
ಕುಂದ ನಾನತ ಬಂಧು ಸೇರಿಸು
ವಂದವಾವುದೊ ಯುಕ್ತಿಯಿಂದನವರತ ಯೋಚಿಸುವೆ || ೩೩ ||

ಮನುಜನಾದಾ ರಾಮಚಂದ್ರನ
ಘನ ಪರಾಕ್ರಮವರಿವುಪಾಯವ
ಮನದಿ ಕಂಡೆನು ಹಿಂದೆ ತ್ರಿಪುರವ ಸುಟ್ಟ ನಿಜಧನುವ ||
ಮನಸಿಜಾಂತಕನೆನ್ನ ತಂದೆಯ
ಮನೆಯಲಿಟ್ಟಿಹನಿದನು ಗೆಲಿದರೆ
ತನುಜೆಯನು ತಾ ಕೊಡುವೆನೆಂದೇ ಪಣವ ಮಾಡಿದೆನು || ೩೪ ||

ಬಂದು ಬಂದು ನೃಪಾಲರಡಿಯಲಿ
ನೊಂದು ಕೆಲಬರು ಕೆಲರು ನಗೆಗೆಡೆ
ಯಿಂದ ಕೆಲಬರು ನಾಚಿನಾಂಚುತ ಮಾನಭಂಗದಲಿ ॥
ಸಂದರತ್ತಲೆ ಮುನಿಪ ನಿನ್ನೊಡ
ನಿಂದು ರಾಜೀವಾಕ್ಷನನು ಕರ
ತಂದು ಬಿಲ್ಲನು ಗೆಲಿಸಿ ಮಾಡಿದೆ ತನ್ನ ಮನೆವನುವ ॥ ೩೫ ॥

ಗೆಷ್ಟುದಕೆ ಫಲವಾಯ್ತು ನೆರನಾ
ಗಿಷ್ಟುವಕೆ ಫಲವಾಯ್ತು ಹಿರಿಯರ
ಹೊದ್ದಿದಕೆ ಫಲವಾಯ್ತು ಜನ್ಮಶತಾರ್ಜಿತಾಘವನು ॥
ಕೆಷ್ಟ ಗೆಷ್ಟನು ರಾಮತನ ಪಾ
ದದ್ವಯವ ವದನದಲಿ ಯಿರಿಸಹಿ
ತದ್ವಯನ ನೆರೆಕಾಂಬ ಭಾಗ್ಯವಿದಾರಿಗುಂಟೆಂದ ॥ ೩೬ ॥

ಎನ್ನ ಮನೆ ಧನರಾಜ್ಯ ಕೋಶಗ
ಳುನ್ನತವ ಭಂಡಾರ ಸತಿಸುತ
ಮನ್ನಣೆಯ ಬಾಂಧವರೆನಿಪ್ಪಾ ಭ್ರಮೆಗೆ ಮರುಳಾಗಿ ॥
ಅನ್ಯರೇತೋ ಜನಿತ ಕಾಯದ
ಬಿನ್ನಣದ ಬಯಲಿಂಗೆ ತೊಳಲುವ
ರೆನ್ನದೆನಗೆ ಪ್ರಸನ್ನನಾದೈ ರಾಮ ನೀನೆಂದ ॥ ೩೭ ॥

ತೊಳೆದು ನಿಜ ಪಾದೋದಕವ ನಿಜ
ತಲೆಯಲಾನನೆ ಸೃಷ್ಟಿಕರ್ತನು
ಬಲಿತೊಳೆದು ಧರಿಸೀ ಜಗತ್ರಯ ಕೊಡೆಯನಾಗಿಹನೆ ॥
ಕಳಚದೇ ಶಾಪವನಹಲ್ಯೆಯ
ಶಿಲೆಯ ನಿಜಪದಧೂಳು ಮಾತ್ರವು
ಸುಲಭ ದೈವವದಾರು ನಿನ್ನಂತೆಂದನಾ ಜನಕ ॥ ೩೮ ॥

ಆವನಂಘ್ರಿ ಸರೋಜ ರಜವನು
ಭಾವಿಸುತ್ತನವರತ ಕಾಲನ
ಪಾವಳಿಯ ಭವಭಯವ ಗೆಲುವರು ಗಡ ನಿರಂತರದಲಿ ||
ಆವನುರು ನಾಮವನು ಕೀರ್ತಿಸು
ತಾವಗಂ ದುಃಖಿಗಳು ದುಃಖದ
ನೋವ ಮರೆವರದಾವನಂಘ್ರಿಯು ತನಗೆ ಗತಿಯೆಂದ ॥ ೨೯ ||

ಮುತ್ತುಳಿವ ಕೋಟಲೆಯ ಕರ್ಪುರದಿ
ಹತ್ತುವವನಾನಲ್ಲ ನಿಜಪದ
ಭಕ್ತಿ ತವಗುಣ ನಾಮಕೀರ್ತನ ನಿನ್ನ ಪದ ಪೂಜೆ ||
ಉತ್ತಮರಲೇ ದಾಸ್ಯ ವಿಷಯ ನಿ
ವೃತ್ತಿ ಸಕಲದಿ ಮೈತ್ರಿ ದಯವನೆ
ಸತ್ಯರೂಪನೆ ರಾಮ ಕರುಣಿಸಬೇಹುದೆನಗೆಂದ || ೯೦ ||

ಇಂತು ಪೊಗಳುತ ನೃಪತಿ ಕೋಟಿಯ
ಸಂತ ಧನಗಳ ಭಾರವನು ಮುದ
ದಂತಿಗಳಲೈನೂರು ರಥವನು ಹತ್ತು ಸಾವಿರವ ||
ಮುಂತೆ ನಿಯುತ ತುರಂಗ ಕಾಲಾ
ಳಂತು ಲಕ್ಷವ ತೊತ್ತಿಯರನತಿ
ಸಂತಸದಿ ಮುನ್ನೂರು ಸಹ ಬಳುವಳಿಯಲರ್ಪಿಸಿದ || ೯೧ ||

ವರದುಕೂಲಾಂಬರ ವಿಭೂಷಣ
ವುರುಕನಕ ರತ್ನಾಂಗ ಹಾರವ
ತರಿಸಿ ಸೀತೆಗೆ ಕೊಟ್ಟ ಬಳಿಕ ವಸಿಷ್ಠ ಮುಖ್ಯರಿಗೆ ||
ಹಿರಿದು ಪೂಜಿಸಿ ದಶರಥನ ಸತು
ಕರಿಸಿ ಲಕ್ಷ್ಮಣ ಭರತ ಶತ್ರು
ಘ್ನರಿಗೆ ಯುಡುಗೊರೆಯಿತ್ತನೆಲ್ಲರಿಗುಚಿತದಿಂದೊಲಿದು || ೯೨ ||

ನೆಟ್ಟನಾ ದಂಪತಿಗಳಸು ಮುಂ
ದಿಟ್ಟು ರಥದಲಿ ಜನಕ ಸೀತೆಯ
ಮುಟ್ಟಿಯಾಲಿಂಗಿಸಿದನಾನಂದಾಶ್ರು ಜಲವೊಗಲು ||
ಪಟ್ಟದರಸಿಯರಾಪರಿಯುರತಿ
ಹೃಷ್ಟದಲಿ ಸೀತೆಗೆ ನುಡಿದರಿಳೆ
ಬಿಟ್ಟು ನಡೆಯದಿರವ್ವ ಪಾತಿವ್ರತ್ಯ ಧರ್ಮವನು || ೪೩ ||

ತಾಯಿ ತಂದೆಯವೋಲು ಸೇವೆಯ
ನಾಯತದಿ ಮಾಡುತ್ತ ಮಾವರ
ಮಾಯೆಯಿಲ್ಲದೆ ಪತಿಯೆ ಪರಮಾತುಮನೆನುತ ಭಜಿಸಿ ||
ಕಾಯಸಂಕ್ಲೇಶವನು ನೋಡದೆ
ಬಾಯಲಿದಿರಿಟ್ಟೆನ್ನದೇ ರಘು
ರಾಯನೇ ಗತಿಯಾಗಿ ಸುಖವಿರೆನುತ್ತ ಕಳುಹಿದರು || ೪೪ ||

ಹಿಂಗದೀಪರಿ ಜನಕ ನೃಪತಿ ತ
ದಂಗನೆಯರೊಡನೈದಿ ಕಳುಹಲು
ಮಂಗಳದ ಬಹುವಾದ್ಯ ಮೊಳಗಿತು ರಾಮಪಯಣದಲಿ ||
ಜಂಗಳೀ ಬೇರೀ ತುರೀಯ ಮೃ
ದಂಗಕಹಳಾನಕರ ಶಬುದ ಮ
ಯಂಗಳಾದವು ಮೂರು ಲೋಕದಲಾರು ಬಣ್ಣಿಪರು || ೪೫ ||

ಕೋಟಿ ಸೂರ್ಯ ಸಹಸ್ರ ದೀಪ್ತಿಯ
ನೋಟಕರ ಮೋಹಿಸುವ ನಯನಕಿ
ರೀಟ ಕುಂಡಲಹಾರ ತೋಳ್ಬಳೆ ಕಡಗ ಮುದ್ರಿಕೆಯ ||
ನಾಟಕದ ಮಾನುಷ ವಿಡಂಬನ
ದಾಟದಲಿ ಸತಿ ಸಹ ವರೂಥದ
ಪೀಠದಲಿ ಪರಮಾತ್ಮ ರಾಮನು ಪಯಣದೊಳಗಿರ್ದ || ೪೬ ||

ಏಳನೆಯದೀ ಸಂಧಿ ಪದನಗ
ಳೋಳಿ ದಿಗ್ಜನ ಬಾಣ ಋಷಿಗಳ
ವೇಳವೆನೆ ಶ್ರೀರಾಮಚಂದ್ರ ವಿವಾಹ ಕಥನದಲಿ ||
ಹೇಳ ಕೇಳಿದಡಿಷ್ಟಸಿದ್ಧಿಯ
ಪಾಲಿಸುವನೊಲಿದಿತ್ತು ಪರಮ ಕೃ
ಪಾಳುಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನೊಲವಿನಲಿ || ೪೭ ||

ಅಂತು ಸಂಧಿ ೭ಕ್ಕೆ ಪದ ೨೪೩ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ
ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಎಂಟನೆಯ ಸಂಧಿ

## ಪರಶುರಾಮನ ಗರ್ವಭಂಗ

ಸೂಚನೆ || ರಾಮರಾಮನ ಬಂದು ಹಳಚಲು
ರಾಮರಾಮನ ಬಿಲ್ಲ ಕೊಂಡನು
ರಾಮರಾಮನ ಹೊಗಳೆ ರಾಮನಯೋಧ್ಯೆಯನು ಹೊಕ್ಕ ||

ಪದ || ಬಳಿಕ ಪಾರ್ವತಿ ಕೇಳುಯೋಜನ
ದಳತೆ ಮೂರನು ನಡೆಯೆ ಬಲಘುಳು
ಘುಳಿಸುವಾನಕ ಭೇರಿ ಶಂಖ ಮೃದಂಗ ರವಗಳಲಿ ||
ಬಲದಲತಿ ದುಃಶಕುನ ತೋರಲು
ಕಳವಳಿಸಿ ದಶರಥ ವಸಿಷ್ಠಂ
ಗಲೆ ಮುನಿಪ ನೋಡೀ ನಿಮಿತ್ತವಿದೇನು ಹೇಳೆಂದ ||೧||

ಮುನಿಪನೆಂದ ನಿಮಿತ್ತ ಗುಣದಲಿ
ಜನಪ ಭಯವದು ತೋರದುಳಿಯದು
ಘನತರದ ಸಂಪತ್ಸುಖವು ಮತ್ತಂತೆ ತೋರುವದು ||
ಘನತರದ ಮೃಗ ಬಲ ಬರುತ್ತಿದೆ
ಯೆಸುತಿರಲು ಬಿರುಗಾಳಿ ಹುಡಿಯಲಿ
ತನು ಮುಳುಗೆ ಕಣ್ಣಕ್ಕುಳಿಸೆ ಜನ ಬೆದರೆ ಬೀಸಿಮದು ||೨||

ಕಂಡರಾಗಳೆ ಕರವಿಧೃತ ಕೋ
ದಂಡ ಪರಶು ಜಟಾ ತ್ರಿಪುಂಡ್ರದ
ಮಂಡನದ ವಲ್ಕಲ ವಸನಮುಪವೀತ ಮೇಖಲೆಯ ||
ಚಂಡಕಿರಣದ ನೀಲ ಮೇಘೋ
ದ್ದಂಡ ಕಾರ್ತ್ಯನ ಗೆಲಿದ ವೀರ್ಯದ
ಶೌಂಡ ಭೃಗುಕುಲ ರಾಮನನು ನೃಪಕುಲ ವಿರಾಮನನು || ೩ ||

ಕಾಲಮೃತ್ಯುವಿನಂತೆ ಮುಂದೆ ನೃ
ಪಾಲನಿದಿರಲ್ಲಿಹ ಮುನೀಂದ್ರನ
ಕಾಲಮೇಲಡಗೆಡೆದು ಪೂಜಾರ್ಘ್ಯಾದಿಕವನಿತ್ತು ||
ಮೇಲೆ ನಡುಗುತ ಭಯದಿ ರಾಮನ
ಪಾಲಿಸೆನೆ ದಶರಥನ ವಿನಯುವ
ಕೇಳದತಿ ಕೋಪದಲಿ ರಾಮನ ಜರೆದು ಗರ್ಜಿಸಿದ || ೪ ||

ಎಲವೆಲವೊ ನೀ ರಾಮನೇ ಬಲು
ಗೆಲುವ ಕೊಂಡೈ ನಾಮ ಮಾತ್ರದಿ
ಬಲುಹ ನಿನಗೆಲ್ಲಿಯದು ಲೌಕಿಕ ಕ್ಷತ್ರಿಯರ್ಭಕಗೆ ||
ಹಳಚು ಬೇಗ ದ್ವಂದ್ವಯುದ್ಧದ
ಉಳಿವ ಕಾಂಬೆನು ತನ್ನ ನಿನ್ನೊ
ತಿಳಿಯಲಾ ನೃಪವಂಶ ಭೀಮ ಮಹಾ ಪರಶುರಾಮ || ೫ ||

ಹಳೆಯ ಜರ್ಝರ ಬಿಲ್ಲ ಮುರಿದ
ಗ್ಗಳಿಕೆ ಬೇಡೆಲೆ ಮುಗ್ಧ ವೈಷ್ಣವ
ದಲಘು ಧನುವಿದನಾಪಡೇರಿಸು ತಿರುವನಾ ಬಳಿಕ ||
ಹಳಚುವೆನು ನಿನ್ನೊಡನದಲ್ಲದ
ಡುಳುಹುವೆನೆ ಕ್ಷತ್ರಿಯರ ವನವನು
ಸುಳಿಸುರುಹುವಗ್ಗಳಿಯ ಕಾಲಾನಲನು ತಾನೆಂದ || ೬ ||

ಧರೆ ನಡುಗೆ ಶರಧಿಗಳು ಕುದಿದು
ಬ್ಬರಿಸೆ ತಾರೆಗಳುದುರೆ ಕತ್ತಲೆ
ನೆರೆದು ಕಣ್ಣನು ಹೊಳೆ ಮುನಿಪನ ರೌದ್ರಕವ ಕಂಡು ||
ವರ ರಘೂದ್ವಹನಾ ಮುನೀಂದ್ರನ
ಕರದ ಚಾಪವ ಕೊಂಡು ತೆಬ್ಬಿನ
ತಿರುವನೇರಿಸಿ ತೂಣಿಯೊಳಗಣ ಬಾಣವನು ಸೆಳೆವ || ೭ ||

ಸರಳ ಸಂಧಿಸಿ ದಿವ್ಯ ಚಾಪಕೆ
ಬರೆಯುಗಿದು ರಘುರಾಮನೆಂದನು
ವರಮುನಿಪ ತೋರೆಲ್ಲಿಗೆಸುವೆನು ಗುರಿಯ ಬೇಗದಲಿ ||
ಹುರಿಸು ಲೋಕಕೊ ಪಾದಯುಗ್ಮಕೆ
ಬರೆದೆಯುಸುದೋ ರಾಮ ಸಾಯಕ
ತರಹರಕೆ ತಡವಿಲ್ಲೆನಲು ಮುನಿನೋಡಿ ಬೆರಗಾದ || ೮ ||

ನೆನೆವನಾಗಳೆ ಪೂರ್ವ ಸಂಗತಿ
ಯನುವನೆಲೆ ರಘುರಾಮ ರಾಘವ
ಮನುಜನಾದ್ಯೆ ಪರಮಪೂರುಷನಾತ್ಮ ನೀನಿಂದು ||
ಅನುಭವಕೆ ಗೋಚರಿಸಿತೆನಗೆಲೆ
ಚಿನುಮಯನೆ ನೀ ವಿಷ್ಣು ಲೋಕವ
ಜನನ ರಕ್ಷಾನಾಶ ಕಾರಣ ಬ್ರಹ್ಮ ನೀನೇವ || ೯ ||

ಹಿಂದೆ ನಾ ಬಾಲ್ಯದಲಿ ವಿಷ್ಣುವ
ನಂದೊಲಿಸೆ ವರಚಕ್ರತೀರ್ಥದ
ಲೊಂದಿ ಪೂಜಿಸುತನವರತ ನಾರಾಯಣನ ಪದವ ||
ದ್ವಂದ್ವವರ್ಜಿತ ಚಿತ್ತದಲ್ಲಿರೆ
ಬಂದು ತನ್ನಿದಿರಿನಲಿ ದೇವ ಮು
ಕುಂದ ನಿಂತನು ಶಂಖಚಕ್ರಗದಾಬ್ಜವನು ಧರಿಸಿ || ೧೦ ||

ನಿಲವೇಘನಿಭಾಂಗ ಕಾಂತಿಯ
ಲೋಲಮಣಿಕುಂಡಲವ ಮುಕುಟ ವಿ
ಶಾಲ ರತುನವ ಮುಪ್ಪುವೊಗವರುಣಾಯತೇಕ್ಷಣವ ||
ಸಾಲು ಭೂಷಣದುರದ ತುಳಸೀ
ಮಾಲೆ ಭೃಗುಪವ ಪೀತವಸನವ
ತೋಳಬಳೆ ಕಂಕಣವೆಸೆಯಲೆನ್ನೊಡನೆ ಹರಿನುಡಿದ || ೧೧ ||

ಏಳು ಸದ್ಬ್ರಹ್ಮಣ್ಯ ಗುಣನಿಧಿ
ಕೇಳು ನನ್ನ ಚಿದಂಶ ಸಂಭವ
ನಾಲಿಸಿದ ಮರೆಯದಿರು ಹೇಹೆಯ ನೃಪರ ಸದೆ ಬಡಿದು ||
ಬೇಳು ವಿಕ್ರಮ ವಹ್ನಿಯಲಿ ಭೂ
ಪಾಲ ಕಾರ್ತ್ಯರ್ನ ಪಿತನ ನೆವದಲಿ
ಹೋಳುಗಳೆ ಕ್ಷತ್ರಿಯರನಿಪ್ಪತ್ತೊಂದು ಸೂಳಿನಲಿ || ೧೨ ||

ಬಳಿಕ ಧಾರೆಯನೆರೆದು ಕಾಶ್ಯಪ
ಗಿಳೆಯು ಪಾಪವ ಕಳೆದು ಶಾಂತಿಯ
ತಳೆದಿರಲು ತ್ರೇತಾಯುಗದಲಾ ದಶರಥಾಂಹಯುಗೆ ||
ಒಲಿದು ನಾರಾಯಣನು ಮಗನಾ
ಗಿಳೆಯ ಭಾರವ ಯೋಗಶಕ್ತಿಯ
ಲಿಳುಹುವೆನು ನೀನಂದು ನನ್ನನು ಕಾಣಬಹುದೆಂದ || ೧೩ ||

ನನ್ನ ತೇಜ ಪರಾಕ್ರಮವನೊಲಿ
ದೆನ್ನಲಂದಿಸಲಿರಿಸಿ ತಪವ
ಲ್ಲುನ್ನತೋನ್ನತ ಬ್ರಹ್ಮವಾಗಿರು ಕಲ್ಪ ಪರಿಯಂತ ||
ಸನ್ನುತನೆ ಯೆಂದೆನಗೆ ನೇಮಿಸಿ
ತನ್ನ ನಿಜದಲಿ ನಿಂತನಾ ಪರಿ
ನಿನ್ನ ನೇಮವನೆಲ್ಲ ಮಾಡಿದೆ ರಾಮ ನಾನೆಂದ || ೧೪ ||

ನೀನು ಸಾಕ್ಷಾದ್ವಿಷ್ಣು ಜನಿಸಿದೆ
ಮಾನವಾಕೃತಿವಿಡಿದು ದೈತ್ಯರ
ಹಾನಿಗಾಣಿಸೆ ಬೇಡಿಕೊಂಡಡೆ ಕಮಲಭವನೊಲಿದು ||
ನೀನೆ ನನ್ನಲ್ಲಿಟ್ಟ ತೇಜವ
ನೀನೆ ಮಗುಳವ ಕೊಂಡಡಾವುದು
ಹಾನಿ ನೀ ಗೋಚರಿಸೆ ಜನ್ಮವು ಸಫಲವಾಯ್ತೆಂದ || ೧೫ ||

ಜನನ ನಿನಗೆಲ್ಲಿಯದು ಪ್ರಾಕೃತ
ಜನನ ನಿನ್ನಿಂದಾವ ಕಾರಣ
ನಿನಗೆ ಕಾರಣವಿಲ್ಲ ಪ್ರಕೃತಿಗೆ ನೀನೆ ಕಾರಣನು ||
ಜನಜನಿತ ಷಡ್ಭಾವ ವಿರಹಿತ
ಚಿನುಮಯನು ಪರಿಪೂರ್ಣ ನಿರ್ಮಲ
ವನುಪಮನು ಗಮನಾದಿ ವರ್ಜಿತ ನಿರ್ವಿಕಾರಾತ್ಮ || ೧೬ ||

ನೀರಿನಿಸಿ ಜಲಧಿಯಲಿ ಫೇನ ವಿ
ಕಾರ ತೋರ್ಪಂತಗ್ನಿಧೂಮದ
ಸಾರರವಿಕರ ಕಿರಣದಂತಾ ಮಾಯಿ ನಿನ್ನಿಂದ ||
ತೋರುವದು ನೀನಲ್ಲದಿಪ್ಪಡ
ದಾವು ಬೇರಾಧಾರ ಮಾಯೆಗೆ
ತೋರುವವೆ ಕಟಕಾಳಿ ಕನಕವನುಳಿದು ಬೇರಾಗಿ || ೧೭ ||

ಹೊನ್ನದೆಂಬುದ ಮರಸಿ ಕಟಕವೆ
ತನ್ನ ಮೆರಸುವವೋಲು ಮಾಯಾ
ಕನ್ನೆ ನಿನ್ನನು ಮರೆಸಿ ಹೊಳೆವಳು ರಾಮರೂಪದಲಿ ||
ಅನ್ಯರನು ಮಾಡುವಳು ವಿದ್ಯಾ
ಬಿನ್ನಣವಲವಿಚಾರ ಸಿದ್ಧದ
ಲಿನ್ನು ವಿದ್ಯೆಯ ಮರೆಸಿ ಮರುಕಿಸಿ ಕಾಡಿವಳು ಜಗವ || ೧೮ ||

ವಿದ್ಯೆವಿದ್ಯೆಗಳೆರಡು ಶಕುತಿಗ
ಳಿದ್ದವವು ನಿನ್ನೊಳಗವಿದ್ಯೆಯೆ
ಶುದ್ಧ ಚೇತನ ಜೀವ ಚಿಚ್ಛಾಯೈಕ್ಯೆನಿಸಿಕೊಂಡಿಹುದು ||
ಬದ್ಧವಪ್ರತಿಬಿಂಬವಂತೆಯ
ವಿದ್ಯೆ ಮಾಯಾ ಕಾರ್ಯವೆನಿಸುವ
ಶುದ್ಧ ದೇಹ ಪ್ರಾಣವಿಷಯ ಜಗತ್ತೆನಿಸುತಿಹುದು || ೧೯ ||

ಎನ್ನ ಮನೆಮನವಾರ್ತೆ ದೇಹವಿ
ದೆನ್ನದಿಂದ್ರಿಯ ವಿಷಯ ಭೋಗವ
ಲುನ್ನತಿಕೆ ನನಗದನು ಪಡೆವೆನು ಪಡೆದೆನಿದನೆಂದು ||
ಭಿನ್ನ ಭಾವವ ಮಾಡಿ ಕನಸಿನ
ಹೊನ್ನನೆಚ್ಚರಲರಸುವಂದದಿ
ಗನ್ನಗತಕವ ವಿದ್ಯೆಯೆನಿಸುವುದೆಂದನಾ ಮುನಿಪ || ೨೦ ||

ಕರ್ತೃ ಭೋಕ್ತೃತ್ವಾದಿ ಭಾವವ
ಹೊತ್ತು ಸುಖದುಃಖಾನುಭವವ ಪ್ರ
ವರ್ತನೆಯ ವಾಸನೆಯು ಹಿಂಗದೆ ಹಿಡಿದ ಹಮ್ಮಿಂದ ||
ಕತ್ತಿ ಮೇಲಕೆ ತಳಗಿಳಿವ ಜೋ
ಲುತ್ತ ನಿನ್ನನು ಮರೆದಿಹುದು ತಾ
ನತ್ಯಧಮದಜ್ಞಾನವಾಸನೆಯಾದ ವಿದ್ಯೆಯದು || ೨೧ ||

ಆತುಮಂಗಜ್ಞಾನ ಸಂಸೃತಿ
ಕಾರಣತ್ವವದಿಲ್ಲ ಬುದ್ಧಿಯ
ಘಾತಿಸುವವಜ್ಞಾನ ಸುಜ್ಞಾನಂಗಳೆಂಬೆರಡು ||
ಭೂತ ಪಂಚಕ ದೇಹ ಚೈತ
ನ್ಯಾತಿಶಯದಿಂದವಜಡವಂತಿಹ
ದೋಷ ಲೋಹವು ಅಗ್ನಿಸಂಗದಿ ತೃಣವ ಸುಡುವಂತೆ || ೨೨ ||

ನಿನ್ನ ವಿದ್ಯಾ ವಾಸನೆಯೆ ಸಂ
ಪನ್ನ ಶಮದಮೆ ಶಾಂತಿ ಧೃತಿ ಶಾ
ಸ್ತ್ರೋನ್ನತಾಭಿಜ್ಞತೆ ವಿಚಾರ ವಿವೇಕ ನಿರ್ಮಲತೆ ॥
ನನ್ನದಲ್ಲೀ ಗೃಹ ಧನಾದಿಕ
ವೆನ್ನವಲ್ಲೀ ದೇಹವಿಂದ್ರಿಯ
ವನ್ಯ ಮನ ಬುದ್ಧಿಗಳೆನುತ ಕಾಂಬುದೆ ನಿಧಾನಿಸಲು ॥ ೨೩ ॥

ವಾಸನಾದ್ವಯವಳಿವಡೆಲಿ ಜಗ
ಧೀಶ ನಿಜಪದ ಶರಣ ಶರಣರ
ದಾಸಭಾವವು ದೊರಕವಹುದೇ ನಿನ್ನ ನಿಜ ಸೌಖ್ಯ ॥
ಹಾಸಿ ಹರಹಿದ ಹಮ್ಮು ಕೆಡದು ಮ
ಹಾ ಸಮುದ್ರದ ಭವವನೆಂದೂ
ಈಸಲರಿಯದು ನಿನ್ನ ಶರಣರ ಸಂಗವಿಲ್ಲದಡೆ ॥ ೨೪ ॥

ನಿನ್ನ ಶರಣರ ಸಂಗ ಫಲವಲಿ
ನಿನ್ನ ಪದಯುಗ ಭಕ್ತಿ ದೊರಕುವು
ದುನ್ನತದ ಭಕುತಿಯ ಮಹಿತ್ವದಿ ಮಾಯೆ ತೊಲಗುವಳು ॥
ಭಿನ್ನವಾದಾ ಮಾಯೆ ತೊಲಗಲು
ತನ್ನೊಳಗೆ ವಿಜ್ಞಾನ ಜನಿಸುವು
ದುನ್ನತಜ್ಞಾನವಲಿ ತಿಳಿದು ವಿಮುಕ್ತರಹರಿಂದ ॥ ೨೫ ॥

ಭಕ್ತಿ ಜನಿಸಿದ ನರಗೆ ಕಾಮ್ಯಾ
ಸಕ್ತಿ ಬಿಡುವುದು ವಿಷಯ ನಿಕರದಿ
ವ್ಯಕ್ತಿ ವಿಷಯವು ತೊಲಗೆ ಮೆಲ್ಲನೆ ಮಾಯೆ ತೊಲಗುವಳು ॥
ಪ್ರಕೃತಿ ಮಾಯೆಯು ತೊಲಗೆ ಯೋಗದ
ಮುಕುತಿ ಗುಣಸಂಪನ್ನ ಸರ್ವಾ
ತ್ಮಕನೆನಿಸಿ ನಿಜವರಿವ ಸದುಗುರು ದೊರಕುವನು ಬಳಿಕ ॥ ೨೬ ॥

ಗುರುಕರುಣ ಸೂರ್ಯ ಪ್ರಕಾಶವು
ನರರ ಹೃದ್ಗಗನದಲಿ ಬೆಳಗದೆ
ಹರಿಯದಜ್ಞಾನಾಂಧಕಾರವು ಮೂಢ ಮರ್ತ್ಯರಿಗೆ ||
ಗುರುವೆನಿಸಿ ನೀ ಜೀವಸಂತತಿ
ಕರಣವನು ತತ್ತ್ವಾರ್ಥ ವಾಕ್ಯದ
ಪರಮ ವಿಜ್ಞಾನದಲಿ ಬೆಳಗುವ ತಮವು ಕೆಡುವಂತೆ || ೨೭ ||

ಗುರುಕರುಣ ನಿಜಭಕ್ತಿಯಿಲ್ಲದೆ
ದೊರಕುವುದೆ ವಿಜ್ಞಾನ ಕಲ್ಪಾಂ
ತರ ಸಹಸ್ರಂಗಳಲಿ ಜನಿಸಿದಡೀ ಮನುಷ್ಯರಿಗೆ ||
ಪರಿಪರಿಯ ಬಹು ಕರ್ಮ ಭೇದಾಂ
ತರಗಳಲ್ಲಿಯು ಭಕ್ತಿಹೀನಗೆ
ಸೆರಗು ಸೋಂಕದು ತತ್ವಸಾಂಖ್ಯಜ್ಞಾನ ಪಥವೆಂದ || ೨೮ ||

ಅದು ನಿಮಿತ್ತಲೆ ರಾಮ ಕರುಣಾ
ಸ್ಪದನೆ ಜನ್ಮಾಂತರ ಸಹಸ್ರದ
ವಿದಿತ ಸುಕೃತವು ಬಂದೊದಗಿದಡೆ ನಿನ್ನ ಚರಣದಲಿ ||
ವಿದಿತ ಭಕುತಿಯ ಲೇಶ ಸೇರುವು
ದದರಿ ನಿನ್ನೀನವರ ಹೃದಯದ
ಪದುಮವನು ಗುರು ಕರುಣಕಿರಣದಲರಳಿಸುವೆ ಬಳಿಕ || ೨೯ ||

ತನಗೆ ನಿನ್ನ ಪದಾರವಿಂದದ
ಲನವರತ ಭಕುತಿಯನೆ ಮಾಡುವ
ಜನನವಾಗಲಿ ನಿನ್ನ ಭಕುತರ ಸಂಗಸುಖದೊಳಗೆ ||
ಅನವರತ ರಮಿಸುತ್ತ ವಿದ್ಯಾ
ಜನಿತವನು ಕಡೆಗಂಡು ನಿಲುವುದೆ
ಘನಕೆ ಘನವದರಿಂದ ಬೇರಿನ್ನಾವ ಪಥವೆಂದ || ೩೦ ||

ನಿನ್ನ ಭಕುತರು ಸಾಧುಗುಣ ಸಂ
ಪನ್ನ ಧರ್ಮಾಮೃತವ ವಪುಷವ
ಸನ್ಯರಿನ್ನವರೆಲ್ಲದೆಲ್ಲರಿಗೆರಹುತಿಹರಾಗಿ ॥
ಧನ್ಯರನು ಮಾಡುವರು ಲೋಕದ
ಭಿನ್ನಮೂಢರ ಸಹಿತ ಗಡಸ ಕು
ಲೋನ್ನತಿಯ ಪಾವನವ ಮಾಡುವುದಚ್ಚರಿಯೆಯೆಂದ ॥ ೩೧ ॥

ಜಯನಮೋ ಜಗದೀಶ ಭಕ್ತ
ಪ್ರಿಯನಮೋ ಜಯಭಕ್ತಿ ಭಾವನೆ
ಜಯಕೃಪಾನಿಧಿ ರಾಮಚಂದ್ರ ನಮೋನಮಸ್ತೇಸ್ತು ॥
ದಯವದುಳ್ಳೊಡೆ ಬಾಣವೆನ್ನಲಿ
ಜಯಿಸು ತನ್ನಾಚರಿತ ಕರ್ಮದ
ಚಯದ ಪಾಶಗಳೆಳೆಯದಂತೀ ಲೋಕಗತಿಗೆಂದ ॥ ೩೨ ॥

ಇಂತೆನಲಿಕಾ ಪರಶುರಾಮನ
ಮುಂತೆನಗೆ ನೀ ಮಿನುಗೆ ಸೀತಾ
ಕಾಂತಸತಿ ಸುಸ್ವಾಂತ ಶಾಂತದಲೆಂದನಾ ಮುನಿಗೆ ॥
ಸಂತವಿಡು ನಿನ್ನಂತರಂಗದ
ಚಿಂತಿತವ ಸಲಿಸಿದೆನಿದೀತ
ಕ್ಕಂತವವೆ ನಿನ್ನೊಳಗೆ ಸಂಶಯವಿಲ್ಲ ಕೇಳೆಂದ ॥ ೩೩ ॥

ಚಿತ್ತವಿಸು ರಘುನಾಥ ನಿನ್ನಲ
ದೆತ್ತಲಾನುಗ್ರಹವದುಳ್ಳೊಡೆ
ಭಕ್ತಿಯನು ನಿಜಭಕ್ತ ಸಂಗವನೀಯಬೇಕೆನಗೆ ॥
ಮತ್ತೆ ತಾನೆಂದೀ ಸ್ತುತಿಯದು
ವೃತ್ತನಾವದರು ನಿತ್ಯ ಪಠಿಸಲು
ಭಕ್ತಿಯನು ನಿನ್ನಲ್ಲಿ ಕರುಣಿಸಬೇಹುದವರಿಗೆಂದ ॥ ೩೪ ॥

ಆಗಲೆಂದಾ ರಾಮನೆನೆ ಬಳಿ
ಕಾ ಗುರುವ ಭಾರ್ಗವನು ಪದದಲಿ
ಬಾಗಿ ಬಲಬಂದೊಲಿದು ಪೂಜಿಸಿ ನೇಮವನು ಕೊಂಡು ||
ವೇಗದಿಂದ ಮಹೇಂದ್ರ ಪರ್ವತ
ಕಾಗಿ ನಡೆದನು ಪರಶುರಾಮನು
ನೀಗಿದನು ಬಂದಂತೆ ಸಂತಸವಾಯ್ತು ದಶರಥಗೆ || ೩೫ ||

ಅಪ್ಪ ಬಾ ಗುಣಧಾಮ ಬಾ ನ
ನ್ನಪ್ಪ ಬಾ ಭಾರ್ಗವನ ಗೆಲಿದನ
ನಪ್ಪಿಕೊಳುವೆನು ಯೆನುತ ಕೈಯನು ಮುಂದೆ ಚಾಚುತ್ತ ||
ಅಪ್ಪಿದನು ಹರುಷದಲಿ ಜಿತಕಂ
ದರ್ಪರಾಜಾಸನನೊ ಮಗ್ನುಯೆನು
ಶುಪ್ಪರದ ವಿಭವದಲಯೋಧ್ಯಾ ಪುರಕೆ ನಡೆತಂದ || ೩೬ ||

ಅಂದಳದಿ ಕೌಸಲ್ಯೆ ಮೊದಲಾ
ದಿಂದುಮುಖಿಯರು ಬರಲು ರಥದಲಿ
ಮುಂದೆ ಮುನಿಪ ವಸಿಷ್ಠನಾತನ ಹಿಂದೆ ದಶರಥನು ||
ಪೊಂದು ರಥದಲಿ ರಾಮ ಸೀತೆಯು
ದೊಂದಿರಲು ರಾಘವನ ಬೆಂಬಳಿ
ಹಿಂದೆ ಲಕ್ಷ್ಮಣ ಭರತ ಶತ್ರುಘ್ನರುಗಳೊಪ್ಪಿದರು || ೩೭ ||

ಸೂತ ಮಾಗಧ ವಂದಿಗಳ ವಿ
ಖ್ಯಾತ ಕೈವಾರಗಳ ನರ್ತನ
ಗೀತ ವಾದ್ಯದ ಕೊಂಬು ಕಹಳೆಯ ಭೇರಿಶಂಖಗಳ ||
ನೀತಿಹಾಸ್ಯ ವಿನೋದ ಗಜರಥ
ಜಾತಿ ತುರಗ ಭಢಾಳ ವರ ವಾ
ದಾತಿ ಮಂತ್ರಿ ಪ್ರಮುಖರೊಡನೈತಂದನಾ ರಾಮ || ೩೮ ||

ಸತ್ತಿಗೆಯು ಸುಳಿವುಗಳ ಚಾಮರ
ದೊತ್ತರ್ಗದ ಹಂಸೆಗಳ ಗಜರಥ
ಪೊತ್ತದೆಡಕುಡುವದ ಮಹಾಭಟರೇಡುವೊಲವುಗಳ ॥
ಸುತ್ತ ಚಿಮ್ಮುವ ತುರುಗದೆರೆಗಳ
ಲುತ್ತಮಾಯುಧನಕ್ರವಾದ್ಯ
ಧ್ವಸ್ತದಲಿ ಪಾಲ್ಗಡಲೊಯೆನೆ ರಂಜಿಸಿದನಾ ರಾಮ ॥ ೩೯ ॥

ರಾಮ ಬಂದನು ಭಕ್ತಜನ ಸು
ಕ್ಷೇಮ ಬಂದನು ಪುಣ್ಯಗುಣಗಣ
ನಾಮ ಬಂದನು ನೋಳ್ಪಜನರಭಿರಾಮನಿದೆ ಬಂದ ॥
ಸ್ವಾಮಿ ಬಂದನು ರವಿಕುಲೋತ್ಪಲ
ಸೋಮ ಬಂದನು ರೂಪನಿರ್ಜಿತ
ಕಾಮಬಂದನೆಸುತ್ತ ಹರಿದುದು ದೂತರುರವಣಿಸಿ ॥ ೪೦ ॥

ಬರವ ಕೇಳುತ ಪಟ್ಟಣದ ಜನ
ವಿರಚಿಸಿದರುಗೊಂಡುತ್ಸವದ ಪರಿ
ಪರಿಯ ಗುಡಿ ತೋರಣ ಪತಾಕಾ ಕಲಶ ಕನ್ನಡಿಯ ॥
ತರತರದ ಹೊಂದಳಿಗೆ ದೂರ್ವಾ
ಕುರದವರ್ಘ್ಯಕ್ಷತೆ ತುಲಾಂಜನ
ಕುರವ ಹೂವಲಿ ರಂಗವಲಿಗಳಲೆಸೆದುದಾ ನಗರ ॥ ೪೧ ॥

ಏರಿದರು ಮಣಿ ಮಾಡವನು ಪುರ
ನಾರಿಯರು ಶೃಂಗರಿಸಿ ಕುಸುಮವ
ಹೇರಿದರು ಸಿರಿರಾಮ ಶಿರದಲಿ ವಾರನಾರಿಯರು ॥
ತೋರಿ ಬಳಿದರು ಸೊಡರುಗಳನು
ಪ್ಪಾರತಿಯನಕ್ಷತೆಯ ವಿಪ್ರರು
ಬೀರಿದರು ಹಾರಿದರು ರಾಮನ ನೋಡಿ ಹರುಷದಲಿ ॥ ೪೨ ॥

ಕಂಡು ಕಾಣಿಕೆಯಿತ್ತು ನೋಳ್ಪರ
ತಂಡಕೂಡಿದಿರಿಪ್ಪ ನಾರೀ
ತಂಡಸುತ್ತೊತ್ತೊತ್ತಿ ಸುಳಿಸುಳಿದಾಡುವರ ತಂಡ ||
ಹಿಂಡು ಕನ್ನೆಯ ರಾಯ ರಾಯರ
ತಂಡ ವಿಪ್ರವಧೂಜನಂಗಳ
ತಂಡ ಸಂದಣಿಸಿತ್ತು ರಾಮಪುರಪ್ರವೇಶದಲಿ || ೪೩ ||

ಆವಮೋಹನ ಮೂರ್ತಿಯೋ ಮೇ
ಣಾವಪಾವನ ಕೀರ್ತಿಯೋ ಶ್ರೀ
ದೇವಿ ಮರುಳಹರುಳಿದರನು ಮೋಹಿಸುವದಚ್ಚರಿಯೆ ||
ಆವನಾಗಲಿ ರಾಮನೆನ್ನನು
ಭಾವಿಸನು ಯೆಂಬವರ ಕಾಣೆನು
ದೇವ ಪರಮಾತುಮಗೆ ಸರಿಯಲ್ಲವೆ ಸಮಸ್ತರಲಿ || ೪೪ ||

ಬಳಿಕ ತತ್ತಸ್ಥಳವಲೆಲ್ಲರ
ನಿಲಿಸಿ ಸುಮುಹೂರ್ತದಲಿ ಹೊಕ್ಕನು
ನಿಳೆಯುವನು ದೇವೇಂದ್ರ ರಾಜೋಪಮ ಮಹಾಗೃಹವ ||
ಸಲಿಸಿ ತಾಯ್ ತಂದೆಯರಿಗಿಚ್ಛಿತ
ದೊಲವ ನಿಜನಿಜ ನಾರಿಯರು ಸಹ
ನಲಿವುತಿರ್ದರು ರಾಮಲಕ್ಷ್ಮಣ ಭರತ ಶತ್ರುಹರು || ೪೫ ||

ಸೀತೆ ಸಹಿತಾ ರಾಮನಾ ಸಾ
ಕ್ಷಾತ ವೈಕುಂಠದವೊಲಿರಲಾ
ಮಾತೃಪಿಯ ಯುಧಾಜಿತಾಕ್ಷನ ಮರೆಗೆ ಭರತಾಂಕ ||
ಆತನನು ಕಂಡುಚಿತದಲಿ ಸಂ
ಪ್ರೀತಿಯಲಿ ಶತ್ರುಘ್ನಸಹಿತವೆ
ನೇತಿಗಳೆದನು ಹಲವು ದಿನ ಕೇಕೆಯನ ರಾಜ್ಯದಲಿ || ೪೬ ||

ಇತ್ತ ಕೌಸಲೆಗತಿ ಮುದವನೀ
ವುತ್ತ ಸೀತಾಂಗನೆ ಸಹಿತ ರಘು
ಸತ್ತಮನು ರಂಜಿಸಿದನಿಂದ್ರಶಚೀಯರತಿಶಯಿಸಿ ॥
ಉತ್ತಮಾಯೋಧ್ಯೆಯಲಿ ಗುಣಗಣ
ಕೀರ್ತಿ ವಿಸ್ತಾರಿತ ಜಗನ್ಮಯ
ನುತ್ತಮೋತಮ ಹೃದಯ ಪರಮಾನಂದ ಸುಖಸಾಂದ್ರ ॥ ೪೭ ॥

ನಿತ್ಯ ನಿರ್ಗುಣ ನಿರ್ವಿಕಾರ ನಿ
ರಸ್ತಮಾಯಾ ನಿರಿಹ ನಿರ್ಮಲ
ಪ್ರತ್ಯಗಾತ್ಮ ಪರಾತ್ಮ ಮುಖ್ಯ ಪ್ರತ್ಯಯಾತೀತ ॥
ವಸ್ತುವಾಗಿಯು ನಿಜವಿನೋದದಿ
ಹೊತ್ತು ನರರೂಪವನು ಮಾಯಾ
ಪ್ರಸ್ತುತದಲಿಂತೊಪ್ಪುತಿದ್ದನು ದೇವ ನಿಖಿಲೇಶ ॥ ೪೮ ॥

ಎಂಟನೆಯದೀ ಸಂಧಿ ಪದಗಳ
ಗಂಟು ಋತು ಮದ ಗುಣಿತವಿಲ್ಲಿಗೆ
ಪಂಥಿಸಿತು ವರ ಬಾಲಕಾಂಡವಯೋಧ್ಯ ಕಾಂಡವದು ॥
ನಂಟುವಡೆವುದು ಮುಂದೆ ಕಾಮಿತ
ವೆಂಟೊಡಲ ಶಿವನೆಂಬ ಮಹಿಮೆಯ
ಲುಂಟು ಗುರು ನಿತ್ಯಾತ್ಮ ನೃಸಿಂಹನೊಲವಿನಲಿ ॥ ೪೯ ॥

ಅಂತು ಸಂಧಿ ೮ ಕ್ಕೆ ಪದ ೩೩೨ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ
ಶ್ರೀ

## ಬಾಲಕಾಂಡ ಮುಗಿದುದು

—೦—

ಸ್ವಸ್ತಿಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು ||೧||

ಕಾಲೇ ವರ್ಷತು ಪರ್ಜನ್ಯಃ
ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತೋ
ಸಜ್ಜನಾಃ ಸಂತು ನಿರ್ಭಯಾಃ ||೨||

ಅಪುತ್ರಾಃ ಪುತ್ರಿಣಃ ಸಂತು
ಪುತ್ರಿಣಃ ಸಂತು ಪೌತ್ರಿಣಃ |
ಅಧನಾಃ ಸಧನಾ ಸಂತು
ಜೀವಸ್ತು ಶರದಾಂ ಶತಮ್ ||೩||

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್ |
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ||೪||

ಯದಕ್ಷರ ಪದಭ್ರಷ್ಟಂ
ಮಾತ್ರಾಹೀನಂ ತು ಯದ್ಭವೇತ್ |
ತತ್ಸರ್ವಂ ಕ್ಷಮ್ಯತಾಂ ದೇವ
ನಾರಾಯಣ ನಮೋಽಸ್ತು ತೇ ||೫||

|| ಶ್ರೀ ಕೃಷ್ಣಾರ್ಪಣಮಸ್ತು ||



# ಅಧ್ಯಾತ್ಮ ರಾಮಾಯಣ

## ಅಯೋಧ್ಯಾಕಾಂಡ



ಹಿತ್ವೈವ ಯೋ ಭೂಪತಿಮಾತ್ತರಾಜಂ ವನಂ ಗತಸ್ತೇನ ನ ಸೋದಿತೋಽಪಿ
ತಂ ಲೀಲಯಾಹ್ಲಾದವಿಷಾದಶೂನ್ಯಂ ಶ್ರೀಜಾನಕೀಜೀವನಮಾನತೋಽಸ್ಮಿ ||

## ॥ ಶ್ರೀ ರಾಮಚಂದ್ರಧ್ಯಾನಮ್ ॥

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥ ೧ ॥

ವೈದೇಹೀ ಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಮ್ ।
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ ॥ ೨ ॥

ವಾಮೇ ಭೂಮಿಸುತಾ ಪುರಶ್ಚ ಹನುಮಾನ್ ಪಶ್ಚಾತ್ ಸುಮಿತ್ರಾಸುತಃ
ಶತ್ರುಘ್ನೋ ಭರತಶ್ಚ ವಾಮದಳಯೋರ್ವಾಯ್ವಾದಿಕೋಣೇಷು ಚ ।
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್
ಮಧ್ಯೇ ನೀಲಸರೋಜಕೋಮಲರುಚಿಂ ರಾಮಂ ಭಜೇ ಶ್ಯಾಮಲಮ್ ॥ ೩ ॥

ರಾಮಂ ರಾಮಾನುಜಂ ಸೀತಾಂ ಭರತಂ ಭರತಾನುಜಮ್ ।
ಸುಗ್ರೀವಂ ವಾಯುಸೂನುಂ ಚ ಪ್ರಣಮಾಮಿ ಪುನಃ ಪುನಃ ॥ ೪ ॥

ನಮೋಸ್ತು ರಾಮಾಯ ಸಲಕ್ಷ್ಮಣಾಯ
ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ ।
ನಮೋಽಸ್ತು ರುದ್ರೇಂದ್ರ ಯಮಾನಿಲೇಭ್ಯೋ
ನಮೋಽಸ್ತು ಚಂದ್ರಾರ್ಕಮರುದ್ಗಣೇಭ್ಯಃ ॥ ೫ ॥

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ ।
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಮ್ ॥ ೬ ॥

ವಾಲ್ಮೀಕಿಗಿರಿ ಸಂಭೂತಾ ರಾಮಸಾಗರಗಾಮಿನೀ ।
ಪುನಾತು ಭುವನಂ ಪುಣ್ಯಾ ರಾಮಾಯಣ ಮಹಾನದೀ ॥ ೭ ॥

ಶ್ಲೋಕಸಾರಸಮಾಕೀರ್ಣಂ ಸರ್ಗಕಲ್ಲೋಲಸಂಕುಲಮ್ ।
ಕಾಂಡಗ್ರಾಹಮಹಾಮೀನಂ ವಂದೇ ರಾಮಾಯಣಾರ್ಣವಮ್ ॥ ೮ ॥



|| ಸ್ವಸ್ತಿ || ಶ್ರೀ ಗಣಗಣೇಶಾಯ ನಮಃ || ಶುಭಮಸ್ತು ||
ನಿರ್ವಿಘ್ನಮಸ್ತು || ಶ್ರೀ ಗೋಪಾಲಕೃಷ್ಣಾಯ ನಮಃ ||
|| ಶ್ರೀ ರಾಮಚಂದ್ರಾಯ ನಮಃ ||

# ಅಧ್ಯಾತ್ಮ ರಾಮಾಯಣ



## ಅಯೋಧ್ಯಾ ಕಾಂಡ

### ಒಂಭತ್ತನೆಯ ಸಂಧಿ

**ನಾರದನು ರಾಮನಿಗೆ ಭೂಭಾರಹರಣಕಾರ್ಯ ನಿವೇದಿಸಿದ್ದು**

ಸೂಚನೆ || ನಾರದನು ಲೋಕೋಪಕಾರ ವಿ
ಶಾರದನು ಭೂಭಾರ ಹರಣದ
ಕಾರಿಯವ ಬಿನ್ನವಿಸಿದನು ಶ್ರೀ ರಾಮಚಂದ್ರಂಗೆ ||

ಪದ || ಶ್ರೀನುದವಾರ ಮುನೀಂದ್ರ ವಂದಿತ
ಕಾಮಹರ ಕಮನೀಯ ಗುಣಗಣ
ನಾಮರಕ್ಷಿತಲೋಕ ಸಕಲಾಧಾರ ಸರ್ವೇಶ ||
ವ್ಯೋಮಕೇಶ ಮಹೇಶ್ವರನು ತಾ
ನೇ ಮುದದಿ ಪಾರ್ವತಿಗಯೋಧ್ಯಾ
ರಾಮಕಾಂಡವ ಕರುಣಿಸಿದನೀ ಲೋಕಹಿತವಾಗಿ || ೧ ||

ಗಿರಿಜೆ ಕೇಳೊಂದುದಿನ ವಂತಃ
ಪುರದೊಳಗೆ ಶ್ರೀರಾಮನೆಸೆದನು
ಪರಮವಿಭವದ ರತ್ನ ಸಿಂಹಾಸನ ಸುಖಾಸನದಿ ||
ನಿರುಪಮದ ನೀಲೋತ್ಪಲಾಂಗದ
ಪರಿಪರಿಯ ಸರ್ವಾಂಗ ಭೂಷಣ
ದರಹಸಿತ ಕೌಮುದಿಯ ಮುಖ ಪಂಕಜವಲೆಸೆದಿರ್ದ || ೨ ||

ಮಿಸುಪ ರತುನದ ರತುನಕಾಂತಿಯ
ಕುಸುಮ ಶೋಭಿತ ಸಿರಿಮುಡಿಯ ಮಧು
ರಸಕೆಳಸುವಳಿಕುಲದೊಡನೆ ಮಾರ್ಪೊಳೆವ ಸುಳಿಗುರುಳ ||
ನೊಸಲ ತಿಲಕದ ಭ್ರೂಲತೆಯ ಕೆಂ
ಪೆಸೆವಕಡೆಗಂಗಳ ಸುನೋಟದ
ವಿಸರುಹಾನನ ವಂತ ಪಂಕ್ತಿಗಳೆಸೆಯೆ ರಂಜಿಸಿದ || ೩ ||

ಮಕರ ಕುಂಡಲ ತಾಂಡವದ ನಾ
ಸಿಕವ ಗಂಡಸ್ಥಳವರುಣ ರೋ
ಚಕ ಸುಬಿಂಬಾಧರದ ಚಿಬುಕದ ಕೊರಳ ರೇಖೆಗಳ ||
ಪ್ರಕರ ಹಾರದ ವೈಜಯಂತಿಯ
ಮುಕುಳ ವನಮಾಲೆಯ ಸುಕೌಸ್ತುಭ
ಯುಕುತ ವಲ್ಗೂದರದ ನಾಭೀಪ್ರವದಲೆಸೆದಿರ್ದ || ೪ ||

ಉಟ್ಟ ಪೀತಾಂಬರದ ಮುರುಕಿನ
ಕಟ್ಟ ಬಿಗಿದಿರು ಮಲ್ಲ ಗಂಟಿನ
ಲಿಟ್ಟ ಮಣಿಮೇಖಲೆಯ ಚಾರು ನಿತಂಬ ಶೋಭೆಗಳ ||
ಥಟ್ಟವಿಪ ಭಾಸೆಗಳ ಕೆಳಗಿಳಿ
ಬಿಟ್ಟ ಬದ್ದುಗೆ ದಾರ ರಂಭಾ
ಚೇಷ್ಟದೂರುದ್ವಯದ ಜಾನುದ್ವಯಕಳತೊಪ್ಪಿದನು || ೫ ||

ನೀಲರತುನದಿ ಕಡೆದು ಮಾಡಿದ
ಸಾಲಭಂಜಿಕೆಯೆನಲು ಜಂಘೆ ವಿ
ಶಾಲ ಗುಲ್ಫದ ಹಾಹೆದೊಡರಿನ ಸ್ವರ್ಣ ತಾವರೆಯ ||
ಹೋಲಿಸುವ ಪದಯುಗದ ಬೆರಳುಗ
ಳೋಳಿಗಳ ನಖಚಂದ್ರಕಾಂತದ
ಸಾಲೆಸಲು ತಳಗತ ಸುರೇಖಾವಳಿಯಳೆಸೆದಿರ್ದ || ೬ ||

ಚಾರು ಭುಜಕಂಕಣದ ತೋಳ್ಬಳೆ
ವೀರಮುದ್ರಿಕೆವೆರಳ ವಿಭವದ
ಸಾರರಸತಾಂಬೂಲ ಚರ್ವಣದಿಂ ವಿನೋದವಸು ||
ಧಾರುಣೀಸುತೆಯೊಡನೆ ಹಾಸ್ಯ ವಿ
ಹಾರದಿಂದಿರೆ ನಿಂತು ರತುನ
ಸ್ಫಾರ ಚಾಮರವಿಡಿದು ಭಜಿಸುತ್ತಿರ್ದಳಾ ಸೀತೆ || ೭ ||

ಆ ಸಮಯದಲಿ ರಾಮನಿದ್ರಾ
ವಾಸಕಂಬರದಿಂದಿಳಿದುದಾ
ಭಾಸಕೋಟಿ ಶಶಾಂಕ ಶುದ್ಧ ಸ್ಫಟಿಕ ತೇಜದಲಿ ||
ವಾಸನಾ ವಿರಹಿತದ ತೇಜೋ
ರಾಶಿಯಾದಾತರ್ಕ್ಯಚಿತ್ತಿನ
ಕೋಶವೆನಲೈತಂದನಾ ನಾರದ ಮಹಾ ಮುನಿಪ || ೮ ||

ಬಿಟ್ಟ ಕೆಂಜೆಡೆ ನೊಸಲ ತಿಲಕದ
ತೊಟ್ಟ ತುಲಸೀ ವಿಸರುಹಾಕ್ಷ ವಿ
ಶಿಷ್ಟದಾಮದ ರಾಮನಾಮನಿರಂತರದೋತ್ಸವದ ||
ಹೃಷ್ಟಮಾನಸದೃಷ್ಟಿ ನಿಜವನು
ಮುಟ್ಟ ಮುಂದರಿಯದೆ ಬರುತ್ತಿರೆ
ಯುಷ್ಟಭೂತಿಗಳೊಡೆಯನೆದ್ದನು ಧಿಗಿಲಸಿದಿರಾಗಿ || ೯ ||

ರಾಮನಿಜಶಿರದಲ್ಲಿ ಕರಯುಗ
ತಾಮರಸವನು ಮುಗಿದು ಸೀತಾ
ಭಾಮೆ ಸಹಿತಾಸನವನಿತ್ತುಪಚಾರವನು ಮಾಡಿ ॥
ಭೂಮಿಯಲಿ ದಂಡಪ್ರಣಾಮವ
ನಾ ಮುನಿಸುತನೆರಗಿ ವಿನಯೋ
ದ್ಧಾಮನಿದಿರಲಿ ನಿಂತು ಕೈಮುಗಿದೆಂದನುಚಿತದಲಿ ॥ ೧೦ ॥

ದುರ್ಲಭವಲಾ ಮುನಿಪ ನಿಜಪದ
ಪಲ್ಲವದ ದರ್ಶನವೆನಗೆ ಬಹು
ಖುಲ್ಲ ವಿಷಯಾಸಕ್ತರಿಗೆ ಸಂಸಾರಯುಕ್ತರಿಗೆ ॥
ಬಲ್ಲರಾರಿವ ಪೂರ್ವ ಜನ್ಮದ
ಲುಳ್ಳ ಸುಕೃತ ಮಹೋದಯದ ಬೆಳೆ
ಯಿಲ್ಲಿ ಸಂಭವಿಸಿತ್ತು ನಿರಪೇಕ್ಷತೆಯಲೆಂದೆಂದ ॥ ೧೧ ॥

ಘೋರಸಂಸಾರದಲಿ ಕುದಿವರಿ
ಗಾರುಗತಿ ನೀನಲ್ಲದಲೆ ಮುನಿ
ವೀರ ಮಿಕ್ಕಿನ ಕರ್ಮಕೋಟಿಯವುಂಟೆ ನಿಮ್ಮಡಿಯ ॥
ಚಾರುದರುಶನದಂತೆ ನಿಜ ಸುಖ
ಸೇರಲರಿವುದೆ ತನ್ನ ಜನ್ಮದ
ಭೂರಿಫಲ ಫಲಿಸಿತು ಕೃತಾರ್ಥ ಕೃತಾರ್ಥ ನಾನೆಂದ ॥ ೧೨ ॥

ಏಕೆ ನಿಮಗಾಚರಣೆ ನೋಡಲು
ಲೋಕದಜ್ಞಾನಿಗಳ ಕಂಗಳ
ನಾಕರಿಸೆ ಸುಳಿದಾಡುತಿರಲಾ ಪುಣ್ಯಪೂರುಷರು ॥
ಬಾಕುಳಿಗರಂತಲ್ಲ ಸರ್ವ ವಿ
ದೇಕವೈಸಲೆ ನಿಮಗೆ ಕರುಣಿಸ
ಬೇಕು ಬಿಜಯಂಗೈದಿರಿನ್ನಲಿ ಕೃತ್ಯವೇನೆಂದ ॥ ೧೩ ॥

ಎನಲು ರಾಮನ ಭಕ್ತವತ್ಸಾ
ಯನವ ಸುಡಿಯಲಿ ನಾರದನ ಮನ
ನೆನೆಮ ಬಿನ್ನವಿಸಿದನು ನೋಡುತ ಸಿರಿಮುಖಾಂಬುಜವ ||
ಮನವನೆಮ್ಮನು ಮೋಹಿಸುವೆ ಬಾ
ಪನುಪಮನೆ ರಘುನಾಥ ಸಾತ್ವತ
ಜನವಸಹ ಲೋಕಾನುಸಾರ ವಿಹಾರದಿಂದೆಂದ || ೧೪ ||

ಯಂದೆ ನೀ ಸಂಸಾರಿಯೆಂದೆಲೆ
ತಂದೆ ಸಂಶಯವಿಲ್ಲ ನಿಜನುಡಿ
ಕುಂದುವುದೆ ಜಗದಾದಿ ಕಾರಣ ಮಾಯೆಯೆಂಬವಳು ||
ಸಂದೆಹವೆ ನಿಜಗೃಹಿಯಲವಳಿಂ
ಮುಂದೆ ನಿಜ ಚೈತನ್ಯವೀರ್ಯಗ
ಳಿಂದ ಜನಿಸುವರಜಸುರಾದಿಗಳೆಂದನಾ ಮುನಿಪ || ೧೫ ||

ದೇವ ನಿನ್ನಾಶ್ರಯದಿ ಮಾಯಾ
ದೇವಿ ಪಡೆವಳು ತ್ರಿಗುಣ ಪುತ್ರರ
ನಾವ ನೆನೆವರ ಶುಕ್ಲ ಲೋಹಿತ ಕೃಷ್ಣ ಸಂಜ್ಞರನು ||
ಭಾವಿಸಲು ಸಾತ್ವಿಕವೆ ಶುಕ್ಲವು
ಕೇವಲದ ರಾಜಸವೆ ಲೋಹಿತ
ಹೇವರಿಸುವಾ ತಮವೆ ಕೃಷ್ಣವು ಯೆಂದನಾ ಮುನಿಪ || ೧೬ ||

ಸತ್ವಪುತ್ರರು ದಿವಿಜರೀ ಜಡ
ಮರ್ತ್ಯರೇ ರಾಜಸರು ತಾಮಸ
ರತ್ಯಧಮ ಪ್ರಾಣಿಗಳು ತಿರ್ಯಗ್ಜಂತು ಜಾಲಗಳು ||
ಮತ್ತೆ ಲೋಕವೆ ಗೃಹವದರಿವಾ
ವೃತ್ತಿಗುಹೆಯರಿವಿನೊಳು ನೀನಿಹೆ
ನಿತ್ಯನಾದ ಗೃಹಸ್ಥ ನೀನಹುದೆಂದನಾ ಮುನಿಪ || ೧೭ ||

ರಾಮ ನೀನಜ ವಾಣಿ ಜಾನಕಿ
ರಾಮನೀ ಶಿವನಗಜೆ ಜಾನಕಿ
ರಾಮನೀನು ಶಶಾಂಕ ಜಾನಕಿ ರೋಹಿಣೀ ದೇವಿ ||
ರಾಮ ನೀ ರವಿ ಜಾನಕಿಪ್ರಭೆ
ರಾಮ ನೀ ವಲವೈರಿ ಶಚಿಯೇ
ಭೂಮಿಸುತೆ ನೀನಗ್ನಿ ಸೀತಾದೇವಿಯೇ ಸ್ವಾಹೆ || ೧೮ ||

ರಾಮ ನೀ ಯಮ ಸೀತೆಸಂಯಮಿ
ದೇವ ನೀ ನಿರುಋತಿಯು ಸೀತಾ
ದೇವಿತಾಮಸಿ ವರುಣನೀ ಭಾರ್ಗವಿಯಲಾ ಸೀತೆ ||
ಪಾವಕಪ್ರಿಯ ನೀನು ಗತಿಯೇ
ದೇವಿ ಜಾನಕಿ ನೀ ಕುಬೇರನು
ದೇವಿ ಸಂಪದಿ ಸೀತೆಯಲ್ಲಿ ರಾಮ ಧಿಟಕೆಂದ || ೧೯ ||

ಲೋಕದೊಳಗಣನಾರಿಶಬ್ದಾ
ನೀಕವೆಲ್ಲವು ಸೀತೆ ಪುರುಷರ
ವಾಕದೆಲ್ಲವು ರಾಮನೀನಲ್ಲಿ ವಿಚಾರಿಸಲು ||
ಏಕಸೂತ್ರದ ಮಣಿಗಣದ ಪರಿ
ಲೋಕ ಮೂರನು ನೀನೆ ಸೃಜಿಸಿತ
ದಾಕೃತಿಯ ಪುರುಷ ಪ್ರಕೃತಿಯಾಗಿಹರಲಾಯೆಂದ || ೨೦ ||

ನೆಗೆದಹಂಕೃತಿ ಬುದ್ಧಿ ಪ್ರಾಣಾ
ದಿಗಳು ಪಂಚದಶೇಂದ್ರಿಯವು ತ
ತ್ರೊಗಸು ಭೂತವು ಜನನ ಮರಣವು ದುಃಖಸುಖಸಹಿತ ||
ಬಗೆವಡದುದೇ ಲಿಂಗ ಜೀವನ
ಬೆಗಡಿವಕ್ಕೆಯನಾದಿ ವಿದ್ಯೆಯ
ಬಗೆಗೆ ಕಾರಣವಾದುಪಾಧಿಯೆ ತಾನೆ ಯೀಶ್ವರನು || ೨೧ ||

ಜಾಗರಣ ಸಪುನವು ಸುಷುಪ್ತಿ ಏ
ಭಾಗವಲ್ಲಿಹ ವಿಶ್ವ ತೈಜಸ
ವೋಗೆ ಪ್ರಾಜ್ಞರದಕ್ಕೆ ಜೀವರು ತಸುವನವ ಮೂರ ||
ಸಾಗಿಸುವರಾ ಸ್ಥೂಲ ಸೂಕ್ಷ್ಮವು
ಭೋಗಸ್ವಜ್ಞಾಂಹಯುವ ಪ್ರಕೃತಿಯು
ಲಾಗಿದಕೆ ತತ್ಸಾಕ್ಷಿಪುರುಷನು ರಾಮ ನೀನೆಂದ || ೨೨ ||

ಪಂಚಭೂತ ಪ್ರಾಣ ಪಂಚಕ
ಪಂಚ ಕರ್ಮೇಂದ್ರಿಯವು ವಿಷಯದ
ಪಂಚ ಬುದ್ಧೀಂದ್ರಿಯವು ಮನಮತಿ ಹಮ್ಮು ಚಿತ್ತಸಹ ||
ಪಂಚ ಜೀವನವಸ್ಥೆ ಸಹಿತೀ
ಸಂಚ ಪ್ರಕೃತಿಯು ಸೀಕೆಯಿದನೆರಿ
ದುಂಚಲಿಸದಿಹ ನಿತ್ಯನಿರ್ಗುಣ ರಾಮ ನೀನೆಂದ || ೨೩ ||

ನಿನ್ನಲೀ ಮಾಯಾ ವಿಲಾಸದ
ಭಿನ್ನಭೇದ ಪ್ರಕೃತಿ ತೋರ್ಪುದು
ನಿನ್ನ ಲೀಲೆಯಲಿಹುದು ನಿನ್ನಲಿ ಕಡೆಗೆ ಲಯಿಸುವುದು ||
ಗನ್ನಗತಕದ ನೇಣಿನಲ್ಲಿಯು
ಯೆನ್ನಲಹಿಗುಣ ನೇಣಿಗುಂಟೇ
ಭಿನ್ನಜೀವಜ್ಞಾನ ನಿನ್ನಲಿ ನೇಣುರಗನಂತೆ || ೨೪ ||

ಶುದ್ಧ ಮತಿಯಲಿ ನಿನ್ನಲರಿಯಲು
ಬುದ್ಧಿ ಚಿನ್ಮಯ ರೂಪ ವಿರಹಿತ
ಸದ್ವಯಿತ ನಿರ್ಲಕ್ಷ್ಯ ನಿರುಪಮ ನಿರ್ವಿಕಾರಾತ್ಮ ||
ಬದ್ಧ ಸುಖದುಃಖಾದಿ ಭೇದದ
ಶುದ್ಧಿಯಿಲ್ಲದೆ ತೋರದೇನೂ
ನಿದ್ದೆಯಂದದಲಿಹರು ನಿನ್ನನು ತಿಳಿದು ಬಳಿಕೆಂದ || ೨೫ ||

ಸಕಲವ್ಯ ನೀ ರಾಮ ನಿಸ್ಕಲಿ
ಸಕಲವಡಗಿಹುದಾವ ಕಾಲಕು
ಸಕಲ ನಿಷ್ಕಳವಾದಿ ಪುರುಷ ಪ್ರಕೃತಿಯೆನಿಸುತಿಹೆ ॥
ಸಕಲ ನಿಷ್ಕಳದೊಳಗೆ ಪೂರ್ಣಾ
ತ್ಮಕನದಾಗಿರೆ ನೀನೆ ಬೇರಿಂ
ಬುಕುತಿ ಮೂಢಜ್ಞಾನವಲ್ಲಾ ರಾಮ ಧಿಟಕೆಂದ ॥ ೨೬ ॥

ಕಲ್ಪನೆಯ ಸಂಸಾರ ವಿಷಯದ
ಲಲ್ಪಸುಖವಿಂದ್ರಿಯದ ಬಯಕೆಯ
ಮುಪ್ಪು ದಿವ್ಯಜ್ಞಾನಕಾ ಬಯಕೆಗಳನೀನುವನು ॥
ಕಲ್ಪಿಸದೆ ಕಂಗೆಡದೆ ಕಾಲ ಮು
ಖ ಪ್ರಸಾದವ ದೇಹ ಧರ್ಮಕೆ
ನಿಷ್ಪ್ರಪಂಚಕ ಪಡೆದ ಬುಧರಿಗೆ ನೀನೆ ನಿಜವೆಂದ ॥ ೨೭ ॥

ಬರಿದೆ ಹಂಬಲಿಸುತ್ತ ಮೂಢರು
ಬೆರಗು ಮಾಡುವ ನಾಮರೂಪದ
ಲೆರಗಿ ನಟನಾಟಕಕೆ ಸಿಕ್ಕುತ ರಜ್ಜು ಫಣಿಯೆಂದು ॥
ಹೊರಗೆ ಸಾರುವನಂತೆ ನಿನ್ನುವ
ನರಿವ ಭಕ್ತಿಗೆ ಬಾರದೆಂದೂ
ಕುರಿಗಳಾದರು ಕಾಲಮಾರಿಗೆ ಶಿವಶಿವಾಯೆಂದ ॥ ೨೮ ॥

ಇಲ್ಲದಿಪ್ಪಡೆ ನೀನು ದೇಹದ
ಲುಳ್ಳ ಸುಖದುಃಖಾನುಭವವನು
ಬಲ್ಲಬುದ್ಧಿಯನಾವನರಿವನು ಅರಿವು ಮರವೆಗಳ ॥
ಎಲ್ಲ ಮರೆದಿದ್ದೊರಗಿದೆನು ಮ
ತ್ತಿಲ್ಲ ಕಂಡೆನೆನಿಪ್ಪ ಭಯ ನೀ
ನಲ್ಲದರಿವದರಾರು ರಾಘವ ಯೆಂದನಾ ಮುನಿಪ ॥ ೨೯ ॥

ತೋರದಲ್ಲಿಯು ತೋರಿದಂತಿಹೆ
ತೋರಿದಿಲ್ಲಿಯು ತೋರದಂತಿಹೆ
ತೋರಿತೋರದ ವಸ್ತುವಲ್ಲೈ ರಾಮ ನೀ ಧಟಕಿ ||
ತೋರಿತೆಂಬುದು ತೋರದೆಂಬುದು
ನೀರೆ ಮಾಯಾ ಶಕ್ತಿ ನಿನ್ನಯ
ನೀರ ಪದಯುಗ ಭಕುತರದ ನೆರೆ ಏಂ ಸುಖಿಯಹರು || ೩೦ ||

ನಿನ್ನನರಿವು ಜ್ಞಾನ ಸೇರುವು
ಭಿನ್ನ ಮೋಹಗಳೆಲ್ಲ ಕೆಡುವುದು
ನಿನ್ನನರಿವಜ್ಞಾನ ಪದಯುಗ ಭಕ್ತರಿಗೆಯಹುದು ||
ನಿನ್ನ ಭಕ್ತಿಯೆ ಮುಕ್ತಿ ಕಾಮಿನಿ
ಯನ್ನು ಸಾಧಿಸಿಕೊಡುವ ಸಾಧಕಿ
ನಿನ್ನ ಭಕ್ತಿವಿಹೀನರರಿತಜ್ಞಾನವದು ಹೀನ || ೩೧ ||

ನಿನ್ನ ನೆರೆ ಭಜಿಸುತ್ತ ನೆನೆವುತ
ನಿನ್ನ ನಮಿಸುತ ಪೂಜಿಸುತ ಸಂ
ಪನ್ನ ಮಹಿಮೆಯ ಕೇಳುತನುದಿನ ನಿನ್ನ ನಾಮವನು ||
ನಿನ್ನ ಕೀರ್ತಿಸುತಖಿಳ ವಿಷಯದ
ಗನ್ನಗುಳಿಯಲಿ ಬೀಳದೆಲೆ ಸಂ
ಪನ್ನ ರಾಘವ ನಿನ್ನನಯ್ದುವರೆಂದನಾ ಮುನಿಪ || ೩೨ ||

ನಿನ್ನ ಕಿಂಕರ ಕಿಂಕರನು ನಾ
ನೆನ್ನ ಮಾನುಷ ಲೀಲೆಯಲಿ ಕರು
ಣಾರ್ಣವನೆ ಮೋಹಿಸುವೆನೆನ್ನ ಗುರುತ್ವವನು ಮಾಡಿ ||
ನಿನ್ನ ನಾಭಿಯುಲಜನಜಂಗು
ತ್ಪನ್ನನಾದೆನು ತಾನು ದೇವರ
ಮನ್ನಣೆಯ ಮೊಮ್ಮಗನು ರಾಘವನೆಂದನಾ ಮುನಿಪ || ೩೪ ||

ತನಗೆ ರಾಘವ ನಿನ್ನ ಚರಣದ
ಲನವರತ ಭಕುತಿಯನೆ ಕರುಣಿಸು
ಯೆನುತ ಗದ್ಗದಗಳದಲಾನಂದಾಶ್ರು ಜಲವುಗಲು ||
ತನು ನೆನೆದು ಮಯ್ಯಿಕ್ಕಿ ಬಲ ಬಂ
ದನುಪಮನು ಚಿತ್ತವಿಸೆನುತ್ತಾ
ವನಜಭವ ತನಗೆಂದ ಕಾರ್ಯವನೆಂದನಾ ಮುನಿಪ || ೨೪ ||

ಆದಿಪುರುಷನೆ ನೀನು ರಾಘವ
ನಾದೆ ಗಡ ರಾವಣನ ವಧಿಸಲು
ಮೇದಿನೀ ಭಾರವನು ಕಳೆಯಲು ಸುರರ ರಕ್ಷಿಸಲು ||
ಈ ಧರಾ ರಕ್ಷಾರ್ಥ ಪಟ್ಟವ
ಮೇದಿನೀಶ್ವರ ದಶರಥಾಂಕ ನಿ
ವೇದಿಸುವ ನಿಮ್ಮಲ್ಲಿ ನಾಳೆ ಮಹೋತ್ಸವದಲೆಂದ || ೨೫ ||

ಪಟ್ಟವನು ನೀ ಧರಿಸಿದೀ ನೃಪ
ವಟ್ಟಿಯಲ್ಲಿರೆ ಶರಧಿ ಮಧ್ಯದ
ದುಷ್ಟರನು ಕೊಲುವವರ ಕಾಣೆನು ಕಮಲಜಾದ್ಯರಿಗೆ ||
ಕೊಟ್ಟ ಭಾಷೆಯನಸುರರನು ಬರು
ಗುಟ್ಟುವೆನು ನಾನೆಂದ ಮಾತಿಂ
ಗೊಟ್ಟ ಬರಬಾರದು ನಿಧಾನವ ಬಲ್ಲೆ ನೀನೆಂದ || ೨೬ ||

ಕಂದ ನಾನೆಂಬೀ ಸಲುಗೆಯಿಂ
ದೆಂದೆನೆಲ್ಲ ನಿಯಾಮಕನು ತಾ
ನೆಂದ ನಾರದ ಮುನಿಯ ಮಾತನು ಕೇಳಿ ಕರುಣದಲಿ ||
ಮಂದಹಾಸದಲೆಲೆ ಮುನಿಪ ನಾ
ನಿಂದು ಕಿಂಚಿತನರಿದಿಹೆನು ಮರ
ಹಿಂದ ಕಳೆಯೆನು ದಿನವ ದನುಜರ ಕೊಲುವೆ ನಾನೆಂದ || ೨೭ ||

ಸತ್ಯವೆನ್ನ ಪ್ರತಿಜ್ಞೆ ದನುಜರ
ನೊತ್ತಿಗೆಲಿವೆನದೇಕೆ ಸಂಶಯ
ತತ್ತದಪ್ರಾರಬ್ಧ ತೀರಲೆಬೇಕು ದನುಜರಿಗೆ ||
ಛಿತ್ತರಪ್ರಾರಬ್ಧ ತೀರದೆ
ಮತ್ತರಳಿವರೆ ಯುಣಲಿ ಕೆಲದಿನ
ಕುತ್ತುವೆನು ಕ್ರಮದಿಂದ ದನುಜರನೆಂದನಾ ರಾಮ || ೩೮ ||

ಖೂಳ ರಾವಣನನ್ನು ವಧಿಸಲು
ನಾಳೆ ದಂಡಕ ವನಕೆ ತೆರಳಲು
ಮೇಳವಿಸಿದೆನು ಮುನಿಯ ವೇಷವ ಧರಿಸಿ ವನದಲ್ಲಿ ||
ಕಾಲಕದಿನಾಲ್ಕಿದ್ದು ಸತಿಯನು
ಕೋಳುವಿಡಿದಾ ನೆವದಿ ದನುಜರ
ಮೂಲವಳಿಯುದ ವೋಲು ಸವರುವೆಯೆಂದನಾ ರಾಮ || ೩೯ ||

ಎನಲು ಶ್ರೀ ರಾಘವನ ಮಾತಿಗೆ
ಮುನಿಪ ಹರುಷಿಸಿ ಮೂನೆ ಬಲಬಂ
ದನುಪಮನು ಸಾಷ್ಟಾಂಗ ನಸ್ನತಿಯಿಂದನುಜ್ಞೆಯಲಿ ||
ತನಗೆ ಗತಿ ನೀನೆನುತ ಬೀಳ್ಕೊಂ
ಡನಿಲ ಪಥದಲಿ ದಿವದ ನಾರದ
ಮುನಿ ನಮೋ ಶ್ರೀರಾಮಚಂದ್ರಯೆನುತ್ತ ತೆರಳಿದನು || ೪೦ ||

ಆವನಾ ಶ್ರೀರಾಮಚಂದ್ರನ
ದೇವಮುನಿ ನಾರದನ ಸಂವಾ
ದಾವಳೀ ಸರಹಸ್ಯವನುಯಿದ ಶ್ರದ್ಧೆಯಿಂದೊಲಿದು ||
ಶ್ರಾವಿಸುವ ಪಠಿಸುವ ಮಹಾತ್ಮರು
ದೇವತತಿಗಳಿಗತಿ ಸುದುರ್ಲಭ
ಪಾವನದ ಮೋಕ್ಷವನು ಪಡೆವರು ಯೆಂದನೀಶ್ವರನು || ೪೧ ||

ನವಮ ಸಂಧಿಯ ಲಾಯಿತೀ ಪದ
ವಿವರವಾರೇಳಿವನು ಶರ್ವನು
ವಿವರಿಸಿದನಂಗನೆಗೆನಿಪ್ಪೀ ರಾಮ ಚರಿತವಲಿ ||
ಶಿವಪದಾಂಬುಜ ಹಂಸ ನಿತ್ಯೋ
ತ್ಸವ ನಿರಂಜನ ಭಾಸಸಚ್ಚಿ
ದ್ಭವನ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹೆಮ್ಮ || ೪೨ ||

ಅಂತು ಸಂಧಿ ೯ ಕ್ಕೆ ಪದ ೩೭೪ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ
ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಹತ್ತನೆಯ ಸಂಧಿ

## ರಾಮರಾಜ್ಯಾಭಿಷೇಕಕ್ಕೆ ಕುಬ್ಜೆಯು ಅಡ್ಡಿ

ಸೂಚನೆ || ರಾಮ ರಾಜ್ಯಾಭಿಷೇಕ ವಿಭವವ
ನಾ ಮುನೀಂದ್ರ ವಸಿಷ್ಠನೆಸಗೆ ವಿ
ರಾಮವಾಗಲು ಕುಬುಜೆ ಕೈಕೆಯ ಮತಿಯ ಮರೆಸಿದಳು ||

ಪದ|| ಚಂದ್ರವದನೆ ಗಿರೀಂದ್ರ ಭವೆ ಕೇ
ಳೊಂದುದಿನ ದಶರಥವಸಿಷ್ಠಂ
ಗೆಂದನೇಕಾಂತದಲಿ ಸ್ವಕುಲಾಚಾರ್ಯನನು ಕರೆದು ||
ವೊಂದು ಬಿನ್ನಹ ಮುನಿಪ ತನ್ನಯ
ನಂದನನು ರಘುನಾಥ ಹಿರಿಯವ
ಗಿಂದು ಪಟ್ಟವ ಕಟ್ಟಬೇಕೆಂದೆನ್ನ ಮತವೆಂದ || ೧ ||

ಸಕಲಧರ್ಮ ರಹಸ್ಯವರಿವನು
ಸಕಲ ರಾಜ್ಯವ ಸಲಹಲಾಪನು
ಸುಕೃತ ಮತಿಯಲಿ ವೃದ್ಧ ಮಂತ್ರಿ ಪುರೋಧರಿಂ ಮಿಗಿಲು ||
ಸಕಲ ಪೌರಪ್ರಕೃತಿ ಸಮ್ಮತ
ಸಕಲಗುಣ ಸಂಪನ್ನನಬುಜಾಂ
ಬಕ ಸುಲಕ್ಷಣವಂತನಾಗಿಹನೆಂದನವನೀಶ || ೨ ||

ಅರುಸುತನ ರಾಮಂಗೆ ಯೋಗ್ಯವು
ಜರೆನರೆಗಳಾಯ್ತೆನಗದೇತಕೆ
ಭರತ ಮಾವನ ಮನೆಗೆ ಹೋದನು ಶತ್ರುಜಿತ ಸಹಿತ ||
ಹರುಷವೆಲ್ಲಾ ಪ್ರಜೆಗಳಿಗೆ ತಡೆ
ದರೆ ಸುಕಾರಿಯವಲ್ಲ ರಾಮನ
ಕರೆದು ಯೋಚಿಸಿ ಸಂವರಣೆಯನು ತರಿಸಿ ನೀವೆಂದ || ೩ ||

ಹಲವು ಧಾತು ವಿಚಿತ್ರ ತೋರಣ
ಗಳಲಿ ಮೌಕ್ತಿಕ ಹೇಮನಿಕರದ
ಲಳವಡಿಸಿ ಶೃಂಗರಿಸಲೆಂದ ಸುಮಂತನನು ಕರೆದು ||
ತಳುವ ಮಾಡದೆ ಮುನಿಪನೆಂದಂ
ತಲಸದೆಲ್ಲವ ತರಿಸಿಕೊಡು ಕುಲ
ತಿಲಕಗೀ ಯುವರಾಜ್ಯ ಪಟ್ಟವ ಕಟ್ಟಬೇಕೆಂದ || ೪ ||

ಎನೆಹಸಾದವದೇನ ತರಿಸಲಿ
ಮುನಿಪಯೆನೆ ಸುಜ್ಞಾನವಂತರ
ಜನಶಿರೋಮಣಿ ಯೆಂದನುದಯದಿ ರಾಜನಡುಗೃಹದಿ ||
ಕನಕಭೂಷಿತ ಕನ್ನಿಕೆಯರನು
ವಿನಯದಿಂಬರಿಸಖಿಳ ತೀರ್ಥವ
ಘನ ಸುವರ್ಣ ಸಹಸ್ರಕಲಶವು ತುಂಬಿ ಬರಬೇಕು || ೫ ||

ದಂತ ನಾಲ್ಕುಳ್ಳೆಂದ ಗಜಕುಲ
ದಂತಿ ಹದಿನಾರಾಗಬೇಕಿವ
ಕುಂತೆ ತಾರದೆ ರತ್ನ ಸುವರ್ಣಾಭರಣ ಸಹ ತರಿಸು ||
ಶಾಂತಮುನಿಗಳು ದರ್ಭಪಾಣಿಯು
ನಾಂತು ಕುಳಿತಿರಬೇಕು ಹಿರಿಯರ
ನಂತ ಮಾಲ್ಯಾಭರಣ ವಸ್ತ್ರದ ರಾಶಿಯಿರಬೇಕು || ೬ ||

ಉತ್ತಮದ ವ್ಯಾಘ್ರಾಜಿನವು ಮೂ
ರೊತ್ತಿನಲ್ಲಿರಬೇಕು ಮುತ್ತಿನ
ಕೆತ್ತಿಸಿದ ವರಶ್ವೇತ ಸತ್ತಿಗೆ ರತ್ನದಂಡದಲಿ ॥
ಅರ್ಥಿಯಾಗಿರಬೇಕು ಚಾಮರ
ಮತ್ತೆ ಕಸ್ತುರಿಗಂಧ ಧೂಪವು
ಸುತ್ತ ದೀಪವು ಲಾಜದಧಿ ದೂರ್ವಾಕ್ಷತಾದಿ ಸಹ ॥ ೭ ॥

ನಗರದೊಳಗುಳ್ಳೆಲ್ಲ ದೇವರ
ಮಿಗೆ ದಣಿಯೆ ಪೂಜಿಸಲಿ ಬೇಕರ
ಸುಗಳು ನಾನೋಪಾಯನಂಗಳ ಕೊಂಡು ಬರಬೇಕು ॥
ಹುಗಿಲು ದೈವಕ್ಕೆಲ್ಲ ಬಲಿಯನು
ತೆಗೆಸಿ ಹಾಕಿಸಬೇಕು ಪಟ್ಟಣ
ನಗರತಲಿರಬೇಕಾರು ದುರ್ನಯ ನುಡಿಯದಿರಬೇಕು ॥ ೮ ॥

ಸುತ್ತ ಮಂಗಲಘೋಷವಿರಬೇ
ಕುತ್ತಮರು ಬಂದಿರಲಿ ಬೇಕೈ
ಹೆತ್ತವರು ಮುತ್ತೈಯರು ಯೋಗಿಪ್ರಧಾನರಿರಬೇಕು ॥
ಮತ್ತಕಾಶಿನಿಯ ಸುಜೋಗುಳ
ವೃತ್ತಿ ಪಾಡಲಿಬೇಕಿನಿತು ಸಂ
ಪತ್ತ ಸಾಗಿಸು ನಾಳೆಯೆಂದನು ಮುನಿ ಸುಮಂತಂಗೆ ॥ ೯ ॥

ಎಂದು ಮುನಿಪ ವಸಿಷ್ಠನಾಗಳೆ
ಸ್ಯಂದನದಲೈದಿದನು ರಾಮನ
ಮಂದಿರಕೆ ರಥವಿಳಿದು ಮೂರೊಳದಂತರವ ಕಳಿದು ॥
ಮುಂದೆ ನಡೆತರೆ ಪಾದಚಾರಿ ಮು
ನೀಂದ್ರನಾಗಮನವನು ಕಂಡರ
ವಿಂದಲೋಚನ ಧಿಗಿಲನೆದ್ದಿರಾಗಿ ನಡೆತಂದ ॥ ೧೦ ॥

ಕರವ ಶಿರದಲಿ ಮುಗಿದು ಬಂದಾ
ದರದಿ ದಂಡವಪ್ಪೋಲು ಮುನಿಪನ
ಚರಣದಲಿ ಮೈಯ್ಯಿಕ್ಕಿ ಕರವನು ಪಿಡಿದು ಕರೆತಂದು ||
ಪರಮ ರತ್ನಾಸನದಿ ಕುಳಿರಿಸಿ
ಧರಣಿಸುತೆ ತಾ ಬೇಗ ಹೇಮದ
ಕರಗದಲ್ಲುತ್ತಮದ ಜಲವನು ಯೆಂದನಾ ರಾಮ || ೧೧ ||

ತೊಳೆದು ಮುನಿಪಾದೋದಕವ ನಿಜ
ಲಲನೆ ಸಹಿತವೆ ಧರಿಸುತೆಂದನು
ಭಲರೆ ಧನ್ಯನು ನಿಮ್ಮ ಪದಜಲವೆನಗೆ ದೊರಕಿತೆನೆ ||
ಘುಳನೆ ನಕ್ಕನು ಮುನಿಪನಾರನು
ಹಳಗು ಮಾಡುವೆ ರಾಮ ಧರಿಸನೆ
ತಲೆಯಲತಿ ಭಕುತಿಯಲಿ ಶಿವ ನಿನ್ನಂಘ್ರಿಯುಗ ಜಲವ || ೧೨ ||

ತನ್ನ ಪಿತನಜಸಹಿತಧರಿಸನೆ
ನಿನ್ನ ಪದ ತೀರ್ಥವನು ರಾಘವ
ನನ್ನ ನೀ ಮೋಹಿಸುವೆ ಲೋಕಾನುಗ್ರಹಾರ್ಥದಲಿ ||
ನಿನ್ನ ಕರುಣದಲರಿಯನೇ ಪರಿ
ಪೂರ್ಣ ಪರಮಾತುಮನು ನೀ ಪ್ರತಿ
ಪನ್ನ ಭಕ್ತರ ವೃಗ್ಗಿಷಯ ಪರಮೇಶ್ವರಾಕೃತಿಯ || ೧೩ ||

ದೇವ ಕಾರ್ಯವ ಮಾಡಲೆಂದೀ
ಭಾವುಕರ ಭಕುತಿಯನು ಕೈಕೊಳೆ
ರಾವಣಾದ್ಯರ ವಧಿಸೆ ನೀ ತನುವಿಡಿದೆಯೆಂಬುದನು ||
ನಾವು ಬಲ್ಲೆವು ಪರರಿಗೆನ್ನೆವು
ಭಾವದಲ್ಲಿಯೆ ಗೌಪ್ಯವಾಗಿಯೆ
ನೀವು ಶಿಷ್ಯರು ನಾವು ಗುರುವೆಂದಿಹೆವು ರಘುನಾಥ || ೧೪ ||

ಗುರುಗಳಿಗೆ ಗುರುಪಿತೃಗಳಿಗೆ ನೀ
ವರ ಪಿತಾಮಹ ಸಕಲದಲ್ಲಿಯು
ಭೂತನಂತರ್ಯಾಮಿ ಲೋಕಕೆ ಸೂತ್ರಧರ ನೀನು ||
ಧರಿಸಿದೆಯಲಾ ಶುದ್ಧ ಸಾತ್ವಿಕ
ಪರಮ ದೇಹವ ನಿನ್ನ ಲೀಲೆಯ
ನರ ಶರೀರವ ಯೋಗಮಾಯೆಯಲೆಂದನಾ ಮುನಿಪ || ೧೫ ||

ಬಲ್ಲೆನಾ ಪೌರೋಹಿತೆಯಯಿದು
ಸಲ್ಲ ತನಗತಿ ಕಷ್ಟವೆಂಬುದು
ಒಲ್ಲೆನೆಂದಡೆ ಕಮಲಸಂಭವನೆಂದನೆನ್ನೊಡನೆ ||
ಜಳ್ಳು ಕೆಲಸವೆ ಮರುಳೆ ಲಕ್ಷ್ಮೀ
ವಲ್ಲಭನು ಯಿಕ್ಷ್ವಾಕು ನೃಪಕುಲ
ದಲ್ಲಿ ರಾಮಾಖ್ಯೆಯಲಿ ಬಂದವತರಿಸಿದಪನೆಂದ || ೧೬ ||

ಅಂದು ಮೊದಲಾಗಿರ್ದು ಮನದೊಳ
ಗೆಂದು ರಾಮವತಾರವಹುದೆನು
ತಿಂದು ಯಂತಾಶೆಯಲಿ ನಿನ್ನನ್ನುವನೆ ಹಾರುತ್ತ ||
ನಿಂದ ಕೃತ್ಯವಿದಾದರಾಗಲಿ
ಯೆಂದು ರವಿಕುಲ ನೃಪರ ಗುರುತನ
ದಿಂದ ಕಳಿದೆನದಿಂದು ಫಲಿಸಿತು ರಾಮ ತನಗೇದ || ೧೭ ||

ನಿನ್ನ ಮಾಯಾಶಕ್ತಿ ದೇಹಿಗ
ಳನ್ನು ಮೋಹಿಸಿ ಕೆಡಹುವಳು ಭವ
ದಾರ್ಣವದಿ ತನ್ನವನು ಮೋಹಿಸಿ ಕೆಡಹದಂದದಲಿ ||
ನಿನ್ನ ಗುರುವೆಲೆ ನಾನು ದಕ್ಷಿಣೆ
ಯನ್ನು ನೀ ಕೊಡಬೇಕಿದನೆ ನಿ
ನ್ನನ್ನತಿಯ ನಿನಗೆಂದೆನನ್ಯರಿಗೆನ್ನೆ ಗೌಪ್ಯವನು || ೧೮ ||

ರಾಮ ನೀನರಿ ರಾಜ್ಯಪಟ್ಟವ
ಭೂಮಿಪತಿ ದಶರಥನೆಸಗುವನು
ನಾಮುದದಿ ಯೋಚಿಸಲು ಕಳುಹಲು ಬಂದೆ ನೀನಿಂದು ||
ನೇಮವಾಗಿಹ ಸೀತೆ ಸಹಿತೀ
ಯಾಮಿನಿಯಲುಪವಾಸವಿರಬೇ
ಕೀ ಮಹಾಶಾಸ್ತ್ರೋಕ್ತ ವಿಧಿಯಲ್ಲೆಂದನಾ ಮುನಿಪ || ೧೯ ||

ಎಂದು ರಥದಲಿ ನಡೆದನಾ ಗುರು
ಮಂದಿರಕೆ ಲಕ್ಷ್ಮಣನೊಡನೆ ನಗು
ತೆಂದನಾ ಶ್ರೀರಾಮ ಯುವರಾಜ್ಯಾಭಿಷೇಕವನು ||
ತಂದೆ ತನ್ನಲಿ ನಾಳೆ ಮಾಡುವ
ಡೆಂದಡಾನು ನಿಮಿತ್ತ ಮಾತ್ರವು
ಕಂದ ಕರ್ತೃವು ಭೋಕ್ತೃವೆಲ್ಲವು ನೀನದಕ್ಕೆಂದ || ೨೦ ||

ಗುರುಮತದಿ ಕೈಕೊಳಲೆಬೇಕದ
ಹೊರಗಣಗ್ಗದ ಪ್ರಾಣ ನೀನೇ
ಧುರದಿ ಕರ್ತನೆನುತ್ತ ತಮ್ಮಂಗೆನಲು ಮುನಿಯಿತ್ತ ||
ಅರಸಿಗೆಂದಡೆ ಮುನಿಯ ಮಾತಿನ
ಹರುಷವಾಯಿತು ನೃಪಗೆ ದೂತರು
ಹರಿದು ಕೌಸಲ್ಯಾಸುಮಿತ್ರೆಯರಿಂಗೆ ಹೇಳಿದರು || ೨೧ ||

ಕೇಳಿ ಹರುಷದಿ ಹಾರವನು ದೂ
ತಾಳಿಗಿತ್ತರು ಬಳಿಕ ಕೌಸಲೆ
ನಾಳೆ ರಾಮನ ಪಟ್ಟಕೇನೂ ವಿಘ್ನ ಹೊಗದಂತೆ ||
ಮಾಲತಾಂಗಿಯು ಪೂಜಿಸುತ್ತಾ
ಬಾಲೆ ನೆನೆವಳು ನೃಪನಸತ್ಯವ
ಹೇಳ ಕೈಕೆಯ ವಶದಲಿಹಲೆಂತಹುದೊಯೆನುತೊಳಗೆ || ೨೨ ||

ಚಿಂತಿಸುತ ಕೌಸಲ್ಯೆ ದುರ್ಗೆಯು
ಮುಂತೆ ಪೂಜಿಸುತಿರಲು ಕೇಳಿಲೆ
ಕಾಂತೆ ದಿವದಲಿ ದಿವಿಜರೆಂದವು ವಾಣಿಗೀ ಹವನ ॥
ಅಂತರಾಯವು ರಾಮ ಪಟ್ಟ
ಕ್ಕೆಂತಹುದು ವಾಪರಿಯಯೋಧ್ಯೆಗೆ
ಸಂತಸದಿ ನೀ ಮಾಡಬೇಕಿದು ಬ್ರಹ್ಮ ಶಾಸನವು ॥ ೨೩ ॥

ಮಂಥರೆಯ ಮೊದಲಲ್ಲಿ ಕೈಕೆಯು
ಮುಂತೆ ಚೋದಿಸಿ ವಿಘ್ನವಾಗೆಯು
ಸಂತರದಿ ನೀಯಿತ್ತ ಬಾಯೆನಲಾಗಲೆಂದೆನುತ ॥
ಮಂಥರೆಯ ವೊಳಹೊಕ್ಕು ಕುಬ್ಜಾ
ಕಾಂತೆಯಾ ತ್ರ್ಯೈವಕ್ರೆಯಾಗಳೆ
ನಿಂತು ಪ್ರಾಸಾದದಲಿ ಕಂಡಳು ಪುರದ ವೈಭವವ ॥ ೨೪ ॥

ಎತ್ತ ನೋಡಲು ವಿಭವಲಂಕೃತ
ವೆತ್ತನೋಡಲು ಮಂಗಲೋತ್ಸವ
ವಿಸ್ತರಕೆ ಬೆರಗಾಗಿ ಕೇಳ್ದಳು ಧಾತ್ರಿಯನು ಕರೆದು ॥
ಅರ್ಥಿಯೇನೌ ತಾಯೆ ನಗರದಿ
ಸುತ್ತಲಂಕೃತವಾಗಿ ಕೌಸಲೆ
ಗತ್ಯಧಿಕ ಸಂತೋಷ ಮೊಳತಿದೆಯೆಂದಳಾ ಕುಬ್ಜೆ ॥ ೨೫ ॥

ವಿಪ್ರಮುಖ್ಯರಿಗುತ್ತಮಾಂಬರ
ವಿಪ್ರಕಾರದಿ ಕೊಡುವಳೇಕೆನೆ
ಲಪ್ರಬುದ್ಧೆಗೆ ಧಾತ್ರಿ ನುಡಿದಳು ರಾಮಚಂದ್ರಂಗೆ ॥
ವೊಪ್ಪೆಯುದಯದಿ ಪಟ್ಟವದರಿಂ
ಕ್ಷಿಪ್ರದಲಿ ಪುರರಚನೆಯೆಂದರೆ
ಥೊಪ್ಪನಾ ಕೈಕಾಗೃಹಕೆ ನಡೆತಂದಳಾ ಕುಬ್ಜೆ ॥ ೨೬ ॥

ಮಂಚದಲ್ಲೇಕಾಂತದಲ್ಲಿರೆ
ಹಂಚು ಮೂರುಖೆ ನುಡಿವಳೇಳೆಲೆ
ಚಂಚಲಾಂಬಕಿ ಕಾರ್ಯವರಿಯದೆ ಮೂಢೆ ಬಿದ್ದಿಹೆಯ ||
ಮುಂಚಿನೀ ರೂಪದಲಿ ಬುದ್ಧಿಯೆ
ಕಿಂಚಿತೇನೂಯಿಲ್ಲ ಹೊತ್ತರೆ
ಮುಂಚೆರಾಮಗೆ ಪಟ್ಟಬಂಧನವೆಂದಳಾ ಕುಬ್ಜೆ || ೨೭ ||

ಎನಲಿಕೆದ್ದಳು ರಾಮ ಪಟ್ಟದ
ಜನಿತವಾರ್ತಾ ಹರ್ಷಕಿತ್ತಳು
ಘನರತುನ ನೂಪುರವನೇನಾ ಹರ್ಷವಾರ್ತೆಯಲಿ ||
ಮನಕೆ ಭಯದಂತೆಂಬೆ ರಾಮನು
ಜನನಿಕೌಸಲೆಯಿಂದಧಿಕವಾ
ಗೆನಗೆ ಸೇವೆಯ ಮಾಳ್ಪ ಭರತಾಧಿಕನು ತನಗೆನುತ || ೨೮ ||

ರಾಮನಿಂದೆನಗೇನು ಭಯವೆಲೆ
ಭ್ರಾಮರೆಯೆ ಹೇಳೆನಲು ಕೋಪದಿ
ವೈಮನಸ್ಯದಲೆಂದಳಾದಡೆ ಕೇಳು ಕಾರಣವ ||
ರಾಮನಿಂದವೆ ನಿನಗೆ ಕೇಡಾ
ಭೂಮಿಪನು ಮಾತಿನಲಿ ಪೋಷಿಸಿ
ಕಾಮುಕನು ಮಿಥ್ಯದಲಿ ನುಡಿಯದೆ ನಿನ್ನ ವಂಚಿಸಿದ || ೨೯ ||

ಸಾತಿಶಯ ಕಾರಿಯವ ರಾಮನ
ಮಾತೆಯಲಿ ಸಾಧಿಸಿ ನಿನಗೆ ಬರಿ
ಮಾತಿನಿಂದವೆ ಕೊರಳನರಿದನು ಭರತನನು ಕಳುಹಿ ||
ಮಾತುಳನ ಮನೆಗಿತ್ತ ರಾಮಗೆ
ಭೂತಳವ ಸೇರಿಸುವ ಲಕ್ಷ್ಮಣ
ನೋತು ಸುಖದಿಂದಿಹನು ರಾಮನ ಸಲುಗೆ ಸೌಖ್ಯದಲಿ || ೩೦ ||

ಲೇಸು ಕೌಸಲ್ಯೆಗು ಸುಮಿತ್ರೆಗು
ದೋಷಿಯಾದನು ಭರತ ನಿನ್ನಿಂ
ಲೇಸಮಾಡದೆ ಮಗನ ತಿರಿತಿಂಬುದಕೆ ಮಾಡಿದೆಲ ||
ಲೇಶ ಸಂಪ್ರಿಯು ಭರತನಲ್ಲವ
ನೀಶಗುಳ್ಳಡೆ ಉತ್ಸವದಿ ಹೊರ
ಬೀಸುವನೆ ಶತ್ರುಘ್ನ ಸಹಿತಿವು ತಿಳಿಯದೇ ನಿನಗೆ || ೩೧ ||

ರೂಢಿಯರಸನು ರಾಮನಾದರೆ
ಕೂಡೆ ಲಕ್ಷ್ಮಣ ನೆರೆನಿಯೋಗವ
ಮಾಡಿ ರಾಮನ ಪರಿಯ್ಯಲಿಹ ಸುಖದಿಂದನುಜ ಸಹಿತ ||
ಹೇಡನಾದನು ಭರತ ಮಣಿಹವ
ಮಾಡಿ ಬದುಕುವಮಂಟೊಯಿಲ್ಲವೊ
ದ್ರೂಡಿಸುವ ಕೆಲದಿನಕೆ ನಮ್ಮನು ಅರಿವರಾರೆಂದ || ೩೨ ||

ಕೌಸಲಾ ಪರಿಚರಿಯ ಮಾಡುತ
ದಾಸಿಯಾಗಿರು ನೀನುವದರಿಂ
ದೋಷಿ ದೇಹವದೇಕೆ ನಿನಗದರಿಂದ ಮರಣವದೆ ||
ಲೇಸು ಸುಡು ಸುಡು ಪಾಪಿ ಬದುಕಲು
ಸಾಸಿ ಬೇಡವೆ ರಾಜಮಹಿಷಿಗೆ
ಮಾಸಿತೇ ಮತಿ ಯಿದಕುಪಾಯವ ಕೇಳು ನನ್ನಿಂದ || ೩೩ ||

ಕರೆಸು ಭರತನ ಬೇಗ ರಾಘವ
ನಿರಲಿ ಹದಿನಾಲ್ಕಬ್ದ ವನದಲಿ
ಯರಸುತನ ದೃಢವಹುದು ಭರತಗೆ ಬಳಿಕ ವನದಿಂದ ||
ಬರಲಿ ಮಾಣಲಿ ರಾಮನಿದಕೇ
ನಿರದೆ ಯುಕ್ತಿ ವಿವೇಕವದ ನಾ
ನೊರೆವೆ ಪೂರ್ವದಲಾಯ್ತು ದೇವಾಸುರರಿಗತಿ ಕದನ || ೩೪ ||

ಓಡಿದುದು ಸುರಕಟಕ ಕದನಕೆ
ಹೇಡಿಯಾಗಿರಲಿಂದ್ರ ದಶರಥ
ರೂಢಿಪತಿಯನು ಬೇಡಿಕೊಂಡನು ದನುಜರನು ಗೆಲಲು ||
ಕೂಡಿ ಸೇನೆಯನ್ನೈದಿ ನೀ ಸಹ
ಮಾಡಿದನು ದನುಜರಲಿ ಯುದ್ಧವ
ಗಾಢ ಸಮರದಿ ರಥದ ಗಾಲಿಯ ಕೀಲುಗಿದು ಬಿತ್ತು || ೩೫ ||

ಅರಿಯನವ ನೃಪ ನೀನು ಧೈರ್ಯದಿ
ಕರವನಲ್ಲಿಗೆ ನೂಕಿ ಕೀಲಿಗೆ
ಧುರದಿ ಪತಿ ಜೀವವನು ಪಡೆದೆಯಸುರರನು ಜೈಸಿ ||
ಕರವ ರಥಕೊಡ್ಡಿರಲು ಕಂಡ
ಚ್ಚರಿಯಲಪ್ಪುತ ಬೇಡಿಕೊಳ್ಳಲೆ
ವರವೆರಡನಿಶ್ಚಿತವನೆಂದನು ನಿನಗೆ ದಶರಥನು || ೩೬ ||

ತರುಣಿ ನೀನವಗೆಂದೆ ನಿನ್ನ
ಲ್ಲಿರಲಿ ವರವೆನಗವಸರದಲೆಲೆ
ಯರಸಬೇಡುವೆನೆಂದರಾಗಲಿ ಯೆಂದುದುಂಟಲ್ಲ ||
ಮರೆದೆಯಾ ನಿರ್ಭಾಗ್ಯೆ ಶೆನಗೆ
ಚ್ಚರಿಕೆಯಾದುದು ಮುನ್ನ ಕೇಳಿಹೆ
ನೆರಸನಲ್ಯದ ಬೇಡಬಾರದೆ ಪಾಪಿ ಬೇಗದಲಿ || ೩೭ ||

ಹಾಳುಪಾಯವದೇನುಯಿಲ್ಲವೆ
ಬೀಳು ವೊಳಹೊಕ್ಕಂತೆ ನೆಲದಲಿ
ಜೋಲುದುಃಖವ ತಾಳು ಕೋಪಾಮರುಷ ವಿಂಹಲವ ||
ಬೋಳಿಸಾಭರಣಂಗಳೆಲ್ಲವ
ಹೇಳಬೇಡೇನುವನು ವರವನು
ಪಾಲಿಸುವೆನೆಂದರಸ ತಾ ಬಂದಾಡುವನ್ನವರೆ || ೩೮ ||

ಎಂದಡಹುದಾಯ್ತಂಗ ಕೈಕೆಯ
ಬಂದು ಹೊಕ್ಕಳು ದುರ್ನಯಾಂಗನೆ
ಯೊಂದೆ ಕ್ಷಣಮಾತ್ರವಲಿ ಕುಬ್ಜೆಯ ಸಂಗಫಲದಿಂದ ||
ಸಂದೆಹವೆ ನೀಂನೆಂದುದೆಂದಳು
ನಿಂದ ನಿರ್ಮಲ ಮತಿಯು ಕೈಕೆಗೆ
ಯೊಂದು ಯೀ ವಿಪರೀತವಾಯ್ತೇನೆಂಬೆಸದ್ಭುತವ || ೩೯ ||

ಕಾಂತೆ ನಿನ್ನಯ ಬುದ್ಧಿ ನಿಸಗತಿ
ಸಂತ ಭರತಗೆ ರಾಜ್ಯವಾದರೆ
ಮುಂತೆ ಶತಗ್ರಾಮವನು ಕೊಡುವೆನು ನಿನಗೆ ನಸಗಿಂದು ||
ಚಿಂತೆ ಕಾರ್ಯಕ್ಕೊಗಿದೆಯಲಾ
ಭ್ರಾಂತೆಯಲ್ಲವೆ ನಾನುಹಿತಹಿತ
ವೆಂತ ವೇನೆಂದರಿಯದಿದ್ದತಿ ಮೂಢತನದಿಂದ || ೪೦ ||

ಎಂದವಳಕೂಡಬಲೆ ಕೋಪದ
ಮಂದಿರವ ಹೊಕ್ಕಳು ವಿಭೂಷಣ
ವೃಂದವೆಲ್ಲವ ಕಳಚಿ ಬೀರಿದಳುತ್ತಮಾಂಬರದ ||
ಹೊಂಮುಡುಗೆಯನು ಬೀಸಿಬಿಟ್ಟಳು
ಕಂದಿದಪುವೆಯ ನೆಲಕೆ ಬಿದ್ದಳು
ಗಂಧವಳಿದಳು ತೊಳೆದಳಾ ಮುನ್ನಳ್ಳ ಸೌಭಗವ || ೪೧ ||

ಆರನ್ನೈ ದುಃಸ್ಸಂಗ ಕೆಡಿಸದು
ಧಾರ ಧೀರ ಸುಶಾಂತನಾಗಲಿ
ಸಾರಗುಣ ದಯವಂತನಾಗಲಿ ನೀತಿಯರಿತಿರಲಿ ||
ಪಾರ ವಿಧಿವಾದವು ವಿವೇಕಾ
ಚಾರಯುತ ದೇಶಿಕನನಾದರು
ಸೇರಿದರೆ ದುರ್ಜನರು ಕಲಿಸದೆ ಬಿಡರು ತಮ್ಮಂತೆ || ೪೨ ||

ದುಷ್ಟರನು ದುರ್ಬುದ್ಧರಾಗವು
ಭ್ರಷ್ಟರನು ಕೋಪಿಗಳನೃತ ಕಡು
ನಿಷ್ಠುರವ ನುಡಿವರ ಕುಲಾಚಾರವನು ಬಿಟ್ಟವರ ||
ಕೆಟ್ಟ ವಿಷಯವ ಮೆಚ್ಚಿದವರ ನಿ
ಕೃಷ್ಟ ತಸ್ಕರ ದಯ ವಿಹೀನರ
ಮುಚ್ಚಿ ನುಡಿಸುತ್ತಿರಲವರು ತಮ್ಮಂತೆ ತಿದ್ದುವರು || ೪೩ ||

ಸತ್ಯದಯ ದಾಕ್ಷಿಣ್ಯ ಸದುಗುಣ
ಯುಕ್ತಿ ಸ್ವಕುಲಾಚಾರ ವೈದಿಕ
ಶಾಸ್ತ್ರಶವೆುದವೆು ಪಾಪಭಯವಕ್ರೋಧ ವೈರಾಗ್ಯ ||
ನಿತ್ಯಕರ್ವಿರ್ಾಶ್ವರ ಭಕುತಿ ಗುರು
ಭಕ್ತಿಮೃದುನುಡಿ ಶಾಂತಿಯೆಂಬಿವ
ನುತ್ತಮರು ಬಿಡಬಾರದಿರಬೇಕಾವ ಕಾಲದಲಿ || ೪೪ ||

ದಿಕ್ಕುಗಣನೆಯ ಸಂಧಿ ಪದನಗ
ಳಿಕ್ಕು ನವಪಂಚಕ ವಿದರ ವೂಳ
ವೊಕ್ಕು ತಿಳಿದರೆ ಮತಿಯಲಶುಭಾಘೌಘ ಪರಿಹಾರ ||
ಅರ್ಕಕೋಟಿಪ್ರಭನ ಮಾಯನಿ
ರೀಕ್ಷದೂರಾನಂತ ನಿರುಪಮ
ಲಕ್ಷ್ಯ ಲಕ್ಷ್ಮಿನೃಸಿಂಹ ಗುರುನಿತ್ಯಾತ್ಮ ಜಯ ಶರಣು || ೪೫ ||

ಅಂತು ಸಂಧಿ ೧೦ ಕ್ಕೆ ಪದ ೪೯೯ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ
ಶ್ರೀ





ದಶರಥರಾಜನ ಮುಃ



ಸೀತೆಗೆ ನಾರುಬಟ್ಟೆ ಕೊಡುವದಕ್ಕೆ
ವಸಿಷ್ಠನ ವಿರೋಧ

|| ಶ್ರೀ ರಾಮಚಂದ್ರಾಯ ನಮಃ ||



# ಹನ್ನೊಂದನೆಯ ಸಂಧಿ

**ದಶರಥನು ಕೈಕೇಯಿಯ ಇಚ್ಛೆತ ಸಲಿಸಿದ್ದು**

ಸೂಚನೆ || ನಾರಿಯರಿಗಿಚ್ಛಿತವ ಕೊಟ್ಟಡ
ದಾರನಾದರು ಕೆಡಿಸುಗೆಂಬುದ
ಭೂರಮಣ ದಶರಥನು ಕೈಕೇಚ್ಛೆಯ ಸಲಿಸಿ ಕಂಡ ||

ಪದ || ಮತ್ತೆ ಪಾರ್ವತಿ ಕೇಳು ದಶರಥ
ನಿತ್ತ ರಾಮಾಭ್ಯುದಯವನೆ ಬಯ
ಸುತ್ತ ಮಂತ್ರಿಪ್ರಕೃತಿಗಳು ಸಹಿತಾಗ ನಿಜಗೃಹಕೆ ||
ಆರ್ತಿಯಿಂಬರ ಯೇದಿನಂದದಿ
ಮತ್ತಕಾಶಿನಿ ಬಾರಳೇಕೊನ
ಗುತ್ತ ಸನ್ಮಾನದಲಿ ಯಿರಳೆಂದೆನುತ ಶಂಕಿಸಿದ || ೧ ||

ಕಾಣೆನೆಂದಿನ ಸೊಬಗ ತೋರುವ
ರಾಣಿ ಬಾರಳದೇಕೆ ಯೆನ್ನ
ಪ್ರಾಣವಲ್ಲಭೆ ಯೆಲ್ಲಿಹಳು ಯೆಂದವಳ ದಾಸಿಯರ ||
ಕ್ಷೋಣಿಪತಿ ಬೆಸಗೊಳಲು ಕ್ರೋಧೋ
ಗ್ರಾಣ ಗೃಹದಲ್ಲಿಹಳವಳು ಗುಣ
ದಾಣ ಬೇಡದ ನೀನೆ ಹೊಕ್ಕರಿ ಯೆಂದರಬಳೆಯದು || ೨ ||

ಎನಲು ಭಯ ಸಂತಾಪದಿಂದಾ
ವನಿತೆಯಿದ್ದೆಡೆಗೈದಿ ಕುಳ್ಳಿ
ರ್ದನುವಿನಿಂ ಮುಟ್ಟದನು ಮೆಲ್ಲನದೇಕೆ ನೆಲದಲ್ಲಿ ||
ತನುವ ಹರಹಿದೆ ಮಾಚದೇನಾ
ಯ್ತೆನಗೆ ಭೇದವ ಮಾಡುವಂದದ
ಮನಕೆ ಭೀರುಹ ತೋರುವಂತಿಹೆ ಕೈಕೆ ಹೇಳೆಂದ || ೩ ||

ಬಿಟ್ಟಿಯೇತಕೆ ಭೂಷಣಂಗಳ
ನುಟ್ಟಿಯೇತಕೆ ಮಲಿನದರುವೆಯ
ಕೊಟ್ಟಿಸುಸುರಿಚ್ಛಿತವ ನಿನಗಾರಹಿತವೆಸಗಿದರು ||
ಹೆಟ್ಟುಗೆಯರೋ ಪುರುಷರೋ ಮುರಿ
ಗುಟ್ಟುವೆನು ಸಂದೇಹ ಬೇಡೇ
ನಿಷ್ಟ ನಿನಗದನೀಗ ಸಲಿಸುವೆನೆಂದನವನೀಶ || ೪ ||

ಅರಿತರಾ ನಿಶ್ಚಿತವನೀಗಳೆ
ತರಿಸಲಾರೆನೆ ನಿನ್ನಪ್ರಿಯರಿಗೆ
ಹೊರಿಸಲಾರೆನೆ ಬೇಕಿನಿತು ಧನವಿತ್ತು ದಣಿವಂತೆ ||
ಕರದರಿದ್ರರ ಮಾಡಲಾರನೆ
ನಿರುತ ನೀನಡ ಮುರಿದವಂದಿರ
ವರಿತುದಿಲ್ಲಾ ನಿನ್ನ ವಶವಾನೆಂದ ಕೈಕೇಯಿ || ೫ ||

ಕೊಲೆಗರುಹನಾಗಿರ್ದಡೀಗಳೆ
ಕೊಲುವೆ ನಿನ್ನಹಿತನನು ಹಲವೇ
ಕೆಲೆಗೆ ಪ್ರಾಣವ ಬಿಡಲಿಕಾಪೆನು ನಿನಗೆ ತಪ್ಪಿದಡೆ ||
ಲಲನೆ ಸತ್ಯಪ್ರತಿಜ್ಞೆಯುಳ್ಳಾ
ಕುಲಜ ರಾಮನ ಮೇಲೆ ಶಪಥವು
ಸಲ್ಲಿಸುವೆನು ನಿನಗೇನು ಹಿತ ಹೇಳೆಂದನಾ ಭೂಪ || ೬ ||

ಜನಪ ರಾಮನ ಶಪಥವಿಡೆ ಮೆ
ಚ್ಚನೆ ನಯನವನು ತೆರೆದು ನೋಡಲು
ವನಿತೆಯೆಂದಳು ರಾಜ ನೀ ಸತ್ಯವನೆ ಸಲಿಸುವಡೆ ||
ದನುಜಸುರ ಯುದ್ಧದಲಿ ಬೇಡಿ
ದ್ದೆನು ವರದ್ವಯವವನು ಶೀಘ್ರದ
ಲೆನಗೆ ಕೊಡು ಹಿಂದಿತ್ತಡಿಸೆನೆ ನಿನ್ನಲಿಷ್ಟುದಿನ ||೭||

ನಿನ್ನ ನಾ ಸಮರದಲಿ ಕಾಯಿದ
ಚೆನ್ನಯಾ ಬೇಕಾದ ವರವನು
ಯನ್ನಲೀಸಿಕೊ ಯೆಂದದಕೆ ಕೊಡು ಶಪಥ ಉಳುಹುವಡೆ ||
ನನ್ನ ಭರತಗೆ ಕಟ್ಟು ಪಟ್ಟವ
ನಿನ್ನ ರಾಮನ ಪಟ್ಟಕೆಂದಾ
ಸನ್ನವಾದ ಸುವಸ್ತು ಸಹ ಶೀಘ್ರದಲಿದೊಂದಾಯ್ತು ||೮||

ಮತ್ತದೊಂದಕೆ ರಾಮ ಜಟೆಯನು
ಹೊತ್ತು ವಲ್ಕಲಮುಡುಗೆಯಲಿ ಮುನಿ
ವೃತ್ತಿಯಿಂದವೆ ಕಂದಮೂಲಫಲಾಶನಗಳಿಂದ ||
ಹತ್ತುನಾಲುಕು ವರುಷ ದಂಡಕ
ದತ್ತಲಿರಬೇಕೀಗ ಹೋಗಲಿ
ಸತ್ತುಳಿವು ಬರಲಲ್ಲಿಯೇ ಯಿರಲವರಿನಿಂ ಮೇಲೆ ||೯||

ಎತ್ತಲಾನೂ ನಾಳೆ ಹೊತ್ತರ
ವುತ್ತದಡವಿಗೆ ಹೋಗದಿದ್ದರೆ
ಸತ್ತುಕೊಂಬೆನು ನಿನ್ನಿದಿರಲಿಯಸತ್ಯವನು ಹೊತ್ತು ||
ಉತ್ತುಮೆಯು ನೀ ಕಡಿಸಿ ಬನುಕೆನೆ
ಮೃತ್ಯುವಾಕ್ಯವ ಕೇಳಿ ಮೈನಡು
ಗುತ್ತ ಬಿದ್ದನು ಧರೆಗೆ ವಜ್ರದಿ ಕಡಿವ ದ್ರುಮದಂತೆ ||೧೦||

ನಿಮಿಷ ಮೂರ್ಛಿಸಿ ಕಂಗಳರಳಿಸಿ
ಕಮಗೆಡುತ್ತಾ ಯೆನುತದೇನೀ
ಭ್ರಮಣ ಚಿತ್ತವಿಕಾರವೋ ದುಃಸ್ವಪ್ನವೋ ಯೆನುತ ॥
ಕ್ರಮವ ಕಾಣದೆ ಮುಂದೆ ನಿಂದಿರೆ
ರಮಣಿ ಪೆರ್ಬುಲಿಯಂತೆ ಯೇನ್ಸೈ
ಮಮತೆಯಿಲ್ಲದೆ ನುಡಿದೆ ನನ್ನ ಪ್ರಾಣವುಳಿವಂತೆ ॥ ೧ ॥

ರಾಮ ನಿನಗಪರಾಧ ಕೃತ್ಯವ
ತಾಮರಸದೃಶನೇನ ಮಾಡಿದ
ಯಾಮಿನಿಯಲೆನಗೆಂಬೆ ನಿತ್ಯವು ರಾಮಗುಣಗಣವ ॥
ಈ ಮಗಗೆ ಸರಿಯಿಲ್ಲ ಸೇವೆಯ
ನೇಮದಿಂ ಕೌಸಲೆಗೆ ಮಿಗಿಲಾ
ಗೀ ಮುದದಿ ಮಾಡುವನು ನಿತ್ಯವು ಯೆಂಬೆ ತನ್ನೊಡನೆ ॥ ೨ ॥

ಮಾಡುವೆನು ಪಟ್ಟವನು ಭರತಗೆ
ಕಾಡಹೋಗದೆ ರಾಮ ಮನೆಯುಲಿ
ಗೂಢಚಾರದಲಿರಲಿ ರಾಮನು ಭಯವ ನಿನಗೇನು ॥
ಮಾಡದಿದನನುಕರಿಸೆನುತ್ತಾ
ರೂಢಿಪತಿ ಕಣುನೀರ ಸುರಿವುತ
ಬೇಡ ಪಾಲಿಸೆನುತ್ತ ಬಿದ್ದನು ಪಾದದಲಿ ಸತಿಯ ॥ ೩ ॥

ಕ್ರೂರಿಯಲಿ ನಯವುಂಟೆ ಕೆಂಗ
ಣ್ಣೋರೆಯಲಿ ನಿಷ್ಠುರವ ನುಡಿವಳು
ಭೂರಮಣ ಮರುಳಾದೆ ಮಿಥ್ಯವ ನುಡಿದೆಯಾ ತನಗೆ ॥
ಘೋರ ನರಕದಿ ಬೀಳು ಹುಸಿಯಲಿ
ಚೀರವಸನವ ಧರಿಸಿ ನಾಳೆಗೆ
ಊರಹೊರವಂಟಡವಿಗಯ್ದದೆ ರಾಮನಿರೆ ಬಳಿಕ ॥ ೪ ॥

ನೇಣ ಕೊರಳಿಂಗಿಕ್ಕಿಯಾದರು
ಕೇಣಿ ವಿಷವನೆ ತಿಂದೆಯಾದರು
ಪ್ರಾಣವನು ನಿನ್ನಿದಿರ ಬಿಡುವೆನು ಲೋಕದವರೆಲ್ಲ ॥
ಜಾಣ ದಶರಥ ಸತ್ಯಕೆಂಬರು
ನಾಣುನುಡಿಯಾಯಿತ್ತು ನಿನ್ನಯ
ಮಾಣೆ ರಾಮನ ಶಪಥ ಹಾಳಾಯ್ತೆಂದಳುರೆ ಮುನಿದು ॥ ೧೫ ॥

ಎಂದ ನಾರಿಯ ನುಡಿಗೆ ಬಿಪ್ಪನು
ಹೊಂದಿದಂತದಿ ದುಃಖ ಮೂರ್ಛೆಗೆ
ಸಂದು ಧರಣಿಪ ದುಃಖದಲಿ ಯುಗದಂತೆ ರಾತ್ರಿಯನು ॥
ಹಿಂದುಗಳೆದನು ಅರುಣನುದಯದಿ
ವಂದಿ ಗಾಯಕರುಲಿವುತಿರೆ ಬೇ
ಡೆಂದಳಾ ಕೈಕೇಯಿ ಭೂಪಗೆ ಸ್ವಸ್ಥವಿಲ್ಲೆನುತ ॥ ೧೬ ॥

ಅಂದು ರಾತ್ರಿಯಲಾ ನಗರಜನ
ವೃಂದ ಬಾಲರು ವೃದ್ಧರೆನ್ನದೆ
ಎಂದು ಬೆಳಗಹುದೋ ರಘೂದ್ವಹ ಪಟ್ಟವನು ಧರಿಸಿ ॥
ಇಂದು ನಮ್ಮನು ರಕ್ಷಿಸುವನೋ
ತಂದೆಯಾಗಿಯೆನುತ್ತ ನಿದ್ರೆಯ
ಲೊಂದದೇ ಹಾರೈಯಿಸುತಿದ್ದುದು ಸಕಲ ಜನನಿವಹ ॥ ೧೭ ॥

ರಾಮ ಸಾಕ್ಷಾನ್ನೀಲ ಮೇಘ
ಶ್ಯಾಮ ಪೀತಾಂಬರ ಸುಕಾಂಚೀ
ಧಾಮ ಸರ್ವಾಭರಣ ಭೂಷಣ ಮಕರ ಕುಂಡಲದ ॥
ಸೋಮ ಕೋಟಿಪ್ರಭೆಯ ಮುಕುಟದ
ಕಾಮಶತ ಸನ್ನಿಭ ತನುದ್ಯುತಿ
ಕೌಮುದಿಯ ನಸುನಗೆಯ ಕಾಂಬವೆನಿಪ್ಪ ಹರುಷದಲಿ ॥ ೧೮ ॥

ಹಾರಹೀರಾವಳಿಯ ಕೌಸ್ತುಭ
ಚಾರುವಕ್ಷದ ತ್ರಿವಲಿ ಬಸುರಿನ
ವೀರ ಮುದ್ರಿಕೆ ಜೊಳೆಗಡಗವ ತೋಳಬಳೆಯೆಸೆವ ||
ಭೂರಿ ಜಘನದ ಸುಳಿಗುರುಳ ಸರ
ಸೀರುಹಾಕ್ಷದ ದಂತಪಂಕ್ತಿಯ
ಸಾರಮೃದು ಮಾಧುರ್ಯ ವಚನವನೆನುತ ಜನನಿವಹ || ೧೯ ||

ಹೊನ್ನಘಂಟಾಭರಣಲಂಕೃತ
ಉನ್ನತದ ಗಜವೇರಿ ಬೊಪ್ಪನು
ತನ್ನನುಜ ಲಕ್ಷುಮಣನು ಸೀತಾ ಛತ್ರವಿಡಿದಿರಲು ||
ಮುನ್ನ ಕಾಂಬೆನು ನಾನುವದರಿಂ
ಮುನ್ನ ಕಾಂಬೆನು ತಾನು ಬೆಳಗೇ
ಕಿನ್ನುವಾಗದೊ ಯೆನುತ ಜನವಿರೆ ವಿಗತ ನಿದ್ರೆಯಲಿ || ೨೦ ||

ನೋಡಗಡ ಪರವಧುವ ರಾಮನು
ವಾಡಗಡ ವ್ಯರ್ಥವನುಸತ್ಯವ
ಬೇಡ ಕಿಂಚಿತು ಕರವ ನಿಷ್ಠುರವಿಲ್ಲದೆಲ್ಲರಿಗೆ ||
ಮಾಡ ನರನೆಂದೆಂಬ ಹಮ್ಮನು
ಮಾಡುವನು ಸಕಲರಿಗೆ ದಯವನು
ಕೂಡಿ ನಡೆವನು ಪ್ರಜೆಗಳೆಲ್ಲವ ಮಕ್ಕಳಂದದಲಿ || ೨೧ ||

ನೀತಿಯಲಿ ಘಾತಿಯಲಿ ಸುಗುಣ
ಖ್ಯಾತಿಯಲಿ ದಾಂತಿಯಲಿ ರೂಪ
ಜ್ಯೋತಿಯಲಿ ಪ್ರೀತಿಯಲಿ ದುರ್ನೀತರ ವಿಘಾತಿಯಲಿ ||
ಮಾತಿನಲಿ ಮನಸಿನಲಿ ಹಿರಿಯರ
ಬಾತೆಯಲಿ ದ್ವಿಜದೇವ ಪೂಜಾ
ದ್ಯೋತದಲಿ ಸರಿಯಿಲ್ಲ ರಾಮಂಗೆಂಬುದಖಿಳ ಜನ || ೨೨ ||

ಇಂತೆನುತ ತವತವಗೆ ರಾಮನ
ನೆಂತರಂಗದಿ ನೆನೆವುತೋರೋ
ರಂತೆ ಹೊಗಳುತ್ತೀಸು ಕಲ್ಪಕ್ಕುದಯವಕ್ಕೆನುತ ||
ಸಂತಸವಲಿರಲುದಯ ಶೈಲದಿ
ಕಂತುತಲೆದೋರಲು ನಿಯೋಗಿ ಸು
ಮಂತ್ರಿ ನೃಪರು ಪುರೋಧ ಮುಖ್ಯರು ಬಂದರರಮನೆಗೆ || ೨೩ ||

ಮಧ್ಯಕಕ್ಷದ ಪಟ್ಟದೊಳವಲಿ
ಶುದ್ಧವಿಸಿ ರಚನಾ ವಿಚಿತ್ರದಿ
ತದ್ದ್ರುಚಿತ ಚಾಮರದ ಕನ್ನಡಿ ಕಲಶ ತೀರ್ಥ ಸಹ ||
ವೃದ್ಧ ವಿಪ್ರ ಕ್ಷತ್ರ ವೈಶ್ಯರ
ಸಿದ್ಧ ಮುನಿನಾರಿಯರ ಗಣಿಕೆಯ
ರಿದ್ದಸೆಗೆ ಗಜಭೇರಿ ಶಂಖಮೃದಂಗ ಸೌಂತೆಸೆಯೆ || ೨೪ ||

ಆ ವಸಿಷ್ಠೋತ್ತಮಳ ಸಂಭಾ
ರಾವಳೀ ಸಂಗ್ರಹಿಸಿಕೊಂಡು ಮ
ಹಾ ವಿವೇಕಿ ಸುಮಂತ ಕನ್ನಿಕೆಯರ ಸಹಿತ ನೆರೆಯು ||
ಸಾವಧಾನದಲಿಲ್ಲವಾಯಿತು
ಭೂವರನು ತಾನೇಳನೇಕೋ
ದೇವಿಯೊಡನಿಹನೆನುತ ಹೊಕ್ಕ ಸುಮಂತ ನೃಪಗೃಹವ || ೨೫ ||

ಜೀಯ ಜಯ ಚಿತ್ತವಿಸೆನಲ್ಕಾ
ರಾಯ ದುಃಖದಿ ಸುಡಿಯದಿರೆ ಕೈ
ಕೇಯಿ ಹೇಳೇನರಸಿಗೆನಲೆಂದಳು ನೃಪಂಗಿರುಳು ||
ಆಯಿತೇನೋ ಜಾಗರವು ಧಿಟ
ಬಾಯಲೆಂದನು ರಾಮ ರಾಮಾ
ಪ್ರೀಯ ಹಾ ರಘುರಾಮರಾಮಾಯೆಂಬುವಯು ತನಕ || ೨೬ ||

ಮಾಣದೇನೋ ಚಿಂತೆ ರಾಮನ
ಕಾಣಬರಹೇಳೆನಲು ಮರಳೀ
ಕ್ಷೋಣಿಪತಿಯಪ್ಪಣೆಯು ಬೇಡವೆಯೆನೆ ಸುಮಂತ್ರಂಗೆ ||
ಪ್ರಾಣಹೋಗುವುದೆನಗೆ ಗುಣ ಸು
ಪ್ಪಾಣಿ ರಾಮನ ಕಾಂಬೆನೆಂದೆನೆ
ಜಾಣ ಮಂತ್ರಿಪ್ರವರ ನಡೆದನು ರಾಮನರಮನೆಗೆ || ೨೭ ||

ತಡವಿ ನಿಲ್ಲದ ಮಂತ್ರಿ ರಾಘವ
ನೆಡೆಗೆ ಬಂದೆಲೆ ರಾಮ ಬೇಗದಿ
ಪಡೆವನಲ್ಲಿಗೆ ಹೋಹವೆನೆ ರಥವೇರಿ ಲಕ್ಷ್ಮಣನು ||
ನಡೆವನಾಗಳೆ ನನುಜ ಸಹವಾ
ಗೊಡನೆ ಭರದಲಿ ಕೈಕೆ ಗೃಹಕಾ
ಗಡಬಡೆಯೆ ಯಾಕೆಂದು ಬೆಸಗೊಳಲೈದೆ ಪಿತನಡೆಗೆ || ೨೮ ||

ಹೊದ್ದಿ ಪಿತನನು ಕರೆಯೆ ರಾಮನು
ನಿದ್ದ ಮೌನವದಾಯ್ತು ಹೇಳೆನ
ಲಿದ್ದುದೇನಾಯ್ತೆಂದು ಪಿತ ಹಾಹಾ ಯೆನುತ್ತಿರಲು ||
ಹೊದ್ದಿ ತೊಡೆಯಲಿ ಮಲಗಿಸುತ ಪಿತ
ನಿದ್ದ ಮೂರ್ಛೆಯಲೇಕೆನುತ್ತಿರ
ಲೆದ್ದ ರೋದನಗೇಳಿ ಕೂಡೆ ವಸಿಷ್ಠನೈತಂದ || ೨೯ ||

ಏಕೆ ತಂದೆಗೆ ದುಃಖವಾಯ್ತೆಂ
ದಾಕುಳದಿ ರಘುನಾಥ ಕೇಳಲು
ಕೈಕೆಯೆಂದಳು ರಾಮ ದುಃಖವಿದೆಲ್ಲ ನಿನಗಾಗಿ ||
ನೀ ಕಡೆಗೆ ದುಃಖವನು ದಾಂಟಿಸ
ಬೇಕು ಕಿಂಚಿತ್ಕಾರ್ಯವುಂಟದ
ಕೇಕೆ ಸಂಶಯ ಸತ್ಯವಂತ ಪಿತಂಗೆ ಹಿತವಾಗಿ || ೩೦ ||

ಕೊಟ್ಟ ಪೂರ್ವದಲೆರಡೊರವನೆನ
ಗಿಷ್ಟವಾದುದನದುವೆ ನಿನ್ನಯ
ಮುಷ್ಟಿಗತವಾಗಿರಲು ಹೇಳಲು ನಿನಗೆ ಲಜ್ಜಿಸುವ ||
ಕಟ್ಟುವಡೆದನು ಸತ್ಯ ಪಾಶದಿ
ಬಿಟ್ಟು ಕಳೆ ಬಂಧನವ ಮಕ್ಕಳು
ಹುಟ್ಟಿ ತಂದೆಯ ನಿರಯದಿಂದುದ್ಧರಿಸುವರೆ ಸುತರು || ೩೧ ||

ಕೇಳಿ ಕರ್ಣವ್ಯಥೆಯನೆದೆಯೊಳ
ಗೇಲಳಗು ಮುರಿದಂತೆ ಚಿಂತಿಸಿ
ಹೇಳು ತಂದೆಯ ಸತ್ಯವಾವುದು ತಾನು ಪಾಲಿಸನೆ ||
ಕೇಳು ಪಿತನ ನಿಮಿತ್ತ ತಾಯನು
ಬಾಲೆಯನು ರಾಜ್ಯವನು ಬಿಡುವೆನು
ಮೇಲೆ ವಿಷವುಂಟೆಂದಡುಂಬೆನು ಬಿಡುವೆ ತನುಸಹಿತ || ೩೨ ||

ಉತ್ತಮನು ನೆನೆದುದನು ಮಾಳ್ಪವ
ನತ್ಯಧಮ ನುಡಿದುದನು ಮಾಳ್ಪವ
ವ್ಯಕ್ತವೆಂದರು ಮಾಡದವ ಮಗನಲ್ಲ ಪಿತೃ ವೊದಲಾ ||
ಗತ್ತ ಪುಳುವೆಲೆ ತಾಯೆಯದುಗುಣ
ಸತ್ಯಸತ್ಯವು ಪಿತನ ವಚನಕೆ
ವ್ಯರ್ಥವಹುದೇ ರಾಮಭಾಷಿತಕಿಲ್ಲ ಹುಸಿಯೆಂದ || ೩೩ ||

ಎನಲದನು ಕೇಳುತ್ತ ನುಡಿದಳು
ಘನ ಪ್ರತಿಜ್ಞೆಗೆ ಕೈಕೆ ರಾಜ್ಯವ
ನನುಗೊಳಿಸು ಭರತಂಗೆ ಸಂಭೃತ ಪಟ್ಟ ಶೋಭನವ ||
ವನದಿ ಹದಿನಾಲ್ಕಬ್ದ ಚೀರಾ
ಜಿನ ಜಡಾಧರನಾಗಿಯನ್ಯಾ
ಶನವಲಿರಬೇಕೇಳು ಬೇಗದಿ ನಿಲ್ಲದೀಕ್ಷಣವೆ || ೩೪ ||

ಇನಿತು ಮಾತ್ರವ ನುಡಿವಡೀ ನಿಜ
ಜನಕ ನಾಂಚುವ ನಿನಗೆ ಕಾರ್ಯವಿ
ದೆನಿತಲಮು ಮಾಡಾಪಡೆನಲೆಂದನು ರಘೂತ್ತಮನು ||
ಜನನಿ ರಾಜ್ಯವನಿತ್ತೆ ಭರತಗೆ
ವನಕಿದೇನಾ ಪಯಣವಿನಿತಕೆ
ಜನಕ ನುಡಿಯದೆ ನಾಂಚಲೀತಕ್ಕೆಂದನಾ ರಾಮ || ೩೫ ||

ಎಂದು ನುಡಿವುತ ಮತ್ತೆ ನಿಂದಾ
ನಂದ ಮೂರ್ತಿಯ ಮಾತನಾಲಿಸಿ
ಕಂದಣಿಯೆ ನೋಡುತ್ತ ದುಃಖದಿ ಮೂಡಿ ಮುಳುಗಾಡಿ ||
ಕಂದ ಕೇಳುನ್ಮತ್ತ ಸ್ತ್ರೀಜಿತ
ನಿಂದ ಭ್ರಾಂತನು ತಾನು ಕೊಟ್ಟುವ
ನಿಂದು ಧರಿಸಘವೆನಗೆ ನಿನಗೆಯುಂ ಮುಟ್ಟವಂತೆಂದ || ೩೬ ||

ಇಂತೆನುತ ದುಃಖದ ವಿಲಾಪ
ಭ್ರಾಂತನೆಂದನು ರಾಮ ಹಾ ಕುಲ
ಕಾಂತ ಹಾ ರಘುನಾಥ ಹಾ ಜಗದರಸ ಹಾ ಯೆನ್ನ ||
ಚಿಂತಿತಪ್ರದ ಹಾ ಮಗನೆ ಹಾ
ಕಂತುಮೋಹನ ಹಾ ಮಡೀಯಾ
ಚಿಂತ್ಯರನುನವಿಹಾಯನುತ್ತಡಗೆಡದು ಹಳವಿಸಿದ || ೩೭ ||

ರಾಮ ಹಾ ಗುಣಧಾಮ ಹಾ ನಿ
ಸ್ಸೀಮ ಹಾ ಸುಕ್ಷೇಮ ಹಾ ಮ
ತ್ಪ್ರೇಮ ಹಾ ಯೆನ್ನಯ್ಯ ಹಾ ಯೆನ್ನರಸ ಹಾ ಯೆನುತ ||
ಭೂಮಿಪತಿ ಬ್ಯಾಬಿಡುತ ತಕ್ಕೈಸಿ
ರಾಮನಾಲಿಂಗಿಸುತ ಮಾತು ವಿ
ರಾಮ ಕಂಠದಿ ಕಣ್ಣುನೀರಲಿ ತೆಪ್ಪವಾಗಿರ್ದು || ೩೮ ||

ಯೆತ್ತಿ ಕುಳಿರಿಸಿ ರಾಮ ತಂದೆಯು
ನೊತ್ತಿ ಕಂಗಳನರಳಿಸುತ ನಿಜ
ಹಸ್ತದಲಿ ಕಣ್ಣುನೀರ ತೊಡೆದಾಶ್ವಾಸಿಸುತ ಬಳಿಕ ||
ಮತ್ತವನ ನಯದಿಂದ ತಿಳುಹಿದ
ನತ್ತ ದುಃಖಕ್ಕೇನು ಕಾರಣ
ಮತ್ತದೊಬ್ಬನೆ ಸುತ ಭರತ ನಿನಗೆನಗಸು ಜನೆಂದ || ೩೯ ||

ಎಲ್ಲವೂ ಪರವಲ್ಲದುಂಟೇ
ಯೆಲ್ಲಿ ಯೆಲ್ಲೆಂದೆಂಬ ಭೇದದ
ಸೊಲ್ಲು ಘಟಿಸುವುದೆಂತು ಪೂರ್ಣಾದ್ವೈತ ಚಿತ್ತಿನಲಿ ||
ಬಲ್ಲವಗೆ ವನ ಮನೆಯು ಮಿಗುವುದು
ಖುಲ್ಲರಿಗೆ ಮನೆಯುಡವಿಯಾಗಿಹು
ದೆಲ್ಲಿಯೂ ಚೈತನ್ಯವಿರಲಗಲುವುದದೆಂತೆಂದ || ೪೦ ||

ಹೋದೆನೆಂಬುದು ಬಂದೆನೆಂಬೀ
ಭೇದ ಚಿತ್ತಿನ ವಿಕೃತಿಯುರಿತರೆ
ಭೇದ ಕಾರಣವಿಲ್ಲ ತಿಳಿಯೆ ಸುಷುಪ್ತಿ ಮೂರ್ಛೆಯಲಿ ||
ಹೋದವನೊ ಬಂದವನೊ ಮಾಯೋ
ಪಾಧಿಕೃತ ಪ್ರಾರಬ್ಧ ಜೀವರಿ
ಗಾದಿಯಾಗೀ ಸ್ವಪ್ನವಂತಿಹುದೆಂದನಾ ರಾಮ || ೪೧ ||

ಮಸಗನಾತುಮನೇಕನದ್ವಯ
ಹೆಸರು ಮುನ್ನಿಲ್ಲಲ್ಲಿ ಕಲ್ಪನೆ
ಮಸಗುವುದು ನಿದ್ರೆಯಲಿ ಕನಸದು ಹೊಳದು ಹೋಹಂತೆ ||
ಮಸಗಿದಡೆ ಜಲಬಿಂಬ ರವಿ ತಾ
ಮಸಗುವನೆ ಮೇಲರ್ಕ ಮಸವಲಿ
ಹೆಸರಿಸಿದ ಗಮನಾಗಮನ ಪರಮಾತ್ಮಗಿಲ್ಲೆಂದ || ೪೨ ||

ಬಾರ ಹೋಗಸು ಕೂಡನಗಲನು
ದೂರ ಹತ್ತಿರವೆಂಬ ತಸುಕೃತ
ವೇರಿವಾತ್ಮಗನತ್ಯನಕ್ರಿಯ ರೂಪವಿರಹಿತನು ॥
ಸಾರ ನಿಜದಲ್ಲಿಂತು ಮಾಯಾ
ಕಾರಿಯಾದಿನನ್ನೆದೆ ವಸದಲಿ
ಸೇರಿ ಹದಿನಾಲ್ಕಬ್ದ ಕಳಿಯಲು ಮರಳಿ ಬಹನೆಂದ ॥ ೪೩ ॥

ಸತ್ಯವುಳಿವರೆ ಕೀರ್ತಿಯುಳಿವುದು
ಸತ್ಯವುಳಿವರೆ ಲೋಕವುಳಿವುದು
ಸತ್ಯವುಳಿದರೆಯರ್ಥ ಬಲವೈಶ್ವರ್ಯ ಸೇರುವುದು ॥
ಸತ್ಯವಳಿದಡದೆಲ್ಲ ಕೆಡುವುದು
ಮತ್ತೆನಾನಡವಿಯಲಿ ನಿನ್ನಯ
ಸತ್ಯಕಿರೆ ತನಗಲ್ಲಿ ರಾಜ್ಯದ ಕೋಟಿ ಸುಖವಹುದು ॥ ೪೪ ॥

ಕೈಕೆ ಯೌರಾಜ್ಯವನು ಬಿಡಿಸಲ
ನೂಕಿ ಹಾಸನು ಕೆಡಹಿದಂತಾ
ಯ್ತೇಕೆ ತಡವಿದೆಯೆದ್ದನೀಗಳೆ ತಾಯ ಸಂತವಿಸಿ ॥
ಲೋಕದೊಳು ಪಟ್ಟೋತ್ಸವವು ಯೆಂ
ದಾಕರಿಸುವಳು ಸಂಭ್ರಮವ ಕಂ
ಡಾಕೆಯನು ಸಂತವಿಸಿ ಸೀತೆಯು ತಿಳುಹಿ ಬಹೆನೆಂದ ॥ ೪೫ ॥

ಬಂದು ನಿಮ್ಮಡಿಗೆರಗಿ ನಾ ಸುಖ
ದಿಂದ ವನಕೈದುವೆನೆನುತ ಬಲ
ಬಂದು ಹೋದನು ತಾಯಮಂದಿರಕಾಗವಳು ಮುದದಿ ॥
ಇಂದಿರೇಶನ ಪೂಜಿಸುತ್ತಾ
ನಂದವಾಗಲು ರಾಮ ಪಟ್ಟ
ಕ್ಕೆಂದು ಹವಣವ ಮಾಡಿ ಧನವೀವುತಿರೆ ವಿಪ್ರರಿಗೆ ॥ ೪೬ ॥

ಧ್ಯಾನಿಸುವಳಾಗೊಳಗೆ ವಿಷ್ಣುವ
ಮೌನವಲಿ ಚಿದ್ಘನ ನಿರತಿಶಯ
ಭಾನುಕೋಟಿ ಪ್ರಭನನೇಕನನಂತರಾತುಮನ ||
ಸ್ವಾನುಭವದಾನಂದ ರೂಪನ
ನೇನ ನೆನೆಯುದೆ ಹೃದಯ ಕಮಲದಿ
ತಾನು ತಾನಾಗಿರಲು ಕಂಡನು ರಾಮ ಕೌಸಲೆಯ || ೪೭ ||

ರುದ್ರ ಸಂಖ್ಯದ ಸಂಧಿಯಲಿ ಪದ
ಪದ್ರಿಪದ್ರಿಯಲೂನವೇಕ
ಕ್ಷುದ್ರ ಭಾವದಿ ಹೇಳಿಕೇಳಿವಡಘ ವಿನಾಶವಿದು ||
ಹೊದ್ದಿ ಹೊದ್ದವವೋಲು ಸಕಲದ
ಲಿದ್ದು ಬೆಳಗುವ ಪಾರ ಸೌಖ್ಯನ
ಮುದ್ರ ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹ ಸಲಹೆಮ್ಮ || ೪೮ ||

ಅಂತು ಸಂಧಿ ೧೧ಕ್ಕೆ ಪದ ೪೬೭ ಕ್ಕೆ

ಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ಹನ್ನೆರಡನೆಯ ಸಂಧಿ

## ರಾಮನು ವನಕ್ಕೆ ತೆರಳಿದ್ದು
## ( ತಂದೆತಾಯಿಯರನ್ನ ಸಮಾಧಾನ ಪಡಿಸಿ )

ಸೂಚನೆ ॥ ತಾಯಿತಂದೆಯ ಸತ್ಯ ವಚನವ
ತಾಯಿ ತಮ್ಮನ ತಿಳುಹುತಾ ರಘು
ರಾಮ ಸೀತಾ ಲಕ್ಷ್ಮಣರು ಸಹ ಪುರವ ಹೊರವಂಟ ॥

ಪದ ॥ ಕೇಳು ಪಾರ್ವತಿ ರಾಮ ಮುಂದಿರೆ
ಹೇಳಿದಳು ಹರ್ಷದಲಿ ಕೌಸಲೆ
ಗೇಳು ರಾಘವ ಬಂದನೆಂದು ಸುಮಿತ್ರೆ ಸಂಭ್ರಮದಿ ॥
ಹೂಳಿದಂತರ್‌ದೃಷ್ಟಿಯಿಂದಾ
ಬಾಲೆಯೆಚ್ಚರ್ತದಿರು ನಿಂತಾ
ನೀಲಮೇಘ ವಿಶಾಲನೇತ್ರನ ಕಂಡಳಾ ತರಳೆ ॥ ೧ ॥

ಕಂಡು ಹರ್ಷದಲೆದ್ದು ತಕ್ಕೈಸಿ
ಕೊಂಡು ವಂಕದಲೊಪ್ಪೆ ಕುಳಿರಿಸಿ
ಮಂಡೆಯನು ವಾಸನಿಸಿ ನೀಲೋತ್ಪಲ ನಿಂಭಾಂಗವನು ॥
ಪುಂಡರೀಕದಳಾಕ್ಷಿ ಮುಟ್ಟುತ
ಖಂಡ ಸುಖದಲಿ ಮುಳುಗಿ ಹಸಿದೇ
ನುಂಡು ನಿಲ್ಲೈ ರಾಮ ದಿವ್ಯಾನ್ನವದೆಯುಣಲೆಂದು ॥ ೨ ॥

ಅಮ್ಮ ಉಣಲಿನ್ನಿಲ್ಲಿಯುವಸರ
ಘಮ್ಮನೆದ್ದೆನು ದಂಡಕಾನನ
ಕೆಮ್ಮ ಪಿತ ಸತ್ಯವನು ಪಲಿಸಿದ ಕೈಕೆಗೊರವಿತ್ತು ||
ನಮ್ಮ ಭರತಗೆ ರಾಜ್ಯವಿತ್ತನು
ನಿರ್ಮಮದ ವನವಿತ್ತನೆನಗಾ
ಸಮ್ಮತಪ ಋಷಿವರರೊಡನೆ ಹದಿನಾಲ್ಕು ವತ್ಸರವ || ೩ ||

ಅಲ್ಲಿ ಹದಿನಾಲ್ಕಬ್ದವಿದ್ದಾ
ನಿಲ್ಲಿಗೈತಹೆನಮ್ಮ ಮರುಗದಿ
ರೆಲ್ಲ ದೈವಾಧೀನವೆನೆ ಕೇಳುತ್ತ ಯದೆಯೊಳಗೆ ||
ಭಲ್ಲೆಯವ ಮುರಿದಂತೆ ಬಿದ್ದಳು
ತಳ್ಳಳಿಸಿ ಮೂರ್ಛೆಯಲಿ ನಡುಗುತ
ಮೆಲ್ಲನೆದ್ದಿದನೆಂದಳಸುಖಾರ್ಣವದ ಕಡಲೊಳಗೆ || ೪ ||

ಎತ್ತಲಾನೂ ರಾಮ ತನ್ನುವ
ನಿತ್ತ ಬಿಟ್ಟೈದಿದಡೆ ಬದಕುವ
ವೃತ್ತಿಯಿಲ್ಲೊಂದೇ ಕ್ಷಣಾರ್ಧವನೆಳಗರುವನುಳಿದು ||
ಮತ್ತ ಪಶು ನಿಲಬಲ್ಲುದೆಂತೈ
ಚಿತ್ತ ಸಾಕ್ಷಿಕ ಪುತ್ರನಲ್ಲದೆ
ಹೆತ್ತ ಮಕ್ಕಳ ಶಬ್ದಮಾತ್ರವೆ ರಾಮ ನೀನೆನಗೆ || ೫ ||

ಭರತಗವಿಳಾವನಿಯ ಭೋಗದ
ಪುರವನೆಲ್ಲವ ಕೊಡಲಿ ನಿನಗೇ
ಕರಸನಾಜ್ಞಾಪಿಸುವನಡವಿಗೆ ಕೈಕೆಗೋ ನೃಪಗೋ ||
ತರುಣ ನೀನಪರಾಧಿಯಲ್ಲೆಲೆ
ಧರಿಸುವೈ ಪಿತನೆಂದ ಮಾತನು
ಧರಿಸಲಾಗದೆ ತನ್ನ ಮಾತನು ರಾಮ ನೀನೆಂದು || ೬ ||

ತಂದೆ ತಾಯಿಗಳಿಬ್ಬರೂ ಗುರು
ವೇದೆ ಕಾಣಲೆಬೇಕು ರಾಘವ
ತಂದೆಯಾಜ್ಞೆಗೆ ನಡೆವೆ ತನ್ನಾಜ್ಞೆಯನು ಮೀರಿವಡೆ ||
ಇಂದು ಗತಿ ಯಾರೆನಗನಾಥೆಗೆ
ಹೊಂದಬೇಕೀ ತನುವ ಬಿಟ್ಟರ
ವಿಂದ ಸಖಸುತನಾಲಯವನೆಸುತತ್ತಲೊಡಲೊಡೆಯಿ || ೭ ||

ಕೇಳಿ ತದ್ದುಃಖವನು ಲಕ್ಷ್ಮಣ
ಗಾಲಿಗಳು ಕಿಡಿಗೆದರಿ ಜಗವನು
ಬೀಳುವಂದಿನ ರುದ್ರನಂತಿರಬೆಂದನಗ್ರಜಗೆ ||
ಖೂಳನೃಪನುನ್ಮತ್ತ ಕೈಕೆಯ
ಕಾಲನೋಲೈಸುವವ ಭರತನ
ಸೀಳಿಬಿಡುವನು ಕಟ್ಟಿತಹೆ ತದ್ಬಂಧು ಮಾತುಳರ || ೮ ||

ನೋಡು ತನ್ನಯ ಶೌರ್ಯವೀಗಳೆ
ನಾಡಸುರಲೋಕವನು ಸುಡುವೆನು
ಮಾಡು ರಾಜ್ಯವ ರಾಮ ಸುಖವಲಿ ಪಟ್ಟವನು ಧರಿಸು ||
ಕೂಡೆ ಧನುವನು ಧರಿಸಿ ವಿಘ್ನವ
ಮಾಡುವರ ಸವೆ ಬಡಿವೆ ನೆನೆ ಹೋ
ಬೇಡ ಲಕ್ಷ್ಮಣ ಸಹಸಿ ನೀನೆನುತಪ್ಪಿದನು ರಾಮ || ೯ ||

ಶೂರ ನೀ ರಘುಕುಲದ ನೃಪರಲು
ದಾರಸಿಂಹನು ಬಲ್ಲೆ ಸತ್ವವ
ಕಾರಿಯುವು ತಾನಲ್ಲವಿದರೊಳು ಸಮಯವಲ್ಲವಳೆ ||
ಮಾರನನುಜನ ವ್ಯರ್ಥವಾಗಿ ವಿ
ಚಾರವಂತರು ಕರೆಯಬಾರದು
ದಾರಿಯೇ ನಮಗಿದಪುರಾರ್ಥದಲೆಂದನಾ ರಾಮ || ೧೦ ||

ಎತ್ತಲಾನೂ ಲೋಕ ಧನ ಗೃಹ
ಮತ್ತಕಾಶಿನಿ ರಾಜ್ಯತನು ಸಹ
ಸತ್ಯವಾದಡೆ ಸಫಲವೀ ನಿನ್ನ ಪ್ರಯಾಸವಿದು ||
ಮತ್ತೆ ನೋಡಲು ಭೋಗ ಮೇಘದ
ವೃತ್ತಿಯೊಳಗಣ ಮಿಂಚು ಹೊಳೆವಳಿ
ವೃತ್ತಿರವೆಯ,ದರಂತೆ ಸಂಭ್ರಮವಾಗಿ ಬಗೆಗೆಂದ || ೧೧ ||

ಕಾಲವದನಗ್ರಸ್ಥ ಮೂಢರು
ಮೇಲೆ ಭೋಗವ ನುಣಲು ಬಯಸುವ
ಚಾಳಿ ಸರ್ಪನು ಪಿಡಿದ ಭೇಕನು ನೊಣವರಸುವಂತೆ ||
ಹೇಳಲಾಯುಷ ತಪ್ತ ಲೋಹದ
ಮೇಲೆರೆದ ಜಲಬಿಂದುವಿನ ಪರಿ
ಹಾಳು ವಿಷಯಕ್ಕಾಗಿ ಪಾರಸು ಜರಿವರೆಂತೆಂದ || ೧೨ ||

ಮಾಡುವನು ಹಗಲಿರುಳು ದುಃಖವ
ತೋದುತೀ ಭೋಗಾರ್ಥ ಕರ್ಮವ
ಕೂಡಲರಿಯದು ಭೋಗವದು ದೊರಕಿದರು ಕೆಡುವುದಲ ||
ಮೂಢ ದೇಹದ ಭೋಗವನು ತಾ
ನೋಡುವನು ಸಾಕ್ಷಿಯಲಿ ಪುರುಷನು
ಕೂಡನುಣ್ಣನು ತಮ್ಮ ಬಯಲಿಗೆ ಬಳಲದೇಕೆಂದ || ೧೩ |

ತಂದೆತಾಯೊಡ ಹುಟ್ಟು ಬಾಂಧವ
ವೃಂದವೊದಲಾದೆಲ್ಲ ನದಿಯಲಿ
ಬಂದಹೊನಲಿಂ ಧನದಪರಿ ಕರ್ಮಾನುಸಾರದಲಿ ||
ಒಂದುಗೂಡುವುದಗಲುವುದು ಸಿರಿ
ಬಂದಡದು ನೆಳಲಂತೆ ನಾರಿಯು
ಕೆಂದಡದು ತಾ ಕನಸು ಯವ್ವನ ಊರ್ಮಿ ಜಲನಿಧಿಯ || ೧೪

ಬಿಸಿಲುದೊರೆ ಕನಸಿಂದ್ರ ಜಾಲ
ಪ್ರಸರ ಗಗನದ ಹೂವು ಬಾಲರ
ಕುಶಲವಾ ಗಂಧರ್ವ ನಗರ ಮಹೇಂದ್ರ ಚಾಪವಿದು ||
ಸಸಿನವಿಕಸದೆ ಯಾಯುವಾಪರಿ
ನಸಿದು ಹೋಹುದು ಭಾನು ಮೂಡಣ
ದೆಸೆಯ ಪಡುವಲು ಮತ್ತೆಮೂಡಲು ಉದಿಸುತಿಪ್ಪಂತೆ || ೧೫ ||

ಜರೆಮರಣ ಕ್ಷುತ್ತೃಷೆಯು ಶೋಕವು
ಹಿರಿದು ಮೋಹವು ಲೋಭಮತ್ಸರ
ಪರರ ಬಾಧಾ ಚಿಂತೆ ನಾನಾವ್ಯಾಧಿ ವ್ಯಸನವಲಿ ||
ಇರುಳು ಹಗಲೆಂದೆನ್ನದಾವಗ
ಹೊರಳುತಿದಿರೊಳು ಕಾಲ ವೇಗವ
ನರಿಯರಜ್ಞಾನಿಗಳು ಭೋಗಾಪೇಕ್ಷೆ ಮಾತ್ರದಲಿ || ೧೬ ||

ರಾಟೆಯೆತ್ತಿದ ಕೊಡನುದಕ ಕೂ
ದೋಟಕದು ಕೆಳಗಿಳಿವ ಪರಿಯೋ
ರಾಟದಾಯುಷ ತುಂಬಿ ಮತ್ತದು ತೀರಿ ಹೋಹುದಲ ||
ದೂಟಕದ ಜರೆಯೆಂಬ ನಾರೀ
ಕೂಟ ಪೆರ್ಬುಲಿಯಾಗಿ ಹಳುವವ
ಳಾಟವನು ನೋಡುತ್ತ ನಿಂತಿಹ ಮೃತ್ಯುವನವರತ || ೧೭ ||

ಎನ್ನದೇಹವಿದಾನು ನೃಪ ಸಂ
ಪನ್ನ ಭೋಗಿ ಜಗತ್ಪ್ರಸಿದ್ಧನು
ಗನ್ನಶತಕವನರಿತೆನೆಂದರೆ ಮರಣಬರೆ ಬಳಿಕ ||
ಹೊಸ್ನಹುದು ಹುಳುವಹುದೊ ಚಿತಿಯುತ
ವನ್ಹಿಭಸುಮವೊ ವಿಷ್ಟೆಯಹುದೋ
ವನ್ಯಪ್ರಾಣಿಗಳುಂಡುದನು ತಾನರಿವರಾರೆಂದ || ೧೮ ||

ರೇತನೆತ್ತರವೇಧ್ಯ ಮೂತ್ರ
ವ್ರಾತಸಿರೆತೊಗಲೆಲುವು ನಾಡಿಯು
ಜಾತರೋಮವು ಮಾಂಸ ಹೇಸಿಕೆಯೊಡಲ ದುಃಖವಿದು ||
ಜಾತೆಯೇ ಕಾಲಾಗ್ನಿ ದಗ್ಧವಿ
ಘಾತ್ಯ ಪಾಶ ಪರೀತ ಜೀವರ
ನೇತಕ್ಕೆ ನೀ ಕೊಲುವೆ ಸತ್ತರನೆಂದನಾ ರಾಮ || ೧೯ ||

ತನುವಿದುವೆ ತಾವೆಂದು ಲೋಕದ
ಜನವು ದುಃಖದಿ ಬೇವುತಿಪ್ಪುದು
ಮನದಿದೇಹವು ನಾನೆದೆಂಬುದು ವಿದ್ಯೆಯೇ ಸತ್ಯ ||
ಅನುಜಕೇಳಾ ವಿದ್ಯೆಯಿಂದವೆ
ತನಗೆ ತನು ವಿಲ್ಲೆಂದು ಯೋಚಿಸಿ
ಯನವರತ ಚಿನ್ಮಾತ್ರನೇ ತಾನೆಂದು ಭಾವಿಪುದು || ೨೦ ||

ವಿದ್ಯೆಯಿಂದಲವಿದ್ಯೆಯನುದಿನ
ಬುದ್ಧಿವಂತನು ಕೆಡಿಸಬೇಕೈ
ಶುದ್ಧ ಸತ್ವಾಚಾರ್ಯ ಸೇವೆಯುಲಾತ್ಮಕಾಂಕ್ಷಕನು ||
ಹೊದ್ದಲಾಗದ ವಿದ್ಯೆಯನು ಬಿಡ
ದಿದ್ದು ಸನ್ಮಾರ್ಗದಲಿ ನಡೆಯಲು
ವಿದ್ಯೆ ಮೆಲ್ಲನೆ ತಾನೆಯಭ್ಯಾಸದಲಿ ಜನಿಸುವುದು || ೨೧ ||

ಕಾಮ ಮೋಹಾದಿಗಳು ವಿದ್ಯಾ
ಕಾಮಿಗವು ಶತ್ರುಗಳು ವಿ
ರಾಮ ಕೇಳದರೊಳಗು ಮುಕುತಿಗೆ ವಿಘ್ನಕಾರಿ ಕಣಾ ||
ತಾಮಸದ ಕ್ರೋಧಾಖ್ಯವವನಿಂ
ವೈಮನಸ್ಯವೆ ಜನಿಸಿ ಕೆಡಿಸುವ
ನೀ ಮುದದಿ ಕೋಪವನು ಜರಿದವೆ ಲೇಸು ಬಳಿಕೆಂದ || ೨೨

ಕೋಪವೊಳಗುದ್ಭೂತವಾದಾ
ಪಾಪಿ ಪಿತೃಹಾಯ್ ತಮ್ಮ ಬಂಧು ಕೃ
ತೋಪಕಾರಾಪ್ತರನರಿಯನಾ ಕೋಪದಿಂ ಬಳಿಕ ||
ತಾಪಜನಿಸುಗು ಧರ್ಮಕೆಡುವುದು
ಕಾ ಪಥದ ಸಂಸಾರ ಕಟ್ಟುಗು
ಕೋಪವನು ಯಮಗುಣದಿ ನೀ ಬಿಡಬೇಕು ಕೇಳೆಂದ || ೨೩ ||

ದೇಹನರಕ ಸಮೂಹವವರಲಿ
ಮೋಹಗಳೆ ಯಮದೂತರಾಶಿಯೆ
ತಾಹವದ ( ಮಹಾ ) ವೈತರಣಿ ಯಮನಾಗಿಹ ಕಣಾ ಕೋಪ ||
ಬೇಹ ಕರ್ಮವೆ ಚಿತ್ರಗುಪ್ತನು
ತೋಹಿಯಗ್ನಿಯೆ ತಾಪಮೂರಿದ
ದೇಹನಾನೆಂದೆಂಬ ಪಾತಕಿಯುಂಬ ಕೇಳೆಂದ || ೨೪ ||

ಶಮೆಯೆ ನಂದನ ಕಾಮವಿಷಯ
ಭ್ರಮೆ ಕೆಡುವುದುರ್ವಶಿಯ ಭೋಗವು
ರಮೆಯನಾಳ್ದನ ಭಕ್ತಿ ಸುರಪನ ಪಟ್ಟ ಸಂತೋಷ ||
ಅಮೃತಪಾನ ಜ್ಞಾನ ರತುನವು
ವಿಮಲವಾತ್ಮಧ್ಯಾನ ಸುರತರು
ನ ಮಮ ಯೆಂಬುದು ಸ್ವರ್ಗವಿಲ್ಲಿಯೆ ತಮ್ಮ ನೋಡೆಂದ || ೨೫ ||

ಇಂದು ಮೊದಲೀ ಶಾಂತನಾಗಿರು
ಕಂದಶತ್ರುಗಳಿಲ್ಲವೀ ದೇ
ಹೇಂದ್ರಿಯಪ್ರಾಣಾದಿ ಮನಬುದ್ಧಿಗಳ ಕಲ್ಪನೆಯ ||
ದ್ವಂದ್ವವಳಿದರಿಯಾತ್ಮ ಶುದ್ಧಾ
ನಂದ ಸಂವಿಜ್ಯೋತಿ ವಿಕೃತಿಯ
ನೊಂವರೂಪವದಿಲ್ಲ ಕೇವಲ ಸತ್ಯಮಾತ್ರವನು || ೨೬ ||

ತನ್ನ ನಿಜವೇ ಕೇವಲಾತ್ಮನು
ಭಿನ್ನಮನ ಪ್ರಾಣೇಂದ್ರಿಯಗಳಿಂ
ದನ್ಯನೆಂದರಿವನ್ನ ದುಃಖದಿ ಮುಳುಗಿ ಬಳಲುವನು ||
ನನ್ನ ನುಡಿಯಲಿ ಮನನಗೋಚರ
ವನ್ಯವೆಂದರಿ ಸಕಲ ಕಾಲದಿ
ನಿನ್ನೊಳೇನೂ ನೆನೆಯದದ್ವಯ ಪೂರ್ಣವಾಗೆಂದ || ೨೭ ||

ಮನದಲನವರತೇನ ನೆನೆವನು
ಮನುಜಗಾ ವಾಸನೆಯ ಬಲಿವುದು
ಮನದ ನೆನಹವ ನಿತ್ಯನಿರ್ಗುಣದಲ್ಲಿ ಬೆರಸಿದಡೆ ||
ಮನವು ಗುಣವನು ಬಿಟ್ಟು ಮೆಲ್ಲನೆ
ನೆನಹುಗೇನೂ ತೋರದಿದ್ದಾ
ಮನವು ತನ್ನಿಂ ತಾನೆಯಳಿದೇಕಾತ್ಮಮಯವಹುದು || ೨೮ ||

ಪ್ರಾರಬುಧ ಸುಖದುಃಖವಾರಿಗು
ತೀರಮಣ್ಣದೆ ಹೊನಲ ಕೊರಡಿನ
ಸಾರಿಯಾಗಿರು ತುಂಡದೇನೂ ಲೇಪವವಗಿಲ್ಲ ||
ಮಾರವರ್ಗವ ಮುರಿದು ಕರ್ತೃವಿ
ಕಾರವಿಲ್ಲದೆ ಮನದಿ ತನು ಸಂ
ಚಾರ ಮಾತ್ರದಿ ಕರ್ತೃವವರಿಗೆ ಬಂಧವಿಲ್ಲೆಂದ || ೨೯ ||

ನಾ ನಿನಗೆ ಪೇಳ್ವದ ನಿರಂತರ
ಸ್ವಾನುಭವದಲಿ ಭಾವಿಸಿದ ರಿಂ
ಹಾನಿದುಃಖಾಕೀರ್ಣ ಸಂಸೃತಿ ಲೇಪ ಬಳಿಕಿಲ್ಲ ||
ನೀನಿದನು ನಂಬೆಂದು ತಮ್ಮಗೆ
ಮಾನಸವ್ಯಥೆಯೇತಕವ್ವಾ
ಮಾನಸದಿ ಮರಹಿಲ್ಲದೆನ್ನನೆ ನೆನೆವುತಿರು ಯೆಂದ || ೩೦ ||

ನನ್ನ ಬರವನೆ ಹಾರುತಿದ್ದರೆ
ನಿನ್ನದುಃಖವು ಕಾಡಲರಿಯದು
ಸನ್ನಿಹಿತವೇಕತ್ರ ಸೇರದು ಕರ್ಮಬದ್ಧರಿಗೆ ||
ಮನ್ನಿನಪ್ರಾರಬ್ಧ ಸಮ್ಮತ
ದಾರ್ಸವಾಗತ ಕೊರಡಿನಂತೆನ
ಗಿನ್ನು ಹದಿನಾಲ್ಕಬ್ದ ಕ್ಷಣವಂತಹುದು ಕೇಳೆಂದ || ೩೧ ||

ನನಗೆ ಚಿಂತಿಸಬೇಡ ವನದಲಿ
ಮನೆಯೆ ಸರಿ ಸುಖವಾಸವೇ ಯಹು
ದೆನುತ ದಂಡವವೋಲು ಬಿದ್ದಂಘ್ರಿಯಲಿ ನಮಿಸಿರಲು ||
ಜನನಿ ತೊಡೆಯಲ್ಲೆತ್ತಿ ಕುಳಿರಿಸಿ
ಮನನೆನೆದು ಹರಸಿದಳು ಹರುಷದ
ಲನುಪಮನೆ ಸುಖದಿಂದ ಬೇಗದಿ ಬಾಯೆನುತ್ತೊಲಿದು || ೩೨ ||

ಕ್ಷೇಮವಾಗಲಿ ನಿನ್ನನಮರ
ಸ್ತೋಮಗಂಧರ್ವರು ದಿಗೀಶರು
ತಾಮರಸಭವ ವಿಷ್ಣು ರುದ್ರಾದಿಗಳು ರಕ್ಷಿಸಲಿ ||
ರಾಮನೀ ನಡೆವಲ್ಲಿ ನಿಂತ
ಲ್ಲಾ ಮಹಾ ನಿದ್ರೆಯಲೆನುತ್ತಾ
ಭಾಮೆಯಡಿಗಡಿಗಪ್ಪಿದಳು ಬಿಡಲಾರದನುಪಮನ || ೩೩ ||

ರಾಮಗೆಂದನು ಲಕ್ಷ್ಮಣನು ಸು
ಪ್ರೇಮ ಗದ್ಗದ ನಯನ ಜಲದಲಿ
ಸ್ವಾಮಿ ನನ್ನಂತಸ್ಥ ಸಂಶಯವಳಿದೆ ನೀನೆನುತ ||
ಭೂಮಿಸುತೆಯದ ಕೇಳಿ ನುಡಿದಳು
ಸಾಮದಲಿ ನಾಮುಂದೆ ಪಯಣವು
ಸೋಮಸನ್ನಿಭ ನೀವು ಬಳಿಕೈದುವುದು ವನಕೆನುತ || ೩೪ ||

ಬಪ್ಪೆನನ್ನೊಡಗೊಂಡು ಹೋಗದೆ
ಕಪ್ಪಿಡಿಲೆಯಾಗಿಹೆನೆ ಯುಚಿತವೆ
ನಿಪ್ಪುದೇ ನಿಮಗೆನಲತಿ ಪ್ರಿಯವಾದ ಸತಿಯೊಡನೆ ||
ಬಪ್ಪೆ ನೀನೆಂತಲ್ಲಿ ಮೃಗಕುಲ
ಸರ್ಪಸಿಂಹವ್ಯಾಘ್ರ ರಾಕ್ಷಸ
ತಿಪ್ಪರವದಿರು ಮನುಜರನೆ ತಿಂಗೆಂದನಾ ರಾಮ || ೩೫ ||

ಶುದ್ಧ ಪುಳಿ ಕಟುಗೆಂಡೆ ಕಾಯಿಸು
ಮದ್ದೆ ಕೇಳುಣಲಲ್ಲಿ ವ್ಯಂಜನ
ವಿದ್ದವೆಲ್ಲಿಯಪೂಪ ಮುಖ್ಯವದೊಂದು ವೇಳೆಯುವು ||
ಶುದ್ಧಿಗೇಳುವಡಿಲ್ಲ ಫಲ ಗೆಣ
ಸಿದ್ದವಿಲ್ಲವೊ ವೇಳೆ ವೇಳೆಗೆ
ಹೊದ್ದಿಹೊಹಡೆ ಮಾರ್ಗ ಕಂಟಕ ಶಂಕು ಶರ್ಕರವು || ೩೬ ||

ಹಿರಿಯ ಗುಹೆಯೊಳಗಿದ್ದ ಝುಲ್ಲೀ
ಕರ ಶರಭ ಕೋಲಾಂಗಳತಿ ಘೋರು
ಘುಂಪವೀಪರಿ ಬಾಧೆ ದಂಡಕಕ್ಕೈದೆ ಕಾಲುನಡೆ ||
ಭರದಿ ಸೀತವು ಗಾಳಿ ಮಳೆ ಬಿಸಿ
ಲುರಿವ ದಾಡೆಯ ದೈತ್ಯರನು ಕಂ
ಡರಿ ಮಹಾಭಯದಿಂದ ನಡುಗುವೆ ಸೀತೆ ನೀನೆಂದ || ೩೭ ||

ಏಣಲೋಚನೆ ನಿಲ್ಲುವುದು ಗುಣ
ಮಾಣದ್ವೈತಹೆ ಬೇಗವೆನ್ನನು
ಕಾಣಬಹುದೆನೆ ಕೇಳಿ ಜಾನಕಿ ರಾಮ ವಚನವನು ||
ಕ್ಷೀಣಮುಖಿ ಕೋಪದಲಿ ಗದ್ಗದ
ವಾಣಿಯೆಂದಳು ಬಿಟ್ಟು ಹೋಹರೆ
ಪಾಣಿವಿಡಿದಂದಿತ್ತಲಗಲದ ವರ ಪತಿವ್ರತೆಯ || ೩೮ ||

ನೀನಗಲಿ ಹಾನಿಹೆನೆ ಧರ್ಮ
ಜ್ಞಾನ ದಯನಿಧಿ ನಿನ್ನ ಹತ್ತಿರೆ
ಸಾಸಿರಲು ನೋಡುವ ಸಮರ್ಥರದ್ದುಂಟೆ ಭೋಜನಕೆ ||
ದೀನತನವೇ ಕಂದ ಮೂಲವ
ನೇನ ನೀ ಭಂಜಿಸಿದ ಶೇಷವ
ಸಾನುರಾಗದಲುಂಟೆ ನಮೃತ ಸಮಾನವದು ತನಗೆ || ೩೯ ||

ಮೆಲ್ಲನಾ ನಿಮ್ಮೊಡನೆ ಚರಿಸಲು
ಕಲ್ಲು ಮುಳ್ಳುಗಳೆಲ್ಲ ಮರಳಿನ
ಮಲ್ಲಿಗೆಯ ಪೋಲಹವು ನನ್ನಂಕದಲಿ ನಿಮ್ಮವನು ||
ಅಲ್ಲಿ ಮಲಗಿಸಿಕೊಂಡು ಕಾರ್ಯವ
ನೆಲ್ಲ ಸಾಧಿಸಿ ನಾನೆ ಮಾಡುವೆ
ನೆಲ್ಲಿಯೂ ಮತ್ತೊಂದ ಚಿತ್ತೈಸೆಂದಳಬುಜಾಕ್ಷಿ || ೪೦ ||

ಬಾಲೆಯಾಗಿರೆ ನನ್ನ ಕಂಡು ವಿ
ಶಾಲ ಜೋತಿಃಶಾಸ್ತ್ರವಂತನು
ಹೇಳಿಹನು ಪತಿಯೊಡನಿವಳು ವನವಾಸಿಯಹಳೆಂದು ||
ಹೇಳಿದಾ ದ್ವಿಜ ಸತ್ಯವಂತನು
ಮೇಳವಿಸಿಹದು ಮತ್ತು ಕಿಂಚಿತ್
ಕೇಳಿ ನನ್ನನುವೊಡನೆ ಕರೆದೊಯ್ಯೆಂದಳಾ ಸೀತೆ || ೪೧ ||

ಹಿಂದೆ ರಾಮಾಯಣವನೇಕವ
ನೆಂದಿಹರು ಕವಿವರರು ವದರೊಳ
ಗಿಂದು ಮುಖಿ ಸೀತೆಯನುಳಿದು ರಾಘವನಡವಿಗಾಗ ||
ಸಂದ ಕಥೆಯೊಂದರೊಳಗಾದರು
ಬಂದದುಂಟೇ ಯದುಗುಣದಿ ತಾ
ಹಿಂದುಗೊಂಡೇ ಬಹೆನು ನಿಮ್ಮ ಸಹಾಯ ಕೃತ್ಯದಲಿ || ೪೨ ||

ಬಿಟ್ಟ ನನ್ನನು ನೀವು ನಡೆವರೆ
ನೆಟ್ಟನೀಗಳೆ ಸಾವೆ ನಿಮ್ಮಯ
ದೃಷ್ಟಿಯಿದಿರಲ್ಲೆನಲು ಮನವರಿದಾಗ ರಾಘವನು ||
ಕಷ್ಟವೇತಕವಶ್ಯ ಬಾರೈ
ತೊಟ್ಟು ಹಾರಭರಣವನು ನ
ವಿಶ್ರಿಷ್ಟ ಗುರುವಿನ ಸತಿಯರುಂಧತಿಗೆಲ್ಲ ಕೊಡು ಬೇಗ || ೪೩ ||

ಧನವ ವಿಪ್ರರಿಗಿತ್ತು ಬಹೆ ನಾ
ಮನೆಯಲಿದ್ದನಿತೆಲ್ಲ ವಸ್ತುವ
ನೆನಲು ಲಕ್ಷ್ಮಣ ಕರೆಸಿಸು ವಿಪ್ರರನು ಭಕುತಿಯಲಿ ||
ಇನಿತು ಧನಗೋವೃಂದ ವಸ್ತ್ರ ಸು
ಕನಕ ಭೂಷಣವೆಲ್ಲ ಹರ್ಷದಿ
ಘನ ಸುಶೀಲ ಶ್ರುತ ಕುಟುಂಬರಿಗಿತ್ತನಾ ರಾಮ || ೪೪ ||

ಮುಖ್ಯವಾದಾಭರಣವನು ತೆಗ
ದಿಕ್ಕಿದಳು ಜಾನಕಿಯರುಂಧತಿ
ಗೊಕ್ಕ ಧನವನು ತಾಯ ಸೇವಕರಿಂಗೆ ಬಡವರಿಗೆ ||
ಲಕ್ಷಣವನರಿತರಿತು ವಿಪ್ರರಿ
ಗಕ್ಷಿಪದಹೀನರಿಗೆ ಪುರಪರಿ
ರಕ್ಷಕರಿಗನುಚರರಿಗುತ್ತಮ ಮಾರ್ಗ ನಿರತರಿಗೆ || ೪೫ ||

ಕೊಟ್ಟಳಾಗ ಸುಮಿತ್ರೆ ರಾಮನ
ಬಿಟ್ಟಿರದಿರೆನುತರ್ಥಿಯಲಿ ಜಗ
ಜಟ್ಟಿ ಲಕ್ಷ್ಮಣದೇವನನು ರಾಘವನ ಕೈಯ್ಯೊಳಗೆ ||
ನೆಟ್ಟನಿಷು ಚಾಪವನು ಧರಿಸಿ
ದ್ದಿಷ್ಟನಾದನು ಮುಂದೆ ರಾಮಗೆ
ಬಿಟ್ಟರಾಗಳೆ ಮನೆಯ ಸೀತಾ ರಾಮ ಲಕ್ಷ್ಮಣರು || ೪೬ ||

ಸೀತೆ ಸಹ ಶ್ರೀರಾಮ ನೃಪಜನ
ಜಾತ ಮಾರ್ಗದಿ ಕಾಲುನಡೆಯಲಿ
ಪ್ರೀತಿ ಲಕ್ಷ್ಮಣನೊಡನೆ ಮೆಲ್ಲನೆ ಹೋಹುದನು ಕಂಡು ||
ಪಾತಕಿಗಳಾದೆವೆ ನಿರೀಕ್ಷಿಸ
ಲೀ ತೆರದಲೆಂದೆಸುತಲಾ ಜನ
ಜಾತ ಮರುಗುತ್ತಿದ್ದುದಾ ಪುರಪೌರವಾಸಿಗಳು || ೪೭ ||

ಇಂದ್ರನೀಲಶ್ಯಾಮ ಕೋಮಲ
ದಿಂದು ಕೋಟಿಪ್ರಭೆಯ ತನುರುಚಿ
ಯಿಂದ ದಿಸೆಯನು ಬೆಳಗೆ ಶತಕಂದರ್ಪ ಸೌಂದರನು ||
ದ್ವಂದ್ವ ಪಾದನ್ಯಾಸ ಪಾವನೆ
ದಿಂದ ಧರೆಗಾನಂದ ನೀವುತ
ತಂದೆಯರಮನೆಗೈದಿದನು ಶ್ರೀ ರಾಮ ಸುಕ್ಷೇಮ || ೪೮ ||

ರವಿಕುಲೇಶ್ವರ ರಾಮ ಚರಿತದಿ
ರವಿಗಣನೆಯಲಿ ಸಂಧಿ ಪದಗಳು
ರವಿಗಳೀ ವೇದಸ್ವರೂಪರೆನಿಪ್ಪ ಸಂಖ್ಯೆಯಲಿ ||
ರವಿಶಶಾಂಕನಲತನುದ್ಯುತಿ
ನಿವಹತೇಜೋರೂಪ ಸಚ್ಚಿ
ದ್ಭುವನ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಪರಬೊಮ್ಮ || ೪೯ ||

ಅಂತು ಸಂಧಿ ೧೨ಕ್ಕೆ ಪದ ೫೧೬ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ಹದಿಮೂರನೆಯ ಸಂಧಿ

## ರಾಮನು ಶೃಂಗವೇರಿಯಲ್ಲಿ ನೆಲಸಿದ್ದು

ಸೂಚನೆ ॥ ತಂದೆಯನು ಬೀಳ್ಕೊಂಡು ಪುರಜನ
ವೃಂದಸಹ ಬರೆ ಮರಸಿ ಹೊರವಂ
ಟೆಂದಿರಾಪತಿ ರಾಮನಿದ್ದನು ಶೃಂಗವೇರಿಯಲಿ ॥

ಪದ ॥ ನಿಜಜನನಿಗಭಿನಮಿಸಿ ತಮ್ಮಗೆ
ಸುಜನ ನೀತಿಯ ತಿಳುಹಿ ಧರೆಯಲಿ
ಅಜನ ಕಲ್ಪವಮೀರಲಳವಲ್ಲೆಂಬುದನು ಪೇಳಿ ॥
ಭಜಿಸುತಿರು ನಾ ಬಹೆ ನೆನುತ್ತವೆ
ಸುಜನರಿಗೆ ಧನವಿತ್ತವನಿಯಾ
ತ್ಮಜೆಯನುಜ ಸಹ ಗೃಹವನುಳಿದಾ ರಾಮ ಸಲಹೆಮ್ಮ ॥ ೧ ॥

ಪ್ರೀತೆ ನಗಸುತೆ ಕೇಳು ರಾಮನು
ಸೀತೆ ಲಕ್ಷ್ಮಣ ಸಹಿತ ಬೀದಿಯ
ಲಾತಗಳು ಧರೆಗಿಡುತ ಹೆಜ್ಜೆಯ ನಡೆವುದನು ಕಂಡು ॥
ಕಾತರದಿ ಜನ ಮರುಗಿ ಕೈಕೆಗೆ
ಭೂತಳಾದಿಪ ವರವ ಕೊಟ್ಟಾ
ಮಾತ ತಮ ತಮ್ಮೊಳಗೆ ವಿವರಿಸುತೀರ್ದುದಖಿಳ ಜನ ॥ ೨ ॥

ಸತ್ಯಸಂಧನು ಗಡ ನೃಪನು ಗಡ
ಮತ್ತಕಾಶಿನಿಗಾಗಿ ರಾಮನ
ಕುತ್ತ ಕೀ ರಾಜ್ಯವನು ಕೊಂಡೀ ಮಗನ ಹೊರವಡಿಸಿ ॥

ಸತ್ಯರೂಪಪರಾತ್ಮ ರಾಮನು
ಮರ್ತ್ಯನೇ ಮಝ್ಝುದಾವ ಚಲುವಿನ
ಪುತ್ಥಳಿಯೊ ಹಾ ರಾಮ ಹಾ ಯೆನುತಿದ್ದುದಖಿಳಜನ ॥ ೩ ॥

ಸತ್ಯಗುಣ ಸಂಪನ್ನ ರಾಮನೆ
ನೆತ್ತಿ ಬಿಟ್ಟಳು ಪಾಪಿ ಕೈಕೆ ಮ
ಱುಕ್ತಿಯಲಿ ಮೂಢಾತ್ಮ ನಾವಿನ್ನಿಲ್ಲಿರುವುದೇಕೆ ॥
ಯೆತ್ತ ರಾಘವ ವಾಸಕಯ್ವುವ
ತತ್ರಕೇಗಳೆ ಕೂಡೆ ಹೋಗುವ
ಹತ್ತಿರಿಯ್ವರಿ ನೋಡಿ ಲಕ್ಷ್ಮಣ ಸೀತೆ ಸಹವಾಗಿ ॥ ೪ ॥

ನೋಡಿರೈ ಜಾನಕಿಯ ಚರಣದಿ
ರೂಢಿಯಲಿ ಬಳುಕುತ್ತ ಹೋಹಳ
ನಾಡ ಪುರುಷರದೆಂದು ಕಾಂಬರೆ ಚೆಲುವೆಯಾದಿವಳು ॥
ಕಾಡ ನೆಲದಲಿ ಕಾಲನಿಡುತವೆ
ನಾಡಜನ ಮಧ್ಯದಲಿ ಮುಸುಕಿನೆ
ಗೂಢಪನ್ನಗವಿಲ್ಲದೆಂದವಳಲಿದುದು ಜನ ನಿವಹ ॥ ೫ ॥

ಆನೆ ಕುದುರೆಗಳೇನು ವಿಲ್ಲಾ
ತಾನೆ ಪಾದದಿನಡೆವ ರಾಮನು
ಹಾನಿಯಲ್ಲಾ ನೋಳ್ಪುದೆವಗಿದು ಸಕಲ ಸಮ್ಮತದಿ ॥
ತಾನು ರಕ್ಷಿಸು ತಿದ್ದನೆಲ್ಲರ
ದಾನವಿಯಲಾ ಕೈಕೆ ಲೋಕದ
ಹಾನಿಕಾರಣೆಯಾಗಿ ಜನಿಸಿದಳೆಂದುದಖಿಳ ಜನ ॥ ೬ ॥

ಸೀತೆ ಬರುಗಾಲಿನಲಿ ನಡೆವಾ
ಗೇತರದಿ ಮರುಗುವನೊ ರಾಮನು
ಚಾತಿಗೆಲ್ಲಾ ಪುರುಷಯತ್ನದಿ ವಿಧಿ ಬಲಾಢ್ಯನಲ ॥

ಯಿೂ ತೆರದಿ ಮರುಗುವ ಜನೌಘ
ವ್ರಾತ ಮಧ್ಯದಿ ವಾಮದೇವಾ
ಖ್ಯಾತಮುನಿ ಸಜ್ಜನರ ನೆರವಿಯಲೆಂದನವರೊಡನೆ ॥ ೭ ॥

ಅರು ಮರುಗದಿರಿಲ್ಲಿ ರಾಘವ
ನಾರು ಜಾನಕಿಯೆಂಬವಳು ಧಿಟ
ಕಾರಣವದರಿಯದಡೆ ತಾಸವದನೆಂಬೆ ರಾಘವನು ॥
ಶ್ರೀರಮಣ ನಾರಾಯಣನು ಮುರ
ವೈರಿ ವಿಷ್ಣು ಮುಕುಂದ ಸೀತಾ
ನಾರಿ ಸಾಕ್ಷಾಲ್ಲಕುಮಿ ಯೋಗಾಧಾರೆ ಪರಮಾಯೆ ॥ ೮ ॥

ರಾಮನೊಡನೈದುವ ಸುಮಿತ್ರನು
ಭೂಮಿಯಾಂತಾನಂತ ನೆಂಬವ
ರಾಮ ಮಾಯಾಗುಣದಿ ತತ್ತ್ವದ್ಭಾಸದಲಿ ತೋರ್ಪ ॥
ರಾಮ ರಾಜಸ ಲೀಲೆಯಿಂದವೆ
ತಾಮರಸಭವನಾಗಿ ಸ್ರಜಿಸುವ
ಕ್ಷೇಮವನು ಮೂಜಗಕೆ ಹರಿಯೆಂದೆನಿಸಿ ಪಾಲಿಸುವ ॥ ೯ ॥

ಉದ್ಧವನು ಮೂಜಗವನೀತನು
ರುದ್ರನಾಗಿ ತಮೋ ವಿಲಾಸದಿ
ಭದ್ರ ಮತ್ಸ್ಯಾಕೃತಿಯಲೀತನು ಮನು ವಿವಸ್ವತನು ॥
ಅದ್ಭುತಿರೆ ನೀರೊಳಗೆ ವಿಲಯದಿ
ಹೊದ್ದಿಸಿದ ನಾವೆಯಲವಗೆ ನೀ
ಕ್ಷುದ್ರಮಾರ್ಗವನರುಹಿದಾತನದೀತನೀ ರಾಮ ॥ ೧೦ ॥

ಶರಧಿ ಮಥನದಲದ್ರಿಯುಳಿಯಲು
ಧರಿಸಿದನು ಸುತಳದಲಿ ಮಂದರ
ಗಿರಿಯ ಬೆನ್ನಲ್ಲಾಂತು ಕೂರ್ಮಾಕೃತಿಯಲೀ ರಾಮ ॥

ಧರೆವಿಲಯದಲಿ ರಸೆಗೆ ಹೋಗಲು
ಧುಸಿ ಕೋಲಾಕೃತಿಯ ದೈತ್ಯನ
ನೊರಸಿದಾಡೆಯಲೆತ್ತಿಯವನಿಯ ತಂದನೀ ರಾಮ || ೧೧ ||

ಮೂರು ಜಗಕಂಟಕ ಶಿಪುವನಿವ
ನಾರಿನೋೞುಗುರಿನಲಿ ಸೀಳಿದ
ಧೀರಪ್ರಹಲ್ಲಾದಂಗೊಲಿದು ನರಸಿಂಹ ರೂಪದಲಿ ||
ನಾರಿಯದಿತಿಯ ಪುತ್ರ ರಾಜಪ
ಹಾರಿ ಬಲಿಯನು ಬೇಡಿಕೊಂಡವ
ಸೇರಿಸಿದನೀ ರಾಮ ವಾಮನನಾಗಿ ದಿವಿಜರಿಗೆ || ೧೨ ||

ದುಷ್ಟಕ್ಷತ್ರಿಯ ವಂಶವನು ಬರು
ಗುಟ್ಟಿ ಧರಣಿಯ ತಲೆಯ ಭಾರವ
ನೊಟ್ಟವಿಸಿದನು ಪರಶುರಾಮಾಖ್ಯೆಯಲದೀ ರಾಮ ||
ಹುಟ್ಟಿದನು ಮತ್ತಾ ಜಗತ್ಪತಿ
ನೆಟ್ಟನೀ ರಘುಕುಲದಿ ರಾಮನು
ಮುಟ್ಟಿ ಮುರಿಯಲಸಂಖ್ಯ ರಾವಣ ಮುಖ್ಯ ದಾನವರ || ೧೩ ||

ರಾವಣನು ಮಾನವರಲಲ್ಲದೆ
ಸಾವನಲ್ಲದು ಗುಣದಿ ಜನಿಸಿದ
ದೇವ ನಾರಾಯಣನು ದಶರಥ ಹಿಂದೆ ಬೇಡಿದನು ||
ದೇವಿ ಸಹ ಮಗನಾಗಬೇಕೆನೆ
ತಾವರೆಯ ಕಣ್ಣವನು ಸಲಿಸಿ
ದ್ವಾವರಕ್ಕಿಂದಿಲ್ಲಿ ರಾಮಾಖ್ಯೆಯಲ್ಲಿ ಜನಿಸಿದನು || ೧೪ ||

ಆದಿವಿಷ್ಣುವೆ ರಾಮ ಜಗ ಸಂ
ಪಾವನಸ್ಥಿತ್ಯಂತ ಕಾರಣ
ವಾದಿ ಮಾಯೆಯೆ ಸೀತೆ ಹೋಗುವನಿಂದನುಜ ಸಹಿತ ||

ಸೇದುವನು ರಾವಣನ ಜೀವವ
ಹೋವ ದಿನ ನಾರದನು ತಡೆದುದು
ಮೇದಿನೀ ಹೊರೆಯೆಂದು ಹೇಳಿದ ಬಂದು ರಾಘವಗೆ ॥ ೧೫ ॥

ನಾಳೆ ನಡೆವೆನು ವನಕೆನುತ್ತವೆ
ಹೇಳಿ ಕಳುಹಿದ ಮುನಿಯನರಿಯಿರೆ
ಬಾಲಸೂರ್ಯನೆ ನೃಪತಿ ಕೈಕೆಯ ಠೇನ ಮಾಡುವರು ॥
ಬೀಳುಗೊಡು ಚಿಂತೆಯನು ರಾಮನ
ಹೋಲಿಸುವ ದೇವತೆಯದಾವನು
ಪಾಲಿಸುವನೀ ಜಗವ ನಿಜಲೀಲಾ ವಿನೋದವಲಿ ॥ ೧೬ ॥

ರಾಮ ರಾಮಾ ರಾಮ ಯೆನುತೀ
ಭೂಮಿಯಲಿಯನವರತ ಪೇಳಿದ
ಡಾ ಮಹಾತ್ಮನ ಮೃತ್ಯು ಭಯವೆಂದೆಂದು ಮುಟ್ಟುವೆನೆ ॥
ರಾಮದೆತ್ತಣದುಃಖ ಶಂಕೆಯ
ದಾ ಮಹಾತ್ಮಗೆ ಕಲಿ ಮಹಾಘಕೆ
ರಾಮ ನಾಮವೆ ಗತಿಯವಲ್ಲದೆ ಬೇರದೇನೆಂದ ॥ ೧೭ ॥

ಮುಂದೆ ಕಲಿಯಲಿ ಜನಿಸುವವರಿಂ
ಗೊಂದು ಕರ್ಮವು ಸಾಂಗವಾಗದು
ಚಂದುಗವ ಕಾಮಾದಿ ರಿಪು ಬಾಧೆಗಳ ವಿಘ್ನವಲಿ ॥
ವೊಂದೆ ಶ್ರೀ ರಘುರಾಮ ನಾಮಗ
ಳಿಂದ ಸಂಸಾರಾಂಬುಧಿಯನಾ
ನಂದದಿಂ ದಾಂಟುವರು ನಿಶ್ಚಯವೆಂದನಾ ಮುನಿಪ ॥ ೧೮ ॥

ಹೋಮ ದಾನ ತಪೋ ವ್ರತಾರ್ಚನೆ
ಭೂಮಿಸುರ ಪಿತೃಪೂಜೆ ತೀರ್ಥ ಮ
ಹಾ ಮನುಚ್ಚಾರಣೆಯು ಯೋಗಾಷ್ಟಾಂಗ ಸಿದ್ಧಿಗಳು ॥

ಕಾಮಯಿಲ್ಲದೆ ರಾಮಯೆಂದೆಂ
ಬಾ ಮನುಜಗನಿತೆಲ್ಲರಿಂ ಮಿಗಿ
ಲೀ ಮಹಿಮೆ ಭೂಮಿಯಲಿ ಮೂಜಗ ಸಿದ್ಧವಾಗಿಹುದು ॥ ೧೯ ॥

ರಾವಣನ ಸಂಹರಿಸಲೋಸುಗ
ಭೂವರನ ವರಸಿದ್ಧಿ ಸಲಲಿಕೆ
ಭಾವುಕರ ಭಜನೆಯನು ಕೈಕೊಳಲಾದಿ ಪೂರುಷನು ॥
ದೇವ ಮಾನವನಾದನಾದರು
ನಾವು ದುಃಖಿಸಲೇನು ಕಾರಣ
ಪಾವನೆ ಚಿಂತಿಸದಿರೆಂದನು ವಾಮದೇವ ಮುನಿ ॥ ೨೦ ॥

ಕೇಳಿ ಮುನಿವಚನವನು ವಿಪ್ರರು
ಮೇಳಿ ಸರ್ವರು ಹರ್ಷದಿಂ ಸಿರಿ
ಲೋಲನೆಂಬುದನರಿದು ನಿಃಸ್ಸಂದೇಹವೆಂದೆನುತ ॥
ಆಲಿಸುತ್ತನವರತ ರಾಮ ವಿ
ಶಾಲರೂಪನ ತನ್ಮೊಳೆಂದರು
ಕೇಳಿದಿರೆ ಸರ್ವಾರ್ಥ ಸಾರವು ಮುನಿಯ ಮಾತೆನುತ ॥ ೨೧ ॥

ಇದುವೆ ನಿಶ್ಚಯ ಸೀತೆ ರಾಮರ
ಪದವ ಚಿಂತಿಸಬೇಕು ನಿತ್ಯವು
ಮುದದಿ ರಾಮಧ್ಯಾನ ವ್ರತವನು ಜ್ಞಾನ ಪೂರ್ವಕದಿ ॥
ಸವಮಲಾರ್ಥ ರಹಸ್ಯವೆನುತವೆ
ಸುದತಿಯರು ವಿಪ್ರರು ನಿಧಾನಿಸಿ
ಸದನಕಯ್ದಿದರರಿತು ರಾಮ ಪರಾತ್ಮನೆಂಬುದನು ॥ ೨೨ ॥

ಇತ್ತ ಸತಿ ಲಕ್ಷ್ಮಣಸಹಿತ ಪಿತ
ನೊತ್ತಿಗೈತಂದೆಂದ ರಾಮನು
ಮತ್ತೆ ಕೈಕೆಗೆ ತಾಯೆ ಬಂದೆವು ಮೂವರೀಕ್ಷಣವೆ ॥

ಚಿತ್ತ ದೃಢವುಂಟೊನಕೆ ಹೋಹವೆ
ಮತ್ತೆ ಪಿತ ಹೋಗೆಂದನಪ್ಪಣೆ
ಯಿತ್ತು ಕಳುಹುವುದೆಂದನಾ ಶ್ರೀರಾಮ ವಿನಯದಲಿ || ೨೩ ||

ಎನಲು ಹರ್ಷದಲೊಲಿದು ಕೊಟ್ಟಳು
ವನಿತೆ ಲಕ್ಷ್ಮಣ ರಾಮ ಸೀತೆಗೆ
ವನದಲುಳ್ಳಾ ನಾರಸೀರೆಯ ಬೇರೆ ಬೇರಾಗಿ ||
ಕನಕ ವಸನವ ಕಳೆದು ಧರಿಸಿದ
ರನುಪಮ ಶ್ರೀರಾಮ ಲಕ್ಷ್ಮಣ
ರನುಕರಿಸದೇ ಸೀತೆ ಕರದಲಿ ಹಿಡಿದು ಲಜ್ಜಿಸುತ || ೨೪ ||

ಮೊಗವ ನೋಡುತ್ತಿರಲು ಜಾನಕಿ
ತೆಗೆದುಡಿಸಿದನು ರಾಮ ಚೀರವ
ಮಿಗೆ ಮೊದಲ ವಸ್ತ್ರೋಪರಿಯಲವ ಕಂಡು ನಾರಿಯರು ||
ಜಗಬಿರಿಯಲೊರಲುತಿರೆ ಕೇಳುತ
ಬಗೆಮ ಕೈಕೆಗೆ ಗಜರುತೆಂದನು
ಮಿಗೆ ವಸಿಷ್ಠ ದುರಾತ್ಮೆ ಭಾಗ್ಯವಿಹೀನೆ ಕೇಳೆನುತ || ೨೫ ||

ಪಾಪಿ ರಾಮನ ಕೂಡೆ ಗಂಧನು
ಲೇಪ ದಿವ್ಯಾಂಬರ ವಿಭೂಷಣ
ರೂಪವತಿಯಾಗಿದ್ದು ಪಾತಿವ್ರತ್ಯದಲಿ ನಡೆವ ||
ಈ ಪರಿಯಲನವರತ ಬಿಡದೇ
ಹೋಪಳಾವನಕಾಗಿ ರಾಮನ
ಶ್ರೀಪದಕೆ ಹಿತವಾಗುವಳಿಗೇನಿತ್ತೆ ನೀನೆಂದ || ೨೬ ||

ಜನಪನೆಂದ ಸುಮಂತ ತಾಸ್ಥೆ
ವನಕೆ ರಥದಲಿ ಕುಳಿತು ಹೋಗಲಿ
ತನಯರೆನುತವೆ ನೋಡಿ ಸೀತಾ ರಾಮಲಕ್ಷ್ಮಣರ ||

ಮನ ನೆನೆದು ದುಃಖದಲಿ ರಾಮಾ
ಯೆನುತ ಬಿದ್ದನು ಧರೆಗೆ ಕಾಣುತ
ವನಿತೆ ಬೇಗದಿ ರಥವನೇರಿಯದನು ರಘೂತ್ತಂಸ || ೨೭ ||

ಕುಳಿತಳಾ ರಥದಲ್ಲಿ ಜಾನಕಿ
ಬಳಿಕ ತಂದೆಗೆ ನಮಿಸಿ ರಾಘವ
ಬಲಬರುತ್ತೇರಿದನು ರಥವನು ಲಕ್ಷ್ಮಣನು ಸಹಿತ ||
ಚಳಕದಲಿ ಧನುಖಡ್ಗ ಯುಗಳವ
ಬಳಿಕ ಶರತೂಣೀರ ಸಹಿತಾ
ಗಳೆ ಧರಿಸಿ ಕುಳಿತ್ಕೈದಿ ಮೂವರು ವರರಥದ ಮೇಲೆ || ೨೮ ||

ನಿಲ್ಲು ನಿಲ್ಲು ಸುಮಂತಯೆನುತವೆ
ತಳ್ಳಳಿಸಿ ದಶರಥನು ಕರೆಯಲಿ
ಕೆಲ್ಲಿ ನಡೆನಡೆ ಬೇಗವೆಂದನು ರಾಮ ರಥಸಹಿತ ||
ಅಲ್ಲಿ ದೂರದಿ ನಡೆಯೆ ಕಾಣದೆ
ಘಲ್ಲಿಸುವ ದುಃಖದಲಿ ಬಿದ್ದನು
ಫುಲ್ಲದೃಶ ಹಾ ರಾಮ ಯೆನುತವೆ ನೃಪತಿ ಮೂರ್ಛೆಯಲಿ || ೨೯ ||

ಪೌರಜನ ಪರಿವಾರ ವೃದ್ಧರು
ನಾರಿಬಾಲರು ವಿಪ್ರರೆಲ್ಲರು
ದೂರ ಕೂಡ್ಕೈದಿದರು ರಾಮಾ ರಾಮ ನಿಲ್ಲೆವಗೆ ||
ಆರು ಗತಿ ಬಿಟ್ಟಡಪಿ ಗೈದಿದ
ದೂರುತವಗೇನೆನುತ ರಥದನು
ಸಾರಿಯಲಿ ಬರುತೀರ್ಮದಾ ಜನನಿವಹ ವರಲುತ್ತ || ೩೦ ||

ಅರಸು ದಶರಥನತ್ತಲೆಂದನು
ಚರರಿಗೊರಲುತ ರಾಮ ಮಾತೆಯ
ಕರೆದು ಮನೆಗೆನ್ನೊಯ್ದು ಹಾಕಿರಿ ರಾಮ ವಿರಹದಲಿ ||

ಇರವು ಕಿಂಚಿತ್ಕಾಲ ಮಾತ್ರದಿ
ಮರಣ ಬಂದುದು ತನಗೆ ಬದಿಕುವ
ಪರಿಯದೆತ್ತಲು ಬರಿಯ ಹಂಬಲಿಸುತ್ತ ಕಳವಳಿಸಿ ॥ ೨೧ ॥

ಕೌಸಲೆಯ ಮನೆಯಲ್ಲಿ ಮೂರ್ಛಾ
ವೇಶದುಃಖದಿ ಬುದ್ಧಿಗೆಟ್ಟು ಮ
ಹೀಶ ದಶರಥ ಬಿದ್ದನೇನೆಂದರಿಯದಿತರಿವನು ॥
ನಾಶರಹಿತನು ರಥವಲ್ಲೈದಿ ನಿ
ವಾಸವಿಲ್ಲೆಂದೆನುತ ತಿಳಿದಾ
ದೇಶಲುತ್ತಮ ಸಾ ನದೀ ತೀರದಲಿ ಸುಖದಿಂದ ॥ ೨೨ ॥

ಜಲವ ಮಾತ್ರಾಹಾರದಿಂದವೆ
ಲಲನೆ ಜಾನಕಿ ಸಹಿತ ರಾಘವ
ಮಲಗಿದನು ವರ ವೃಕ್ಷಮೂಲದಿ ಬಳಿಕ ಲಕ್ಷ್ಮಣನು ॥
ತಿಳಿದು ತನ್ನಯ ಧರ್ಮವೆಂದೇ
ಸೆಳೆದು ಚಾಪವ ಕೊಂಡು ರಾಮನ
ಬಳಿಯು ಪಾಲಿಸುತಿದ್ದನಿರುಳು ಸುಮಂತ ಸಹವಾಗಿ ॥ ೨೩ ॥

ಆ ಸಮೀಪದಿಯೋಧ್ಯ ಪಟ್ಟಣ
ದೇಶಜನವೈತಂದು ತಮ್ಮೊಳು
ಲೇಸು ರಾಮನು ಬಂದಡೂರಿಂಗಲ್ಲದಡೆ ವನಕೆ ॥
ಈ ಸಮಸ್ತರು ಕೂಡೆ ಹೋಹೆವು
ದೇಶ ನಮಗೇಕೆಂಬುದನು ಸೀ
ತೇಶ ಕೇಳುತ ವಿಸ್ಮಯದಲಿ ಸುಮಂತಗಿಂತೆಂದ ॥ ೨೪ ॥

ಊರಿಗೆಂತೂ ಬಾರೆನಿವದಿರ
ಘೋರದುಃಖವನಾರು ಕಾಂಬರು
ಕಾರಿರುಳೆ ಹೋಗುವೆವು ರಥವನು ಬೇಗ ತಾರೆನಲು ॥

ದಾರುಕನು ಕುದುರೆಗಳು ಸಹ ತೇರ
ಲೇರಿ ಮೂವರು ರಥವ ಕಿರಿದೆಡೆ
ಗೂರ ಮುಂತಾಗಿತ್ತ ತಿರುಗಿಸಿ ತಿರುಗಿದರು ವನಕೆ ॥ ೩೫ ॥

ಬಳಿಕ ವುದಯದಲೆದ್ದು ಜನಪತಿ
ಕಳವಳಿಸಿ ರಾಘವನ ಕಾಣದೆ
ಹಳವಿಸುತ ರಥಗಾಲಿಯೂರತ್ತೈದಿದುದ ನೋಡಿ ॥
ನಿಳೆಯಕೈದಿದನೆನುತ ಬಂದರು
ನಿಳೆಯದಲ್ಲಿಗೆ ಬಾರದಿರೆ ಹೃ
ನ್ನಿಳೆಯದಲ್ಯನವರತ ನೆನೆವರು ರಾಮ ಸೀತೆಯರ ॥ ೩೬ ॥

ಅತ್ತಲಿರುಳು ಸುಮಂತ ಹಾದಿಯ
ಸುತ್ತಿ ತೆಗೆದನು ರಥವ ಶೀಘ್ರದ
ಲುತ್ತರಿಸಿ ಬಹುದೂರ ಹೋಗಲು ಜನಸಮೂಹದಲಿ ॥
ಹತ್ತಿರಿದ್ದುದು ಶೃಂಗವೇರಿ ಮ
ಹೋತ್ತಮದ ಗಂಗಾ ತಟದಿ ರ
ಘೂತ್ತಮನು ಸತಿಯನುಜ ಸಹ ರಥದಿಂದಿಳಿದನಿಳೆಗೆ ॥ ೩೭ ॥

ಕಂಡು ಗಂಗೆಯನಿಳೆಯಲಾಗಳೆ
ದಂಡದಂದದಿ ನಮಿಸಿ ಖಿಂದನ
ಖಂಡ ಪಾವನಮೂರ್ತಿ ವಿಧಿಯಲಿ ಬಳಿಕ ಶಿಂಶುಪದ ॥
ಷಂಢ ವೃಕ್ಷದ ಮೂಲದಲ್ಲಿರೆ
ಕಂಡ ಜನ ಹರಿದಾಗಳಲ್ಲಿಯ
ಮಂಡಲೇಶ ಕಿರಾತ ಗುಹನೆಂಬವಗೆ ಹೇಳಿವರು ॥ ೩೮ ॥

ಕೇಳಿ ರಾಮನ ಸಖ ಗುಹನು ಹೀ
ಹಾಳಿಯಲಿ ಮನ ನೆನೆದು ಹರ್ಷದಿ
ನೀಲಮೇಘನ ಬಳಿಗಾಗಳೆ ಪುಷ್ಪ ಮಧು ಫಲವ ॥



ರಾಮ ಲಕ್ಷ್ಮಣ ಸೀತೆಯರಿಗೆ
ಗುಹನ ಸ್ವಾಗತ



ವಟವೃಕ್ಷದ ಅಡಿಯಲ್ಲಿ
ಸೀತಾರಾಮರ ನಿದ್ರೆ

ಮೇಳವಿಸಿ ತಂದಿರಲಿರಿಸಿ ಕೃ
ಪಾಳುವೇ ಸಲಹೆನುತ ದಂಡದ
ವೋಲು ಬಿದ್ದನು ಧರೆಯ ಲಾ ಶ್ರೀರಾಮ ಸಲಹೆನುತ || ೩೯ ||

ಎತ್ತಿ ಬೇಗದಿ ಗುಹನ ರಾಮನು
ಮಸ್ತಕವ ಮೈವಡವಿ ಸಖಿಯೇ
ಸ್ವಸ್ಥ ಕುಶಲವೆ ಯೆನಲು ಕೈಗಳ ಮುಗಿದು ಭಕುತಿಯಲಿ ||
ಇತ್ತಲಿಮ್ಮ ನಿಷಾದ ಜಾತಿ ಪ
ವಿತ್ರವಾಯಿತು ಧನ್ಯನಾದೆನು
ಹಸ್ತ ಸಂಸ್ಪರ್ಶದಲಿ ಪರಮಾನಂದವಾಯ್ತೆಂದ || ೪೦ ||

ಸತ್ಯ ಸಂಪನ್ನರಲಿ ಪೊಲಿವಂ
ತತ್ಯಧಮ ನೈಷಾದರಲಿ ಕೃಪೆ
ಯತ್ತ ಯೆಲ್ಲಿ ರಾಮ ಧನ್ಯನು ತಾನು ರಾಜ್ಯವಿದು ||
ಮತ್ತೆ ತನಗೇಕಿದಕೊಡೆಯನಾ
ಗುತ್ತಮನೆ ರಘುನಾಥ ಯೆಂದಾ
ಸತ್ಯನಿಧಿಗೆವಗಿದಡೆ ನಗುತಿಂತೆಂದನಾ ರಾಮ || ೪೧ ||

ಎಲೆ ಸಖಿಯೆ ಕೇಳೆನ್ನ ವಚನವ
ನಿಳೆಯ ಗ್ರಾಮವ ನೋಡಬಾರದು
ಕಳೆಯೆ ಹದಿನಾಲ್ಕಬ್ದ ಪರಿಯಂತನ್ಯರಿತ್ತುದನು ||
ಫಲವ ಮೂಲಾಶನವನೇನೂ
ಮೊಲಲೆ ಬಾರದು ನಿನ್ನ ರಾಜ್ಯವೆ
ತಿಳಿಯಲೆನ್ನದು ಸಖಿಯುಲಾ ನೀ ಪಾಲಿಸಿದನೆಂದ || ೪೨

ಜಟೆಗಳಾಗವು ಸೂಕ್ಷ್ಮ ಕೇಶವು
ವಟದ ಹಾಲನು ತರಿಸಿಕೊಡು ಯೆನೆ
ಯಟವಿಯಿಂ ತರಿಸಿದನು ಗುಹನದ ರಾಮಲಕ್ಷ್ಮಣರು ||

ಉಟಜರಂದದಿಯದನುಪಾಯದಿ
ಜಟೆಯ ಕಟ್ಟಿದರಿಬ್ಬರೂ ಧೂ
ರ್ಜಟಿಗಳೋ ಯೆನಲೆಸೆದರಾಗ ಜಟಾ ಮಕುಟದಿಂದ || ೪೩ ||

ಜಲವೆ ಮಾತ್ರಾಹಾರದಿಂ ನಿಜ
ಲಲನೆ ಸಹಿತಿರೆ ಲಕ್ಷ್ಮಣಾಂಕನು
ತಳಿರು ದರ್ಭೆಗಳಿಂದ ಹಾಸಿದಡಲ್ಲಿ ರಾಘವನು ||
ಮಲಗಿದನು ಪುರಪ್ರಾಸದಗ್ಗದ
ಲೊಲಿದು ಪವಡಿಸುವಂತೆ ಸೀತಾ
ಯಿಳಲಿ ಪರಿಯಂಕದಲಿಹ ಸ್ಥಳದಂತೆ ಸಿರಿರಾಮ || ೪೪ ||

ಆಗ ಲಕ್ಷ್ಮಣ ಸುತ್ತ ರಾಮನ
ಯೋಗರಕ್ಷೆಗೆ ಶರವ ತೊಡಿಸಿ ಮ
ಹಾ ಗರುವ ಚಾಪವನು ಬತ್ತಳಿಕೆಗಳ ಸಹಧರಿಸಿ ||
ಜಾಗರದಲೇ ನಿಂತು ಭಕುತಿಯ
ಲಾ ಗುಹನು ಸಹಿತಿದ್ದನಾ ಶ್ರೀ
ಯೋಗ ಮೂರುತಿ ರಾಮಚಂದ್ರನ ಪದವ ಭಾವಿಸುತ || ೪೫ ||

ಸಂಧಿ ವೇದತ್ರಯದ ಗಣನೆಯ
ಲೊಂದಧಿಕ ಪದನಿಕರವೆಷ್ಟೆನೆ
ರಂದದಲಿ ಬಾಣವನು ತುಂಬಿದ್ದಂತೆ ರಾಘವನು ||
ಬಂದು ಗಂಗಾ ತಟದಿ ಮಲಗಿದ
ಸಂದ ವೃತ್ತಾಂತವನು ಕೇಳೆ ಮು
ಕುಂದ ಗುರುನಿತ್ಯಾತ್ಮ ಲಕ್ಷ್ಮಿನೃಸಿಂಹ ಪಾಲಿಸುವ || ೪೬ ||

ಅಂತು ಸಂಧಿ ೧೩ಕ್ಕೆ ಪದ ೫೬೨ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ

— o —

॥ ಶ್ರೀ ರಾಮಚಂದ್ರಾಯ ನಮಃ ॥



# ಹದಿನಾಲ್ಕನೆಯ ಸಂಧಿ

## ಗುಹನನ್ನು ಮನ್ನಿಸಿ ಚಿತ್ರಕೂಟ ಪ್ರವೇಶಿಸಿದ್ದು (ಸೇರಿದ್ದು)

ಸೂಚನೆ ॥ ಮಿತ್ರ ಗುಹನನು ತಿಳುಹಿದನು ಸೌ
ಮಿತ್ರಿಯುದಯದಿ ಕಳಿದು ಗಂಗೆಯ
ಚಿತ್ರಕೂಟವ ರಾಮನೈದೀ ಮುನಿವರರ ಕಂಡು ॥

ಪದ ॥ ತಾಯ ನೇಮವಕೊಂಡು ಶ್ರೀರಘು
ರಾಯ ವಿಪಿನಕೆ ತೆರಳೆ ನಿಜಜನ
ಬಾಯಬಿಡುತ್ತೈತರಲು ರಥಗಳನೇರಿ ಪಹಿಲದಲಿ ॥
ಆಯುವಂತನು ಹಿಂದೆ ತೆರಳಿಯು
ಪಾಯದಲಿ ಗಮಿಸಿರಲು ಗುಹನಲಿ
ಪ್ರೀಯದಲಿ ಮನ್ನಿಸಿದ ಶ್ರೀರಘುರಾಯ ಸಲಹೆಮ್ಮ ॥೧॥

ಆಗಚೆ ಕೇಳಾ ರಾಮ ನಿದ್ರೆಯು
ಬಗೆಯಲಿರೆ ಗುಹ ಕಂಡು ಕಂಗಳ
ಉಗುವ ಜಲಧಾರೆಯಲಿ ನುಡಿದನು ನೋಡಿ ಲಕ್ಷ್ಮಣಗೆ ॥
ಜಗದೊಡೆಯ ನಿನ್ನಣ್ಣ ಮಲಗಿದ
ಬಗೆಯ ನೋಡೈ ದರ್ಭಪತ್ರಾ
ದಿಗಳ ಹಾಸಿಕೆಯಿಂದ ಸೀತಾದೇವಿ ಸಹವಾಗಿ ॥ ೨ ॥

ಹೇಮ ಖಟ್ವಾಂಗದಲಿ ಕೌಶೋ
ದ್ಧಾಮದಿಂದನ ಮೇಲೆ ಮಲಗುವ
ರಾಮಸೀತೆಯರಿತ್ತಲೀ ಕಲುನೆಲದಿ ತೊಪ್ಪಲದಿ ||
ನೇಮದಲಿ ಮಲಗಿಹರಿನಿತನಾ
ಘ್ರಾಸ ಮಂಥರೆ ಕಲಿಸಿ ಕೈಕೆಯ
ನೀ ಮಹಾದುಃಖವನಿ ತಂದರು ಯೆಂದನಾ ಗುಹನು || ೩ ||

ಕೈಕೆ ಪಾತಕಿ ದುಃಖಕಾರಣೆ
ಯೇಕೆ ಸಂಶಯವೆನಲು ಕೇಳಿ ವಿ
ವೇಕಿ ಸುತ ಸೌಮಿತ್ರನೆಂದನು ಗುಹನೊಡನೆ ಮುಗುಳೆ ||
ಸಾಕು ಮದ್ವಚನವನು ಕೇಳಾ
ಸೋಕುವೀ ಸುಖದುಃಖನಿಕರ
ಕ್ಯಾಕೆವಾಳನ ದಾರು ನೋಡೆ ವಿಚಾರದಿಂದೆಂದ || ೪ ||

ತನ್ನ ಪೂರ್ವಾರ್ಜಿತದ ಪಾಪ ಮ
ಹೋನ್ನತಿಯ ಪುಣ್ಯಂಗಳೆರಡೂ
ಬೆನ್ನಲೇ ಜೀವರಿಗೆ ಬಹವು ದುಃಖ ಸುಖವಾಗಿ ||
ಅನ್ಯರಿಂದೀ ದುಃಖವಾಯ್ತ್ತಿ
ಘನ್ನ ಸುಖವಾಯ್ತೆಂಬ ಮಜಡರು
ಭಿನ್ನ ಮಾಯಾ ಪ್ರಕೃತಿ ಬುದ್ಧಿಗಳವರು ಕೇಳೆಂದ || ೫ ||

ಹಮ್ಮಿನಿಂ ಮಾಡಿದ್ದ ಕರ್ಮವೆ
ತಮ್ಮ ತಮ್ಮನು ಕಚ್ಚಿ ಉಣಿಸುವು
ದೆಮ್ಮ ಬಾಂಧವ ಸುಖಿಸುಹೃತ್ಪ್ರಿಯ ದ್ವೇಷಿ ಮಧ್ಯಸ್ಥ ||
ಅಮ್ಮನಪ್ಪನೆನಿಪ್ಪರಿಲ್ಲದು
ಕರ್ಮದಿಂ ಕೂಡಿಹುದು ಜೀವನ
ಕರ್ಮವಶದಲಿ ದುಃಖಿಸುಖಿಯಾಗಿಹನು ಕೇಳೆಂದ || ೬ ||

ಆವ ಕಾಲದಲಾವುದಾಯಿತು
ಭಾವ ಚಲಿಸದೆಯುಣ್ಣಬೇಕವ
ನಾವ ಭೋಗವು ಕರೆಯೆ ಜಾರದು ಬೇಡೆನಲು ಬಿಡದು ||
ದೇವತಾ ಪ್ರಕೃತಿಗಳನುಳ್ಳವ
ನಾವ ಭೋಗವೆ ಬರಲಿ ಹೋಗಲಿ
ನಾವೆಸುತ್ತವರಲ್ಯಹಂಕರಿಸದೆ ಸುಖದಲಿಹನು || ೭ ||

ಆವ ಕಾಲದಲಾವ ದೇಶದ
ತಾವನಾವನ ವಿಡಿದು ಸುಖದುಃ
ಖಾವಳಿಗಳೊಡಿದರು ಪೂರ್ವದಿ ತಾನು ಮಾಡಿರ್ದ ||
ಪಾವನಾಧಮ ಕರ್ಮವಲ್ಲದೆ
ಯಾವನೂ ತಾನಲ್ಲ ಕಾರಣ
ದೇವತೆಗಳಿಗು ವಿಧಿಯ ವಿಹಿತವ ಮೀರಲರಿದೆಂದ || ೮ ||

ನರರು ಸುಖದುಃಖಗಳ ಬಂಧದಿ
ಹೊರಳುತಿಹರೆಂದೆಂದು ದೇಹವು
ಚರಿಸುವಾಗಳೆ ಪುಣ್ಯಪಾಪವ ಮಾಡುತಲೆಯಿಹುದು ||
ಶರೀರಸುಖದುಃಖದ್ವಯದಲೇ
ಹೊರೆದ ಪಿಂಡವು ದುಃಖತೀರ್ವಡೆ
ಓರಿದು ಸುಖಿಸುತ್ತಿರ್ದ ಪುನರಪಿ ದುಃಖ ಕೇಳೆಂದ || ೯ ||

ದುಃಕ್ಕ ಸುಖ ದಿವರಾತ್ರಿಯಂದದ
ಲೆಕ್ಕ ದುಃಖವು ತೀರಿತೆಂಬಾ
ಗಕ್ಕಡದ ಸುಖಿಯಾವನೆಂಬನು ಸುಖವು ಕೆಡುವಾಗ ||
ದುಕ್ಕಿಯಾದೆನೊ ಯೆಂಬನದುಗುಣ
ದುಕ್ಕಸುಖವೂ ದ್ವಂದ್ವ ಜಲವಿರ
ಲೆಕ್ಕ ಪಂಕವ ಪಂಕವುದಕವ ಬಿಟ್ಟದಾಗಿರನು || ೧೦ ||

ಮೀರಬಾರದು ದುಃಖಸುಖವನು
ಗಾರುತನು ಸುಖದುಃಖ ರೂಪವು
ಮೀರ್ಪವರೆ ಸುಖದುಃಖವೆರಡನು ದೇಹ ಭಾವವನು ||
ಮೀರಿ ಚಿನ್ಮಯ ನಿತ್ಯನಿರುಪಮ
ನಾರುಭಾವವಿಕಾರ ಶೂನ್ಯಾ
ಕಾರ ವಿರಹಿತನೇಕನದ್ವಯನೆಂದರಿಯಬೇಕು || ೧೧ ||

ಸಚ್ಚರಿತದಲಿ ಸಾಧುಜನ ಸ
ಚ್ಚರ್ಚೆಯಲಿ ಶ್ರೀಗುರುಮುಕುಂದ ಪ
ದರ್ಚನೆಯಲಿ ನಿರಂತರವು ವೈರಾಗ್ಯ ನಿಷ್ಠೆಯಲಿ ||
ಮೆಚ್ಚದೇನೂ ವಿಷಯದಲಿ ಮನ
ದಿಚ್ಛೆಯೆಲ್ಲವನಳಿದು ತೋರದ
ಸಚ್ಚಿದಾನಂದಾತ್ಮ ತಾವಾಗಿಹುದು ಬಲ್ಲವರು || ೧೨ ||

ಧೀರನಾಗಿ ವಿರಕ್ತನಾಗಿ ವಿ
ಚಾರಿಯಾಗಿ ನಿರಂತವೇನುವ
ಹಾರದಿಷ್ಟಾನಿಷ್ಟ ಸುಖದುಃಖಾದಿ ದ್ವಂದ್ವದಲಿ ||
ಮೀರಿಹ ರುಷಾಮರ್ಷ ಮೋಹವ
ದಾರಿಯಲಿ ಪಾಷಾಣ ಕಂಡಾ
ಸಾರಿ ಕನಸಿನವೋಲು ಜಗವನು ನೋಡದಿರಬೇಕು || ೧೩ ||

ಹಿಂದಣಾರ್ಜಿತ ಪ್ರಾರಬ್ಧವಲಿ
ಬಂದುದಕ್ಕೊಡಬಟ್ಟು ಮಾಡದೆ
ಮುಂದೆ ಸುಖದುಃಖಾದಿ ಸಾಧನ ಕಾರ್ಯಕರ್ಮವನು ||
ಯೆಂದ ತತ್ತದ್ವಿಹಿತ ಲೌಕಿಕ
ದಂದವೇನೂ ಬಿಡದೆ ಹಿರಿಯರ
ಚಂದದಲ್ಲಿರಬೇಹುದೆಂದನು ಗುಹಗೆ ಸೌಮಿತ್ರ || ೧೪ ||

ಇಂತೆನುತ್ತಿರೆ ಗುಹನ ಹೃದಯದ
ಚಿಂತೆ ಕಲ್ಮಷವೆಲ್ಲಳಿಯಿತೆಂ
ಬಂತೆ ನಿರ್ಮಲವಾಯಿತಾಗಳೆ ಸುತ್ತ ನಭವೆಲ್ಲ ||
ಶಾಂತ ಲಕ್ಷ್ಮಣನೆಂದ ಬೋಧೆ ದಿ
ಗಂತದಲ್ಲೀಪರಿ ಹರವುದೆನೆ
ಕಂತು ಕಿರಣವ ಬೀರೆ ರಾಘವನುಪ್ಪವಡಿಸಿದನು || ೧೫ ||

ಎದ್ದು ಸಲಿಲವ ಮುಟ್ಟಿ ಸಂಧ್ಯೆಯ
ತಿದ್ದಿ ರಾಘವನೆಂದ ತಾರ್ಕ್ಯ
ಭದ್ರ ನಾವೆಯನೆಲ್ಲಿ ಸಖ ಯೆನೆ ಗುಹನದನು ಕೇಳಿ ||
ಶುದ್ಧ ಲಕ್ಷ್ಮಣ ಸುದೃಢ ನಾವೆಯ
ಹೊದ್ದಿ ತಾ ತಂದಯ್ಯ ದೇವರು
ಗದ್ದುಗೆಯ ಮಾಡುವುದು ದೋಣಿಯಲನುಜ ಸತಿಸಹಿತ || ೧೬ ||

ಜಾತಿಗಳು ಸಹ ನಾನೆ ದೋಣಿಯ
ನಾ ತಡಿಗೆ ದಾಂಟಿಸುವೆನೆನೆ ರಘು
ಜಾತನಾಗಲಿ ಯೆನುತ ಮೊದಲೇರಿಸಿ ನಿಜಾಂಗನೆಯ ||
ಪ್ರೀತಿಯಲಿ ಹಸ್ತಾವಲಂಬನೆ
ವಾತು ಗುಹನನು ರಾಮನೇರಲು
ನೀತಿವಿದ ಸೌಮಿತ್ರನಾಯುಧ ಸಹಿತ ರೋಹಿಸಿದ || ೧೭ ||

ಹಿಂಚಿ ಗುಹಜಾತಿಗಳು ಸಹಿತ ವಿ
ಸಂಚಿಸದವೋಲ್ಬೈದಿ ತೆಗೆಯಲು
ಪಂಚಮುಹಪಾಪಿಗಳಘಂಗಳ ಮಲದ ಕರ್ದಮವ ||
ಕಿಂಚಿತುಳುಹದೆ ತೊಳೆವ ವಿಷ್ಣು ವಿ
ರಿಂಚಿ ರುದ್ರರ ಪಾದಕರ ಶಿರ
ದಂಚಲಿಸದಾ ಗಂಗೆಗೆರಗಿಂತೆಂದಳಾ ಸೀತೆ || ೧೮ ||

ದೇವಿ ಗಂಗೆ ನಮೋಸ್ತು ಬೇಡುವೆ
ನಾವು ಲಕ್ಷ್ಮಣ ರಾಮಸಹಿತ ವ
ನಾವಳಿಯವುತ್ತರಿಸಿ ಬಂದಾಸವ ಹಿತಿತದಿಂದ ||
ಆ ವಿಧದಲುಪಹಾರ ಬಲಿಗಳ
ನೀವೆ ಸುಖದಿಂ ಬಂದಡೆಸುತಿರೆ
ನಾವೆ ಮೆಲ್ಲನೆ ದಿಡಕೆ ಸೇರಿದುದಾಚೆಗಿನ್ನವರ || ೧೯ ||

ದಿಡದಲಿಳಿದಿಂತೆಂದನಾ ಗುಹ
ನೊಡನೆ ವನಕಾ ಬಹೆನನುಜ್ಞೆಯ
ಕೊಡು ರಘೂತ್ತಮನಲ್ಲದಿದ್ದರೆ ಸಾವೆನೀಗೆನಲು ||
ಕಡುಗರುಣೆಯದ ಕೇಳಿ ನುಡಿದನು
ತಡವೆ ಹದಿನಾಲ್ಕಬ್ದ ದಂಡಕ
ವಡವಿಯಲಿ ಸಂಚರಿಸಿ ಬೇಗದಿ ಮರಳಿ ಬಹೆನೆಂದ || ೨೦ ||

ನೆಟ್ಟನೆಂದೂ ರಾಮಭಾಷಿತ
ಕೊಟ್ಟವುಂಟೇ ಯೆಂದವನ ನೆರೆ
ತೊಟ್ಟುಕೊಂಡಾಲಿಸುತ ಕಳುಹಲು ವರಲುತವೆ ಮನದಿ ||
ಮುಟ್ಟಿ ನೆನೆವುತ ನಡೆದನತ್ತ ವಿ
ಶಿಷ್ಟ ಮೃಗವನು ಕೊಂದು ಭೋಜನ
ತುಷ್ಟರಾದರು ರಾಮ ಲಕ್ಷ್ಮಣ ಸೀತೆ ಸಹವಾಗಿ || ೨೧ ||

ಅಂದು ರಾತ್ರಿಯ ವೃಕ್ಷ ಮೂಲದಿ
ಹಿಂದುಗಳೆದಲ್ಲಿಂದುದಯದ
ಲ್ಲಿಂದುಮುಖಿ ಲಕ್ಷ್ಮಣ ಸಹಿತ ಶ್ರೀರಾಮನಾದರದಿ ||
ಮುಂದೆ ಭಾರದ್ವಾಜನಾಶ್ರಮ
ಕಂದು ಬಿಜಯಂಗೈದು ಹೊರಗಿರು
ತೆಂದನೊಬ್ಬ ಬ್ರಹ್ಮಚಾರಿಯ ಕಂಡನಾ ರಾಮ || ೨೨ ||



ಯಮುನಾನದಿಯನ್ನು ದಾಟಿದ್ದು



ಭರದ್ವಾಜಾಶ್ರಮದಲ್ಲಿ ವಾಸ

ಬಾ ವಟುವೆ ಹೋಗೆನ್ನ ಮುನಿಪಗೆ
ಭೂವರನ ದಶರಥನ ಮಗ ಬಂ
ದೀ ವನದಿ ಹೊರಗಿಹನು ಜಾನಕಿ ತಮ್ಮ ಸಹವಾಗಿ ||
ಮೂವರೀ ಯೆಂದೆನ್ನು ನೀ ರಾ
ಜೀವನೇತ್ರನ ನುಡಿಗೆ ಹರಿದಂ
ದಾ ವಟುಕ ಮುಗಿದೆರಗಿ ಬಿನ್ನಹ ಮಾಡಿದನು ಹದನ || ೨೩ ||

ಸ್ವಾಮಿ ಬಿನ್ನಹ ಹೊರಗೆ ಬಂದಿಹ
ರಾಮನೆಂಬನ ದೇವ ಸನ್ನಿಭ
ಸೋಮಕೋಟಿಪ್ರಭನು ವಲ್ಕಲ ವಸನ ಜಟೆ ಮಕುಟ ||
ಶ್ಯಾಮವರ್ಣ ವಿಶಾಲನೇತ್ರನು
ಭಾಮೆ ಲಕ್ಷ್ಮಣನೊಡನೆ ನಿಂತಿಹ
ನೀ ಮುನಿಗೆ ಹೇಳೆಂದು ಕಳುಹಿದನೆಂದನಾ ವಟುಕ || ೨೪ ||

ಅದನು ಕೇಳುತ ಹರ್ಷದಿಂ ಬೇ
ಗದಲಿ ಭಾರದ್ವಾಜ ಮುನಿಪತಿ
ಯೊದವಿ ಪಾದ್ಯಾರ್ಘ್ಯಾದಿಕವನೆಲ್ಲವನು ನೆರೆ ಪಿಡಿದು ||
ಇದಿರುಗೊಂಡೈತಂದು ರಾಮನ
ಪದಸರೋಜದಿ ನಿಂತೆಥೋಕ್ತದಿ
ಹೃದಯ ಶುದ್ಧಿಯೊಲೊಲಿದು ಪೂಜಿಸಿದನು ಸಹಾನುಜನ || ೨೫ ||

ಸಾವಧಾನದಿ ಬಂದು ರಾಘವ
ಪಾವನವ ಮಾಡೆನ್ನ ನಡೆ ರಾ
ಜೀವ ಲೋಚನ ಪರ್ಣಶಾಲೆಯ ಪಾದರಜವಿತ್ತು ||
ದೇವಿ ಸಹಿತೆಂದೆನುತ ಕರದೊ
ದಾ ವಿಭುಗಳನು ಮತ್ತೆ ಭಕುತಿಯ
ಭಾವದಿಂದಾತಿಥ್ಯ ಸತ್ಕಾರದಲಿ ಪೂಜಿಸಿದ || ೨೬ ||

ಸಂದ ಜನ್ಮಾಂತರದ ತಪಸಿಂ
ಗಿಂದು ಕಡೆಯಾಯಿತು ನಿಮ್ಮಡಿ
ಯೊಂದು ನಿಮಿಷದ ಸಂಗದಿಂದೆನಗೆಲೆ ರಘೂತ್ತಮನೆ ||
ಬಂದ ಕಾರ್ಯವ ನಡೆದವನು ನೀ
ಮುಂದೆ ವರ್ತಿಸುವವನು ನಿಜಪದ
ದ್ವಂದ್ವ ಸೇವಾ ಜ್ಞಾನಮಾತ್ರದಿ ಬಲ್ಲೆ ನಾನೆಂದ || ೨೭ ||

ನೀನು ಮಾನುಷನಾಗಿ ಸಾಕ್ಷಾತ್
ಜ್ಞಾನ ಮೂರುತಿ ವಿಷ್ಣು ಸಚ್ಚಿ
ದ್ಭಾನು ಕೋಟಿ ಪ್ರಭನನಂತ ನಿರೀಹ ನಿರ್ದ್ವಂದ್ವ ||
ನಾನ ವಿಕೃತಿ ವಿಹೀನ ಮಾಯಾ
ಮಾನವಾಕೃತಿವಿಡಿದೆ ಬೇಡಲು
ದಾನವರ ಬಾಧೆಯಲಿ ಕಮಲಜ ಸುರರು ಸಹವಾಗಿ || ೨೮ ||

ದಶರಥಗೆ ಮಗನಾದೆ ಕೌಸಲೆ
ಗೊಸದು ವಿಶ್ವಾಮಿತ್ರನೊಡನೈ
ದಸುರೆಯನು ಕಾಣಿಸಿದೆ ಕಾಲನ ಮುನಿಯ ಯಾಗವನು ||
ಘಸಣಿಗೊಳಿಸುವ ದನುಜರನು ಶಿ
ಕ್ಷಿಸಿದೆಹಲ್ಯಾ ಶಿಲೆಯ ಶಾಪವ
ಸಸಿನೆಮಾಡಿದೆ ಮುರಿದೆ ಜನಕನ ನಿಳೆಯ ಹರಧನುವ || ೨೯ ||

ಸೀತೆಯನು ವರಿಸಿದೆ ನೃಪಾನ್ವಯ
ಘಾತಿ ಭಾರ್ಗವ ಮುನಿಯು ವೀರ್ಯೋ
ಪೈತ ಧನುವನು ಕೊಂಡಯೋಧ್ಯೆಯಲಿರಲು ನಾರದನ ||
ಮಾತ ಕೇಳಿದೆ ಸತ್ಯವಚನ
ಕ್ಯೋತೆ ತಂದೆಯ ನುಡಿಯ ಪಾಲಿಸ
ಲಾತೆ ಜಟೆ ವಲ್ಕಲವ ಬಂದಿರಿಯನುಜ ಸತಿಸಹಿತ || ೩೦ ||

ಇನ್ನು ಮುನಿಗಳ ಪರ್ಣಶಾಲೆಗ
ಳನ್ನು ಪಾವನ ಮಾಡಿ ವನದಲಿ
ಹನ್ನೆರಡರಿಂದೆರಡು ವರ್ಷವನಧಿಕವೆನಲಿದ್ದು ||
ದುರ್ವಿನೀತ ವಿರಾಧ ಶೂರ್ಪೆಯ
ಕರ್ಣನಾಸಿಕ ಖರನ ದೂಷಣ
ಹೊನ್ನ ಮೃಗ ಮಾರೀಚ ಮುಖ್ಯರ ಕೊಲುವೆ ನೀನೆಂದ || ೩೧ ||

ಮಾಯ ಸೀತೆಯುಲೊಯ್ಯಲುರಿಸಿ ಜ
ಟಾಯು ಮೋಕ್ಷವನಿತ್ತು ಶಬರಿಯ
ಕಾಯವಳಿವನು ಕಂಡು ವಾಲಿಯ ಕೊಂದು ಕಪಿಗಳನು ||
ನಾಯಕರ ನೆರೆ ಮಾಡಿ ಶರಧಿಗೆ
ಲಾಯ ಕಟ್ಟೆಯ ಕಟ್ಟಿ ದನುಜ ನಿ
ಕಾಯ ರಾವಣ ಕುಂಭಕರ್ಣಾದಿಗಳ ಸದೆಬಡಿವೆ || ೩೨ ||

ಹೆಟ್ಟುಗೆಯುನೊಡಗೊಂಡು ಪಟ್ಟವ
ಕಟ್ಟಿ ವಿಭಿಷಣಗಚಲ ಸೌಖ್ಯವ
ಕೊಟ್ಟಯೋಧ್ಯೆಗೆ ಬಂದು ಸಿಂಹಾಸನದಿ ರಾಜ್ಯವನು ||
ಮುಟ್ಟಿ ಪಾಲಿಸಿ ಕಲಿಯುಲುದಿಸುವ
ದುಷ್ಟರಘವನು ನಾಮಮಾತ್ರದಿ
ಹಿಟ್ಟುಗುಟ್ಟುವ ದೈವವಲ್ಲೈ ರಾಮ ನೀನೆಂದ || ೩೩ ||

ನಿನ್ನ ಪದಯುಗ ಸೇವೆಯಿಂದು
ತ್ಪನ್ನ ವಿಜ್ಞಾನದಲಿ ಬಲ್ಲೆನು
ಯಿನ್ನು ಹೇಳುವದೇನು ಪುರುಷ ಪ್ರಕೃತಿ ಸಂಭವದಿ ||
ಮುನ್ನಲುಳ್ಳ ಪರಾತ್ಮನೀವಿಂ
ದೆನ್ನ ಪಾವನ ಮಾಡಬಂದೈ
ಧನ್ಯನಾದೆನು ರಾಮಯೆಂದನು ಮುನಿ ಭರದ್ವಾಜ || ೩೪ ||

ಎನಲು ಲಕ್ಷ್ಮಣ ಸೀತೆ ಸಹಿತವೆ
ವಿನಯದಿಂ ಪೊಡವಂಟು ನುಡಿದನು
ಮುನಿಪವಾತ್ಮಜ್ಞಾನ ಸಾಕ್ಷಾದ್ಬ್ರಹ್ಮ ವಿಶ್ರುತಗಳು ||
ಜನಪರಾತ್ಮಜರಾವು ಹೊಗಳಲೆ
ವಿನಯವಂತರ ಸಹಜ ಗುಣವೆಂ
ದೆನುತವಿಂತನ್ಯೋನ್ಯದಿಂದಾ ದಿನವು ಕಡೆಯಾಯ್ತು || ೩೫ ||

ಜನಪ ರಾಮನನಿಲ್ಲಿ ತಡೆಯದ
ಡೆನಗೆ ಮುನಿ ಕೋಪಿಸುವನೆನುತವೆ
ವನಧಿಗಿಳಿದನು ಭಾನು ರಾಘವ ರಾತ್ರಿಯಲ್ಲಿರಲು ||
ಮುನಿಪನೊಬ್ಬನ ಮನೆಯುಲಿದ್ದಡೆ
ವನಿಗಳೆಲ್ಲರು ಕಾಣಬೇಡವೆ
ಯೆನುತ ರಾಮನ ಮತ್ತೆ ಕರೆಸಲು ಮಾಡಲೈತಂದ || ೩೬ ||

ಅರಸು ಕೃತ್ಯವ ರಾಮ ಬಿಟ್ಟರೆ
ಚರಿಸಬೇಡವೆ ನಾನೆನುತ ಖರ
ಕಿರಣ ಬಲವನು ನೂರೆ ವೈರಿತಮಂಗಳನು ಮುರಿದು ||
ಅರಳ ಮಧುವಿನ ಕರಕೆ ತುಂಬಿಯ
ಧರವನಟ್ಟುತ ಜಕ್ಕವಕ್ಕಿಯ
ಸೆರೆಯ ಬಿಡಿಸುತ್ತಿಂದ್ರದಿಶ ಚಾವಡಿಗೆ ರವಿ ಬಂದ || ೩೭ ||

ಬಳಿಕ ರಾಘವನೆದ್ದು ನಿತ್ಯವ
ಸಲಿಸಿ ಕಳುಹಿಸಿಕೊಂಡು ಮುನಿಪನ
ಬಳಿಯ ಮಕ್ಕಳು ತೆಪ್ಪದಲಿ ಯಮುನೆಯನು ದಾಂಟಿಸಲು ||
ತಿಳಿದು ಮಾರ್ಗವ ರಾಮ ಲಕ್ಷ್ಮಣ
ಲಲನೆ ಸಹಿತವೆ ಚಿತ್ರಕೂಟವ
ಲಲಘು ಮುನಿ ವಾಲ್ಮೀಕಿಯಾಶ್ರಮದಲ್ಲಿಗೈತಂದ || ೩೮ ||

ಚಿತ್ರಕೂಟಾದ್ರಿಯಲಿ ಮುನಿಗಳ
ಮೊತ್ತದಲಿ ವಾಲ್ಮೀಕಿಯಾಶ್ರಮ
ದೊತ್ತಿನಲಿ ಹಿಂತಾಳ ತಾಳ ತಮಾಲ ವಟ ಖದಿರ ||
ವೃತ್ತ ಚಂಪಕ ಪನಸ ಚೂತಾ
ಶ್ವತ್ಥ ಜಂಬೂ ನಿಂಬ ಬಿಲ್ವ ಕ
ಪಿತ್ಥ ರಂಭಾ ಪೂಗ ಮಹಾವನವ ಕಂಡ || ೩೯ ||

ಹಲವು ಮೃಗ ಜಾತಿಗಳ ಪಕ್ಷಿಯ
ಹಲವು ಫಲ ಕುಸಮಾದಿ ಶೋಭೆಯ
ಹಲವು ಕಾಲವಲೊಂದೆ ಪು ಪ್ರತಿಫಲಿಸಿ ರಂಜಿಸುವ ||
ಹಲವು ಶಿಷ್ಯರ ನಡುವೆ ಉಳಿತಾ
ಸ್ಖಲಿತ ರಾಮಧ್ಯಾನ ಸುಖದಲಿ
ಚಲಿಸದಾ ವಾಲ್ಮೀಕಿ ಮುನಿಯನು ಕಂಡನಾ ರಾಮ || ೪೦ ||

ಸಂಧಿ ಮನು ಸಂಖ್ಯೆಯುಲಿ ಪದಗಳ
ವೃಂದ ಋಷಿಗಳು ದಿವಿಜರೊಡನಿರ
ಲಿಂದದನು ಕೇಳುವರ ಪಾಶಕ್ಲೇಶ ಬಂಧನದ ||
ದಂದುಗವ ಪರಿಹರಿಸಿ ವಿಮಲಾ
ನಂದ ಸಿದ್ಧಿಯನಿತ್ತು ದೇವ ಮು
ಕುಂದ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹುವನು || ೪೧ ||

ಅಂತು ಸಂಧಿ ೧೪ಕ್ಕೆ ಪದ ೬೦೩ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಹದಿನೈದನೆಯ ಸಂಧಿ

**ಋಷಿಯು ತಾನು ವಾಲ್ಮೀಕಿಯಾದ ವೃತ್ತಾಂತ ವಿವರಿಸಿದ್ದು**

ಸೂಚನೆ || ಆಯತದಿ ವಾಲ್ಮೀಕಿ ರಘುಕುಲ
ರಾಯಗೆಂದನು ರಾಮನಾಮದಿ
ರಾಯ ಮುನಿತಾನಾದ ನಿಜವೃತ್ತಾಂತ ಸಂಗತಿಯ ||

ಪದ || ರಾಮ ನಿದ್ರೆಯ ಭರದಲಿರೆ ಸು
ಪ್ರೇಮದಲಿ ಗುಹನೊಡನೆ ಲಕ್ಷ್ಮಣ
ತಾ ಮುದದಿ ತಿಳುಹಲಿಕೆ ಸೂರ್ಯೋದಯದಿ ನಾವೆಯಲಿ ||
ರಾಮ ನದಿಯನು ಕಳಿದು ಭರದಲಿ
ಪ್ರೇಮದಿಂ ಭಾರದ್ವಜಾಶ್ರಮು
ಕೀ ಮನದ ವಾಲ್ಮೀಕಿ ವನಕೈತಂದ ಸಲಹೆಮ್ಮ || ೧ ||

ಪರ್ವತಾತ್ಮಜೆ ಕೇಳು ರಾಘವ
ನುರ್ವಿಸುತೆ ಲಕ್ಷ್ಮಣರು ಸಹಿತಾ
ನಿರ್ವಿಕಾರಿ ಮುನೀಂದ್ರಗೆರಗಿರೆ ಕಂಡನಿದಿರಿನಲಿ ||
ದುರ್ವದಳ ಸುಶ್ಯಾಮ ಕೋಮಲ
ದರ್ವಸಪ್ತಕ ಶತತಸುದ್ಯುತಿ
ಯುರ್ವಕಾಮನ ಪಳಿವ ಕಮನೀಯಾಂಬುಜೇಕ್ಷಣನ || ೨|| ||

ಎಡದಿ ಜಾನಕಿ ಬಲದಿ ಲಕ್ಷ್ಮಣ
ನಡುವೆ ದಿವ್ಯಾಂಗದಲಿ ವಲ್ಕಲ
ದುಡುಗೆಯ ಜಟಾಮಕುಟರಂಜಿತ ರಾಮನನು ಕಂಡ ||

ತಡೆಯದೀಕ್ಷಿಸಿದನೆನೆಯನು
ಮಿಡುಕದಾ ವಾಲ್ಮೀಕಿ ಹರುಷದ
ಕಡಲಲಾನಂದಾಶ್ರು ಸಹಿತಾಲಿಂಗಿಸಿದನೊಡನೆ ॥ ೩ ॥

ಪೂಜಿಸಿದನಾ ಮುನಿ ಜಗತ್ರಯ
ಪೂಜಿತನನಘ್ಯಾದಿ ವಿಧಿಯಿಂ
ದೋಜೆ ತಪ್ಪದೆ ಮಧುರ ಫಲಮೂಲಾಶನಗಳಿಂದ ॥
ಭೋಜನವ ಮಾಡಿಸಿ ಮನೋರಥ
ಭಾಜನನು ತಾನಾಗಿರಲು ನಿ
ರ್ವ್ಯಾಜ ರಾಘವನೆರಗಿ ವಿನಯದಲೆಂದನಾ ಮುನಿಗೆ ॥ ೪ ॥

ಮುನಿಪ ತಂದೆಯ ನೇಮವನು ತಾ
ನನುಕರಿಸಿ ದಂಡಕ ವನಕ್ಕಿಂ
ದನುಜ ಸತಿ ಸಹ ಹೋಗಬಂದೆವು ನಿಮಗಿದೆಲ್ಲವನು ॥
ಎನಲು ಕಾರಣವೇನು ಬಲ್ಲಿರಿ
ಜಿನುಮಯಾಂತದೃಷ್ಟಿಯುಂಟೆಲೆ
ಘನಮಹಿಮರಿಂಗೊಂದು ಬಿನ್ನಹವುಂಟು ತನಗೆಂದ ॥ ೫ ॥

ಎಲ್ಲಿ ಸುಖವಾಸವನು ಮಾಡಲು
ಸಲ್ಲಲಿತನುಸ್ಥಳವು ತನಗೀ
ವಲ್ಲಭೆಯು ಸಹವಾಗಿ ಕಿಂಚಿತ್ಕಾಲ ಕಳಿವಪೆನು ॥
ಬಲ್ಲಿರದ ನೀವೆನಲು ನಗುತಲೆ
ಫುಲ್ಲದೃಶ ನೀನೆಂದಡಾವುದು
ತೊಲ್ಲಹವು ಕೇಳೆಂದನಾ ವಾಲ್ಮೀಕಿ ಸುವಿವೇಕಿ ॥ ೬ ॥

ನೀನು ಲೋಕಾನೀಕರೆಲ್ಲಾ
ಸ್ಥಾನವಾಮತ್ತಮನು ಲೋಕದಿ
ನೀನು ಸರ್ವಸಮಾನ ವಾಸದಿ ಸದನವಾಗಿಪ್ಪೆ ॥

ತಾನಿದೇ ಸಾಧಾರಣ ಸ್ಥಳ
ನೀನು ಸೀತೆಯು ಸಹ ವಿಶೇಷ
ಸ್ಥಾನವಾಗಿರಲೆನ್ನ ಕೇಳ್ಬುದಕೆಂಬೆ ರಘುನಾಥ ॥ ೭ ॥

ರಾಮ ಕೇಳ್ಳೈ ನಿನಗೆ ಸೀತಾ
ಭಾಮೆ ಸಹಸುಖದಿಪ್ಪ ಮನೆಯನು
ಸೋಮನಂದದಿ ಶಾಂತನಾಗಿಯೆ ಹೆಚ್ಚು ಕುಂದೆಂಬ ॥
ಭ್ರಾಮವಿಲ್ಲದೆ ಸಮದಿ ಜಂತು
ಸ್ತೋಮದಲಿ ಮಧ್ಯಸ್ಥನಾಗಿಹ
ಸ್ವಾಮಿ ನಿನ್ನನವರತ ನೆನೆವರ ಹೃದಯ ಮನೆ ನಿನಗೆ ॥ ೮ ॥

ಧರ್ಮಾದಿಂದಿಹ ಲೋಕ ಗತಿಯೆನ
ಧರ್ಮವಿಡಿದೀ ವಿಷಯ ನರಕವ
ನೆಮ್ಮದೆಲ್ಲವ ಬಿಟ್ಟು ನೀನೇ ಪರಮ ಗತಿಯೆಂದು ॥
ವೊಮ್ಮೆಯೂ ಬಿಡದಿರ್ದ ನಿನ್ನನು
ನೆಮ್ಮಿದವರಲಿ ಸೀತೆ ಸಹಿತಲಿ
ರಮ್ಯವಾಸವ ಮಾಡುವಾ ಸುಖಮಂದಿರವು ನಿನಗೆ ॥ ೯ ॥

ನಿನ್ನ ನಿಜ ಮಂತ್ರವನು ಜಪಿಸುತ
ಹರ್ಷಿಶವು ಸುಖದುಃಖ ಶೀತೋ
ಷ್ಣೋನ್ನತಿಯ ಸಮಗಂಡು ಪುತ್ರಕಳತ್ರ ಮಿತ್ರರಲಿ ॥
ಹೊನ್ನು ಮನೆ ಪಶು ರಾಜ್ಯ ಸಂಪದ
ಚೆನ್ನೆಯರೆನಿಪ್ಪಾವರೊಳಗೂ
ಭಿನ್ನವೆಂದುಳಿದವರ ಹೃದಯವೆ ಸುಖದ ಗೃಹ ನಿನಗೆ ॥ ೧೦ ॥

ನೆಮ್ಮದೆಂಬೀ ಹಮ್ಮದಿಲ್ಲದೆ
ಸುವರ್ಮನಾವಗ ಶಾಂತನಾಗಿ
ದ್ದೊಮ್ಮೆ ಕಂಡುದನೇನ ಬಯಸದೆ ಹಳಿಯೆ ಕೋಪಿಸದೆ ॥

ದುಮ್ಮಳಿಸದೆ ಸುವರ್ಣಶಿಲೆ ಮ
ಣ್ಣಿಮ್ಮಡಿಸದಿ ಸರಿಗಂಡೊಳಗೆ ಸೋ
ಹಮ್ಮನುತ್ತಿಷ್ಟವರ ಹೃದಯವೆ ರಾಮ ಮನೆ ನಿನಗೆ ॥ ೧೧ ॥

ನಿನ್ನಲಸುದಿನ ಮನವ ನಿಲಿಸುತ
ನಿನ್ನಲೀ ಬುದ್ಧಿಯನು ಯೋಚಿಸು
ದನ್ನುದಿನ ಬಂದುದನುಣತ ಸಂತುಷ್ಟನಾಗಿರುತ ॥
ತನ್ನ ಮನವಾಕ್ಕಾಯ ಕರ್ಮವ
ಚೆನ್ನ ಫಲ ಸನ್ನ್ಯಸ್ಥನಾಗಿಯೆ
ನಿನ್ನಲರ್ಪಿಸುವವರ ಹೃದಯವೆ ಗೃಹ ನಿನಗೆ ರಾಮ ॥ ೧೨ ॥

ಆವ ಸುಖಭೋಗಗಳು ಬಂದಡೆ
ಭಾವದಲಿ ಹರುಷಿಸದವರ ಹರಿ
ಯಾವನಿಷ್ಟಪ್ರಿಯವು ಬಂದರು ಮನದಿ ಯೋಚಿಸದೆ ॥
ದೇವ ನಿನ್ನನೆ ನಂಬಿ ನೆರೆ ಮಾ
ಯಾ ವಿಕಾರವಿದೆಲ್ಲವೆಂದರಿ
ದಾವಗಂ ತಿಳಿದವರ ಹೃದ್ಗೃಹ ನಿನಗೆ ಸುಖಸದನ ॥ ೧೩ ॥

ಆರು ಭಾವ ವಿಕಾರ ದೇಹವಿ
ದಾರು ತಾನಲ್ಲೆಂದು ಪ್ರಾಣವ
ಸಾರಿ ಕ್ಷುತ್ತೃಷೆ ದುಃಖ ಸುಖವಂತಃಕರಣಕ್ಕೆನಿ ॥
ಸೇರವೆನಗಿವನರಿವ ಸಾಕ್ಷಿಗೆ
ಬೇರೆ ನಾ ಸಂಸಾರ ಧರ್ಮವ
ತೂರಿಬಿಟ್ಟವರಂತರಂಗವೆ ಚೊಕ್ಕ ಗೃಹ ನಿನಗೆ ॥ ೧೪ ॥

ಎಲ್ಲರಂತರ್ಗೃಹೆಯಲನುದಿನ
ನಲ್ಲ ಚಿದ್ಘನವಾಗಿ ನಿತ್ಯ ಸು
ಲೋಲ್ಲಸಿತ ನಿರ್ದ್ವಂದ್ವನಾಗಿಯು ಸರ್ವಗತನಾಗಿ ॥

ಅಲ್ಲಿಯಿಲ್ಲೆಲ್ಲೆಂಬುದಿಲ್ಲದೆ
ಯೆಲ್ಲ ಯೇಕವದಾದವರ ಹೃ
ತ್ಫುಲ್ಲ ವಾಸವ ಮಾಡು ರಾಘವ ಸೀತೆ ಸಹವಾಗಿ ॥ ೧೫ ॥

ಹೇಳುತನುದಿನ ನಿನ್ನನಾಮವ
ಕೇಳುತನುದಿನ ನಿನ್ನ ಮಹಿಮೆಯ
ನಾಲಿಸುತ ನಿನ್ನಮಳ ರೂಪವ ಹೃದಯ ಕಮಲದಲಿ ॥
ಆಳುಗೆಲಸವ ನಿನಗೆ ಮಾಡುತ
ಕೋಳುವೋಗದೆ ಪೂಜಿಸುತ್ತವೆ
ಮೇಲೆ ನೀ ತವಗೊಡೆಯನೆಂಬರ ಹೃದಯಗೃಹ ನಿನಗೆ ॥ ೧೬ ॥

ಅಡಿಗಡಿಗೆ ಬಿದ್ದೆದ್ದು ನಮಿಸು
ತ್ತೊಡೆಯ ನೀನೇ ಬಂಧು ಮಿತ್ರನು
ಹಡೆದ ತಂದೆಯು ತಾಯಿ ಭ್ರಾತೃ ಸುಹೃತ್ಪ್ರಿಯಾದಿಗಳು ॥
ಬಿಡೆನು ನಿನ್ನನು ನಿನ್ನ ನಂಬಿದೆ
ಬಿಡದಿರಲೆ ದೀನಾರ್ತ ಬಂಧುವೆ
ಕಡೆಗೆ ನೀನೇ ಗತಿಯದಿಪ್ಪರ ಹೃದಯ ಮನೆ ನಿನಗೆ ॥ ೧೭ ॥

ನೀನೆ ಲೋಕವು ಲೋಕ ಚೇಷ್ಟಕ
ನೀನು ತನು ಪ್ರಾಣೇಂದ್ರಿಯಂಗಳು
ನೀನೆ ಸಂಸಾರಾಂಬ ಬುದ್ಧಿಯು ಚಿತ್ತ ಸಹವಾಗಿ ॥
ನೀನೆ ಸಕಲರ ಪಾಪಹಾರಕ
ನೀನೆ ಲೋಕದ ಜನರ ಪಾಲಕ
ನಾನು ನಿಜದಲಿಯರಿತೆ ಸರ್ವರ ಹೃದಯ ಮನೆ ನಿನಗೆ ॥ ೧೮ ॥

ರಾಮ ರಾಮ ರಘೂತ್ತಮಾಚ್ಯುತ
ವಾಮನ ಶ್ರೀಧರ ಮುಕುಂದ ರ
ಮಾ ಮನೋಹರ ವಾಸುದೇವೋಪೇಂದ್ರ ನರಸಿಂಹ ॥

ಭೂಮಿಧರ ಧರಣೀಧರಾಧರ
ತಾಮರಸಭವ ತಾತನತಜನ
ಕಾಮಧೇನುವೆಯೆಂಬ ವರಹೃತ್ಕಮಲ ಗೃಹ ನಿನಗೆ ॥ ೧೯ ॥

ಆದಿನಾರಾಯಣ ಜಗನ್ಮಯ
ಮಾಧವಾನಂತ ತ್ರಿವಿಕ್ರಮ
ಶ್ರೀಧರ ಶ್ರೀ ವಿಷ್ಣು ಕೃಷ್ಣ ಕೃಪಾಳು ಜಗದೀಶ ॥
ವಾದದೂರ ವಿಕುಂಠ ಕೂರ್ಮಕ್ಷ್
ಪೋದಧಿಯ ಹರಿವತ್ಸ್ಯಜಿತ ದಾ
ಮೋದರನೆ ಗತಿಯೆಂಬವರ ಹೃದಯದಲಿ ಮನೆ ನಿನಗೆ ॥ ೨೦ ॥

ನಿತ್ಯ ಶುದ್ಧ ನಿರೀಹ ನಿಷ್ಕಳ
ಸತ್ಯ ಸಂವಿನ್ಮಾತ್ರ ನಿರ್ಮಲ
ಪ್ರತ್ಯಗಾದ್ವಯತೀತ ಶಾಂತ ನಿರಾಳ ನಿರ್ಜೀವ ॥
ವಸ್ತು ವಾಙ್ಮತಿದೂರ ಸಕಳಾ
ದ್ಯಸ್ತ ರಾಮಾ ರಾಮಯೆಂಬು ವಿ
ರಕ್ತಿಯುತರಲಿ ಸೀತೆ ಸಹಿತಿರು ರಾಮ ಮನೆಯಾಗಿ ॥ ೨೧ ॥

ನಿನ್ನ ನಾಮದ ಮಹಿಮೆಯನು ಧಿಟ
ವರ್ಣಿಸುವರಾರ್ಕೈ ರಘೂತ್ತಮ
ಗನ್ನಗತಕದಿ ಬಿದ್ದ ಮೂಢರು ಬಲ್ಲರಿಂತದನು ॥
ನನ್ನ ಪಾವನಮಾಡಿ ಮಾಡದೆ
ಯುನ್ನತದಲಿ ಬ್ರಹ್ಮಋಷಿ ಸಂ
ಪನ್ನತೆಯ ನೀ ರಾಮರ.ಮಾಯೆಂಬೆರಡು ವರ್ಣ ॥ ೨೨ ॥

ಮುನ್ನ ನಾನು ಕಿರಾತನಾದೆನು
ಮನ್ನುದಿನವೂ ಬೇಡರೊಡನೇ
ದುರ್ನೀತಿಯಲಿದ್ದು ತಜ್ಞಾತಿಗಳೊಡನೆ ಬೆರಸೀ ॥

ವರ್ಣಮಾತ್ರ ದ್ವಿಜಜನನ ಬಳಿ
ಕನ್ಯ ಜಾತಿಃಸಂಗ ಶೂದ್ರಿತಿ
ಯಸ್ನು ರಮಿಸಿಯನೇಕ ಮಕ್ಕಳು ಜನಿಸಿದವು ಬಳಿಕ ॥ ೨೩ ॥

ಕಾಮ ಕಿಂಕರನಾದಗುಂಟೇ
ಹೇಮಕುಲಗುಣದೈವ ಗುರು ಪಿತೃ
ನೇಮ ಸಂಧ್ಯಾ ಸ್ನಾನ ತರ್ಪಣ ಪೂಜೆ ಭಕುತಿಗಳು ॥
ತಾಮಸಾನೃತ ಡಂಭ ಕೊಲೆಹೊಲೆ
ಸೀಮೆಯಿಲ್ಲದ ಮಾತು ಚಿತ್ತ
ಭ್ರಾಮ ದುಃಸ್ಸಂಗತ್ಯ ಕೋಪಾಲಸ್ಯ ನೆಲೆಯಹುದು ॥ ೨೪ ॥

ಕೆಟ್ಟ ಶೂದ್ರಿಯ ಮೆಚ್ಚಿ ನಾನತಿ
ದುಷ್ಟಚೋರ ಸಂಗತಿಯಲೊಡ
ಬಟ್ಟು ಚೋರನೆಯಾಗಿಯನುದಿನ ಕಳುತ ಬಿಲ್ಲುವಿಡಿದು ॥
ಮಿಟ್ಟಿ ಬೋಳೆಯ ಬಾಣ ಸಹಜವ
ಹುಟ್ಟಿದನು ಜೀವರನು ಕೊಲಲೆನೆ
ಬಟ್ಟೆ ಪಟ್ಟಣವೂರು ಕೇರಿಯು ಸುಲಿದು ತಿನುತಿರ್ದೆ ॥ ೨೫ ॥

ಹೇಸದಾಯಿತು ಚಿತ್ತ ಹೊಲೆಕೊಳೆ
ಮಾಸದಲಿ ನಾಮೇಧ್ಯಗವರಿಗ
ವಾಸಿಗೆಟ್ಟರು ದೋಷ ಬಂದರು ಕ್ಲೇಶವಾದರೆಯು ॥
ಕಾಸುವೀಸವು ವಿರತಿ ಬಾರದೆ
ಮಾಸಿ ಮನೆ ಹೆಂಗಳಲಿ ಬಲಿದುದು
ದೇಶವೆನ್ನರಿ ಮೆಚ್ಚಿದಾತಗೆ ಮಸಣ ಲೇಸೆಂದು ॥ ೨೬ ॥

ಒಂದುದಿನ ಸುಲಿಯಲಿಕೆ ಬಟ್ಟೆಗೆ
ಸಂದಿರಲು ಮಾರ್ಗದಲಿ ಋಷ್ಯರ
ಮುಂದೆ ಕಂಡೆನು ಸಪ್ತಸೂರಿಯರಂತೆ ಬೆಳಗುತಿರೆ ॥

ಹಿಂದೆ ಮುಂದಸು ಮರೆಮು ರಾಮು ಮು
ಕುಂದ ನಾರಾಯಣ ಜನಾರ್ದನ
ಸಿಂಧುಶಯನ ಮುರಾರಿ ಮಾಧವ ಯೆನುತ ಬರುತಿರಲು || ೨೭ ||

ಹೋದೆನಾಕ್ಷಣ ಕೂಡಿಯುವರನು
ಬಾಧಿಸೆಲ್ಲವ ಸುಲಿಯೆ ಲೋಭದಿ
ಹಾದಿಗಳ್ಳವರುಟ್ಟ ಕಂಥೆ ಕಷಾಯವೆಳೆವುತಿರೆ ||
ಹೋ ದುರಾತ್ಮಕ ನಿಲ್ಲು ನಿಲ್ಲೆಲೆ
ಕಾಮು ವಸ್ತ್ರವ ಸೆಳೆವೆ ಹೇಳೆಂ
ದಾ ದಯಾಳುಗಳೆಂದಡೆಂದೆನು ಮಗುಳೆಯವರೊಡನೆ || ೨೮ ||

ಗಂಟು ಗಿಂಟು ಸುವಸ್ತ್ರವೇನಾ
ಗುಂಟದೆಲ್ಲವ ಸುಲಿದು ಕೊಳಬೇ
ಕುಂಟು ಮನೆಯಲಿ ನಾರಿ ಮಕ್ಕಳಿಗುಣಲು ಬೇಕಾಗಿ ||
ವುಂಟೆಯದ ಗಿರಿವನದಿ ಮಾರ್ಗದಿ
ಕಂಟಕದಿ ಸುಲಿದೊಯ್ಯುದಿದ್ದರೆ
ಶುಂಠ ಯೆನ್ನರೆ ಮನೆಯ ಹೆಂಡಿರು ಮಕ್ಕಳೆನ್ನೊಡನೆ || ೨೯ ||

ಎನಲು ಮತ್ತೆನ್ನೊಡನೆ ಮೆಲ್ಲನೆ
ಮುನಿಗಳೆಂದರು ನಮ್ಮ ವಸ್ತುವ
ನಿನಗೆ ಕೊಡುವೆವು ಹೋಗಿ ಬಾ ಮನೆಗೊಂದು ವಚನವನು ||
ವನಿತೆ ಸುತರನು ಕೇಳು ನೀನನು
ದಿನದಿ ಸುಲಿತಂದೀ ಮಹಾಘ
ಕ್ಕನುಗುಣದಿ ನೀವೆಲ್ಲ ಸಹಿತುಣಬೇಕಲಾ ಯೆಂದು || ೩೦ ||

ಬೇರೆ ಬೇರೆನೆ ತನಗೆನುತ್ತವೆ
ಸೂರೆಗೊಂಬಿರಿ ತಂದ ವಸ್ತುವ
ಸೇರಿಸುಂಬಿರಲೀ ಮಹಾಪಾತಕವನೆಂದರಿದು ||

ಬಾರಹೋಗಾ ಮನೆಗೆಯುನ್ನಗ
ದಾರಿಯಲಿ ನಾವಿಪ್ಪೆವೇದೆನೆ
ನಾರಿ ಮಕ್ಕಳ ಹೋಗಿ ಕೇಳಿದೆ ಮುನಿಗಳೆಂದಂತೆ || ೩೧ ||

ಕೇಳು ರಾಘವ ಮನೆಯರೆಲ್ಲರ
ಕೇಳರೆಂದರು ಕರ್ತೃ ನೀನಿರೆ
ಕೇಳ ಬಂದ್ಯೆ ನಮಗೆ ಪಾಪದ ಗೊಡವೆಯೇ ಯಿಲ್ಲ ||
ಬೀಳೆ ನರಕಕೆ ನೀನೆಯೆಂದರೆ
ಶೂಲವೆದೆಯಲಿ ತಾಗಿದಂತಾ
ನಾಲಿಸುತ್ತೈತಂದೆನಾ ಕರುಣಾರ್ಣವರ ಹೊರೆಗೆ || ೩೨ ||

ಆ ಮುನಿಗಳೀಕ್ಷಣದ ಮಾತ್ರದಿ
ತಾಮಸಾಂಗವು ಹೋಗಿಯಾಗಳೆ
ಸೋಮನಂದದಲೊಳಗೆ ಶುದ್ಧಾಂತಃಕರಣನಾಗಿ ||
ಭೂಮಿಯಲಿ ನಿಡುಸರಳನಿಡುಕುತ
ನೇಮದಿಂ ದಂಡಪ್ರಣಾಮದಿ
ಸ್ವಾಮಿಗಳಿರಾ ರಕ್ಷಿಸುವುದೆಂದೆನುತ ಸೈಗೆಡೆದೆ || ೩೩ ||

ಅದ್ದೆನದ್ದೆಸು ನಿರೆಯ ಶರಧಿಯ
ನುದ್ಧರಿಸಿ ಕರುಣಾಳುಗಳಿರೆನೆ
ಬಿದ್ದವನ ನೋಡುತ್ತ ನುಡಿದರು ಮುನಿಗಳೆನ್ನೊಡನೆ ||
ಯೆದ್ದು ನಿಲು ನಿಲು ಸಾಧುಸಂಗದಿ
ಭದ್ರ ಫಲವುಂಟೇಕೆ ಬೆದರುವೆ
ಕ್ಷುದ್ರಹೀನರಿಗುಂಟದೊಂದುಪದೇಶವೆಂದೆನುತ || ೩೪ ||

ನೋಡಿದರು ತಮ್ಮೊಳಗೆ ಮಂತ್ರವ
ನೀಡಲಾಗದಿವಂಗೆ ದ್ವಿಜತೆಯ
ಕೇಡಿನಾಧಮ ಸಾಧುವೃತ್ತಿಯದಿಲ್ಲ ನೆಮ್ಮದಿರ ||

ನೀಡಿ ಬಿದ್ದುವರಿಂದ ಯತ್ನವ
ನೋಡಿ ರಕ್ಷಿಸಬೇಕುದೀತಗೆ
ಕಾಡ ಹೊಗಿಸದೆ ಮೋಕ್ಷವನು ಕೊಡಬೇಕಿವಂಗೆನುತ || ೩೫ ||

ರಾಮ ಕೇಳಿಂತೆನುತ ನಿಸ್ನಯ
ನಾಮವಸ್ತ್ರವ್ಯಸ್ತವಾಗಿಯೆ
ನೇಮಿಷಿವರೇಕಾಗ್ರಚಿತ್ತದಲೆಲವೊ ನೆರೆ ಬಿಡದೆ ||
ಆ ಮರಾಮರಯೆಂದೆನುತ್ತಾ
ಭ್ರಾಮ ಹುಟ್ಟದೆ ನಾವು ಮರಳೀ
ಭೂಮಿಗೆಯ್ತುಪ್ಪನ್ನ ಬಿಡದಿರೆನುತ್ತ ಕರುಣದಲಿ || ೩೬ ||

ಎಂದು ನಡೆದರು ದಿವ್ಯ ಮುನಿವರ
ರಂದು ಸ್ವೇಚ್ಛಾಧೀನದಲಿ ನಾ
ನಿಂದೆನವರುಪದಿಷ್ಟ ಜಪದೇಕಾಗ್ರಚಿತ್ತದಲಿ ||
ಹಿಂದೆ ನೆನೆಯದೆ ಮುಂದೆ ಬಯಸದೆ
ಅಂದು ಬಾಹ್ಯವ ಮರೆದು ನಿಶ್ಚಲ
ದಿಂದ ಬಹುಕಾಲವನು ಕಳೆದೆನು ಮರಮರಾಯೆನುತ || ೩೭ ||

ಸರ್ವಸಂಗವಿಹೀನನಾಗಿ
ದ್ದುರ್ವಿಯಲ್ಲಿರೆ ಹುತ್ತುದೇಹವ
ಖರ್ವಿಸಿತು ಹಲಯುಗ ಸಹಸ್ರವು ಸಲಲು ಮುನಿವರರು ||
ಪೂರ್ವಹಿತಕೃತವರಿದು ಬಂದಾ
ಸರ್ವಭೂತದಯಾ ಪರರುಜಿತ
ಗರ್ವರೆನ್ನನು ಕರೆದರಾಲಿಸಿ ರಾಮನಾಮವನು || ೩೮ ||

ಏಳೆನಲು ನಾನೆದ್ದು ಬಂದೆನು
ಬಾಲಸೂರ್ಯನು ಮುಗಿಲಲುದಿಸಿದ
ವೋಲು ಹುತ್ತನು ಬಗಿದು ದಿವ್ಯಶರೀರವಿದನಾಂತು ||

ಯೇಳು ಮಂದಿಯ ಮುಂದೆ ನಿಂದಿರೆ
ಪೇಳಿದರು ನಾಮವನು ನನಗೆ ಸು
ಶೀಲನಿಧಿಗಳು ನೀನು ವರ ವಾಲ್ಮೀಕಿ ಮುನಿಯೆಂದು ॥ ೩೯ ॥

ಎರಡನೆಯ ಜನ್ಮವಿದು ನಿನಗೆನು
ಹಿಂದೆ ವಲ್ಮೀಕದಲಿ ಜನಿಸಲು
ಪರಮ ಮುನಿಯಾಗೆಂದು ನಡೆದರು ದಿವ್ಯಗತಿವಿಡಿದು ॥
ವರ ರಘೂತ್ತಮ ನಾನು ನಿನ್ನುರು
ಶರದ ನಾಮ ವರಪ್ರಭಾವದಿ
ಹಿರಿಯ ಮುನಿ ನಾನೆಂಬಿನಿತು ಗುಣವಾಯ್ತು ತನಗೆಂದ ॥ ೪೦ ॥

ಇಂದು ಲಕ್ಷ್ಮಣ ಸೀತೆ ಸಹಿತರ
ವಿಂದನೇತ್ರನ ನೀಲಗಾತ್ರದ
ಲಂದವಡೆದ ಜಟಾಮಕುಟ ವಲ್ಕಲದುಡುಗೆಯನುವಿಡಿದು ॥
ನಿಂದೆ ನನ್ನಯ ಮುಂದೆ ರಾಘವ
ಬಂದು ತಾನು ವಿದೇಹ ಮುಕ್ತಿಗೆ
ಸಂದೆನೆಂಬುವಕೇನು ಸಂಶಯವೆಂದನಾ ಮುನಿಪ ॥ ೪೧ ॥

ನಾನು ಕಾಮಿತ ಧೇನು ರಾಮನ
ನಾಮ ಚಿಂತಾರತುನ ಶ್ರೀರಘು
ರಾಮನಾಮವೆ ಕಲ್ಪತರುವಿಂದಧಿಕವೆಂಬುದನು ॥
ಸ್ವಾಮಿ ಹೇಳಲದೇನ ತಾನತಿ
ತಾಮಸಾಧಮನಾಗಿ ನಿನ್ನಯ
ನಾಮದಿಂದೀ ಪರಿಯ ಪಡೆಯನೆ ಮುನಿವರೇಣ್ಯತೆಯ ॥ ೪೨ ॥

ಸ್ವಸ್ಥನಾಗಿ ಕೃತಾರ್ಥನಾದೆನು
ಹಸ್ತಿರೀಗಿರಿಯಲ್ಲಿ ನಿನಗಿರೆ
ಸುಸ್ಥಳವ ತೋರಿಸುವೆನೀಗಳೆ ರಾಮ ಬಾರೆನುತ ॥

ಉತ್ತಮ ಶ್ರೀರಾಮ ಲಕ್ಷ್ಮಣ
ರೊತ್ತಿನಲಿ ಶಿಷ್ಯೌಘ ಸಹ ಬರೆ
ಹತ್ತಿ ಮಧ್ಯವ ಶೃಂಗಗಿರಿ ಸುಸ್ಥಳವ ತೋರಿಸಿದ ॥ ೪೩ ॥

ಅಲ್ಲಿ ವಿಸ್ತೀರ್ಣವಲಿ ಶಾಲೆಯ
ಚೆಲ್ವಯೆರಡನು ಮಾಡಿ ದಕ್ಷಿಣೆ
ಯಲ್ಲಿ ನದಿಯಿರಲಾ ಚತುಃಶಾಲಾ ಸುಶೋಭನದಿ ॥
ಚೆಲ್ವ ಲಕ್ಷ್ಮಣನೊಡನೆ ದಿವಿಜರಿ
ಗೆಲ್ಲರಿಂಗತಿಶಯವನೀವುತ
ನೆಲ್ಲರನು ಮೋಹಿಸುತ ಸೌಖ್ಯದಲಿದ್ದರರದರೊಳಗೆ ॥ ೪೪ ॥

ರಾಮನಾ ವಾಲ್ಮೀಕಿ ಮುನಿ ಮಾ
ಲ್ಕಾ ಮಹಾಪೂಜೆಯನು ನಿತ್ತಲು
ಪ್ರೇಮದಿಂ ಕೈಕೊಳುತ ಲಕ್ಷ್ಮಣ ಸೀತೆ ಸಹವಾಗಿ ॥
ಕ್ಷೇಮದಿಂ ವರಮುನಿ ಸುರೌಘ
ಸ್ತೋಮ ಹರುಷಿಸಲಿದ್ದನಾ ಸು
ತ್ರಾಮ ಸತಿಸಹಿತಿದ್ದಯೆಂದವನು ಆ ಮಹೇಶ್ವರನು ॥ ೪೫ ॥

ಸಂಧಿ ಹದಿನೈದಿದರೊಳಗೆ ಪದ
ವೃಂದಗುಣಯುತವಾಯ್ತು ತಿಥಿಗಳಿ
ದೊಂದು ಮನದಿಂ ಹೇಳಿ ಕೇಳಿವಡಖಿಳ ಪಾಪಹರ ॥
ಬಂಧನವ ಪರಿಹರಿಸಿ ಪರಮಾ
ನಂದ ಸಿದ್ಧಿಯನಿತ್ತು ದೇವ ಮು
ಕುಂದ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹುವನು ॥ ೪೬ ॥

ಅಂತು ಸಂಧಿ ೧೫ ಕ್ಕೆ ಪದ ೬೪೯ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ

|| ಶ್ರೀ ರಾಮಚಂದ್ರಾಯ ನಮಃ ||



# ಹದಿನಾರನೆಯ ಸಂಧಿ

## ದಶರಥನ ಮರಣ ಭರತನ ದುಃಖ

ಸೂಚನೆ || ರಾಮಚಿಂತೆಯಲಳಿದ ದಶರಥ
ಭೂಮಿಪನ ಹೊರೆಗನುಜಸಹ ಬಂ
ದಾ ಮಹಾಪತಿ ಭರತನಳಲಲು ತಿಳುಹಿದನು ಮುನಿಪ ||

ಪದ || ರಾಮನಾ ವಾಲ್ಮೀಕಿ ಮುನಿ ಮಾ
ಳ್ಪಾ ಮಹಾಪೂಜೆಯನು ಕೈಕೊಳು
ತಾ ಮುನೀಶ್ವರನೊಡನಿರಲು ಸುಸ್ಥಳವ ತೋರೆನಲು ||
ಧಾಮ ನೀ ಸರ್ವಕ್ಕೆ ಘನ ಚಿ
ದ್ವ್ಯೋಮದಂದದಿ ಪೂರ್ಣ ಲಕ್ಷ್ಮಣ
ಭಾಮಿನೀ ಸಹ ಚಿತ್ರಕೂಟದಲಿದ್ದು ಸಲಹೆಮ್ಮ || ೧ ||

ಕಾಂತೆ ಕೇಳ್ಕೆ ರಾಘವನಗಲಿ ಸು
ಮಂತ ಬಂದನು ಯೋಗಲಷ್ರು ಜ
ಲಾಂತವಿಲ್ಲದೆ ಮುಸುಕನಿಟ್ಟಸ್ತಮಯ ಸಮಯದಲಿ ||
ಚಿಂತೆಯಲಿ ಹೊರಗಿರಿಸಿ ರಥವ ನೃ
ಪಾಂತಿಕಕ್ಕೊಳನೈದಿ ಶಜಶಬು
ದೋಽಂತದಿಂ ನಮಿಸಿರಲು ಶೋಕದಿ ನೃಪತಿ ಬೆಸಗೊಂಡ || ೨ ||

ಏನು ಹೇಳು ಸುಮಂತ ರಾಘವ
ಜಾನಕೀ ಲಕ್ಷ್ಮಣರದೆಲ್ಲಿರೆ
ನೀನು ಬಿಟ್ಟೈತಂದೆ ಪಾತಕಿಯಾದೆನಗೆ ರಾಮ ‖
ಯೇನನೆಂದನು ಸೀತೆ ಲಕ್ಷ್ಮಣ
ರೇನನೆಂದರು ರಾಮ ಹಾ ಗುಣ
ಧೇನು ಹಾ ಯೆಂದೆನುತ ಹಳವಿಸುತಲ್ಲಿ ಸೈಗೆಡೆದ ‖ ೩ ‖

ಸಾವಸವ ದೂರದಲಿ ಬಿಟ್ಟರೆ
ಹಾ ವಿಧಿಯೆ ಯೆನುತಿರೆ ಸುಮಂತನು
ಭೂವರಗೆ ಕೈಮುಗಿವುತೆಂದನು ರಥದಿ ಕರೆದೊಯ್ದು ‖
ಮೂವರನು ವರ ಶೃಂಗವೇರಿಗೆ
ಪಾವನದ ಗಂಗಾ ತಟಾಕದಿ
ನಾವಿರಲು ಫಲಮೂಲ ಸಹ ಮುಂದಿರಿಸಿ ಗುಹ ಕಂಡ ‖ ೪ ‖

ಹಸ್ತದಲ್ಲದ ಮುಟ್ಟಿ ಪ್ರಿಯದಲಿ
ಮತ್ತದನು ಮೊಲದಲ್ಲಿ ಬಿಸುಟನು
ಹತ್ತಿರಿದ್ದಗೆ ವಟದ ಹಾಲನು ತಾಯೆನುತ ತರಿಸಿ ‖
ನೆತ್ತಿಗಿಕ್ಕಿಯೆ ಜಟೆಯ ಮಾಡುತ
ಹೆತ್ತವಂಗಳಬೇಡವೆನ್ನನ
ಗಿತ್ತಯೋಧ್ಯೆಯ ಮಿಗುವ ಸುಖವುಂಟೆನ್ನು ನಮಿಸಿದೆನು ‖ ೫ ‖

ತಾಯಿಗೆರಗಿದೆನೆನ್ನನಗಲಿದ
ಮಾಯೆಗಳು ಬೇಡೆನ್ನು ಮುಪ್ಪಿನ
ರಾಯನನು ಸಂತವಿಸಿ ಹೇಳೆಂದೆನಗೆ ಬಳಿಕ ಸೀತೆ ‖
ಬಾಯರಳಿ ಕಣ್ಣನೀರ ಸುರಿವುತ
ವಾಯದಲಿ ನೋಡುತ್ತ ರಾಮನ
ತಾಯಿಗೆರಗಿದ ಮುಖದಲೆಂದಳು ನೆನ್ನೊಡನೆ ಕರಿಮ ‖ ೬ ‖

ಅತ್ತೆಮಾವಂದಿರಿಗೆ ಸಾಷ್ಟಾಂ
ಗೋಕ್ತವೆರಗಿದೆನ್ನೆನೆನುತ್ತಳು
ಕತ್ತ ನಾವೆಯನೇರಿ ನಡೆದರು ಗಂಗೆಯನು ಕಳೆದು ||
ಮತ್ತೆ ಕಾಂಬನ್ನಿದ್ದು ದುಃಖಿಸು
ಚಿತ್ತ ಮರಳಿದು ಬಂದೆನೆನೆ ಕೇ
ಳುತ್ತ ಕೌಸಲೆ ಮರೆವಿಡಿಸುತಿಂತೆಂದನರಸಂಗೆ || ೭ ||

ಕೈಕೆಯು ಪ್ರಿಯಕಿತ್ತೆ ರಾಜ್ಯಾ
ನೀಕವೆಂಬುವಕೆನ್ನೆ ರಾಮನ
ನೇಕೆ ನೂಕಿದೆ ಮತ್ತೆ ಹಳವಿಸಲೇಕೆನಲು ಕೇಳಿ ||
ತೀಕಿದನು ನೃಪ ಹುಣ್ಣಲುಪ್ಪನು
ತೋಕಿದಂತಶ್ರುಗಳಲೊರಲುತ
ಸಾಕು ಕೌಸಲೆಯಂಬ ತಿರುಹುವೆ ಗಾಯದೊಳಗೆಂದ || ೮ ||

ಇಂದುಮುಖಿ ಕೇಳೆನಗೆ ಪ್ರಾಣವು
ನಿಂದಿರಲು ನನಗೊಬ್ಬ ಮುನಿಯಿಂ
ಬಂದಿಹುದು ಬಲುಶಾಪ ಬಾಲ್ಯದಿ ಯೌವನದಲಾನು ||
ಸಂದೆಸುದ್ವೃತ್ತದಲಿ ಬೇಟೆಗೆ
ವೊಂದುದಿನ ಶರಧನು ಸಹಿತ ಮೃಗ
ವೃಂದದಾಶೆಯಲಿರುಳು ವನಮಧ್ಯದಲಿ ಸಾಧಿಸುತ || ೯ ||

ಅರ್ಧರಾತ್ರಿಯಲಾಸರಿಗೆ ಜಲ
ಕೆದ್ದು ಮುನಿಸುತ ಬಂದು ವೊಗೆವನು
ಹೊದ್ದಿ ಕೊಡವಲಿ ಬುಡುಬುಡಿಸೆ ನಾ ಕೇಳಿ ಗಜವೆಂದು ||
ಶಬ್ದಭೇದೀ ಶರವ ಬಿಟ್ಟಡೆ
ಬಿದ್ದನೋ ಹಾ ವಿಧಿಯೆ ಪರರಿಗು
ಪದ್ರವೇನನು ಮಾಡಿದವನೇ ಯೆಂಬ ನುಡಿಕೇಳ್ದೆ || ೧೦ ||

ತಂದೆತಾಯಿಯಾಸರಲಿ ಹಾರುವ
ರೆಂದೊರಳೆ ನಾ ಹೋಗಿ ಭಯದಲಿ
ಬಂದು ಮೆಲ್ಲನೆ ಸುಡಿದೆ ನಾನಪರಾಧಿ ದಶರಥನು ||
ಮಂದನರಿಯದೆ ಬಿಟ್ಟೆನಸ್ತ್ರವ
ತಂದೆ ರಕ್ಷಿಸು ಸ್ವಾಮಿಯೆನುತ
ದ್ವಂದ್ವ ಚರಣದಿ ಹೊರಳಿಯತ್ತೆನು ಗದ್ಗದಾಕ್ಷರದಿ || ೧೧ ||

ಎಂದಡಂಜದಿರರಸ ವೈಶ್ಯ ಮು
ನೀಂದ್ರ ಸುತನಾ ಬ್ರಹ್ಮವಧೆಯಿಂ
ಬೆಂದು ಶಂಕೆಯ ಬೇಡ ನನ್ನಯ ತಾಯಿತಂದೆಗಳು ||
ಕಂದನುದಕವ ತಹನೆನುತ ತೃಷೆ
ಯಿಂದ ಹಾರುತ್ತಿಹರು ಕಟಕಟ
ವೊಂದುಕ್ಷಣ ನೀ ಹೋಗಿ ಜಲವನು ಕೊಟ್ಟು ಬಾ ಯೆಂದ || ೧೨ ||

ಕೊಟ್ಟು ಜಲವನು ಪಾದಯುಗಳವ
ಕಟ್ಟಿಕೊಂಡೆಲ್ಲವನು ಹೇಳಿಕೊ
ಸುಟ್ಟು ಕಳೆಗಲ್ಲದಡೆ ಮತ್ಪಿತ ನಾನು ಪ್ರಾಣವನು ||
ಬಿಟ್ಟೆನಪ್ಪಾ ತಾಳಲಾರೆನು
ನಟ್ಟ ಶರವನು ಕೀಳೆನಲು ನಾ
ಮುಟ್ಟಿ ಕಿತ್ತೆನು ಸಂಕಟವನದನಾರಿಗೆನಬಹುದು || ೧೩ ||

ಜಲವ ಕರವತಿ ಪಿಡಿದು ಹೋದೆನು
ಹಳೆಯವೃದ್ಧರ ಹಶಿವು ತೃಷೆಯಿಂ
ಬಳಲುತೆಂಬರು ತಮ್ಮೊಳೇಕೈ ತಳುವಿದನು ಮಗನು ||
ಕಳವಳಿಸಿ ತೃಷೆಯಿಂದ ಮುಪ್ಪಿನ
ರಳಲುವರು ಯೆಂದರಿವನೆಂದೂ
ತಳುವ ಮಾಡನು ಭಕ್ತಿವಂತನೆನುತ್ತ ಹಲುಬುವರು || ೧೪ ||

ಚಿಂತಿಸುತ್ತಿನ್ನುಳುಹ ಕೇಳು
ತ್ತಿಂತು ತಡೆವರೆ ಮಗನೆ ಹತ್ತಿರೆ
ಮುಂತೆ ತಾ ಯೆನುತಂಧಕರು ತೃಷೆಯಿಂದ ಕಳವಳಿಸಿ ||
ಸಂತಸದಿ ಜಲವೆಲ್ಲಿಯೆನೆ ನಾ
ಮುಂತೆ ಬಳಿಯಲಿ ಹೋಗಿ ಪಾದಾ
ಕ್ರಾಂತನಾಗುತ್ತಿಂದೆ ನಾ ಸುತನಲ್ಲ ದಶರಥನು || ೧೫ ||

ಮೃಗವ್ಯಸನದಲಿ ಪಾಪಿ ನಾ ರಾ
ತ್ರಿಗಳಲಿರೆ ನಿಮ್ಮಾತ್ಮ ಸಂಭವ
ವೊಗೆಯೆ ಜಲವನು ಗಜವೆನುತ್ತಾ ನೆಚ್ಚಡವನಿಯಲಿ ||
ಚಿಗಿದು ಬೀಳಲು ಮನುಜ ಶಬ್ದ
ಕ್ಕಗಿದು ಬಂದೆನು ಜಟೆ ಕೆದರಿ ಬಿ
ದ್ದೊಗುವ ರುಧಿರದ ಮುನಿಸುತನ ವರ ಪಾದಚರಣದಲಿ || ೧೬ ||

ಕೆಟ್ಟೆನೆನ್ನನು ರಕ್ಷಿಸೆಂದೆನೆ
ಕೊಟ್ಟನಭಯವ ಜಲವ ತಂದೆಗೆ
ಮುಟ್ಟಿಸಾತನ ಬೇಡಿಕೊಳ್ಳೆನೆ ಬಂದೆ ನಾ ನಿಮ್ಮ ||
ತೊಟ್ಟುಕೊಂಡೆನು ಪದವ ಮರೆವೊ
ಕ್ಕೆಷ್ಟು ಪಾತಕಿಯೆಂದರೂ ದಯ
ಹುಟ್ಟಿ ಪಾಲಿಸಬೇಕೆನುತ್ತೊಡಗೆಡೆದು ನಮಿಸಿರ್ದ || ೧೭ ||

ಎಂದಡದ ಕೇಳುತ್ತ ಶೋಕಾ
ಕ್ರಂದಿತರು ತೋರೆಲ್ಲಿ ತರುಣನು
ಸಂದನೆನೆ ಕರೆತಂದು ತೋರಲು ಮುಟ್ಟಿ ಕರದಿಂದ ||
ನಿಂದು ಹಲುಬುತ್ತಿಂದಡೀಗಳೆ
ತಂದು ಚಿತಿಯಗ್ನಿಯನು ಮಾಡೆನೆ
ಲಂದವರ ನೇಮದಲಿ ಮೀರದೆ ಚಿತೆಯ ಹೊಡಿದೆನು || ೧೮ ||

ಅವರು ವಹ್ನಿಯ ಹೊಕ್ಕ ಮೂವರು
ದಿವಕೆ ಸಲುತಿನಗೆಂದ ವೃದ್ಧನು
ತವ ಕುಮಾರ ವಿಯೋಗ ದುಃಖದಿ ಮರಣ ನಿನಗೆಂದು ||
ಅವನ ಶಾಪವದೀಗ ಬಂದುದು
ಭವಣೆ ಪರರಿಗೆ ಮಾಡೆ ಬಿಡುವುದೆ
ಶಿವಯೆನುತ ಹಳವಿಸುತ ಶೋಕವಲೆಂದನಾ ಭೂಪ || ೧೯ ||

ರಾಮ ರಾಘವ ಸೀತೆ ಲಕ್ಷ್ಮಣ
ನಾ ಮಹಾಂ ಕರುಣಾನಿಧಿಯೆ ಹೋ
ದೈ ಮರಣ ತನಗಾಯಿತೀ ಕೈಕೆಯ ನೆವವಲೆನುತ ||
ಭೂಮಿಪತಿ ಕಾಯುವ ಕಳಚಿ ಸು
ತ್ರಾಮ ಪದವಿಗೆ ಹೋದಡರಸಿಯ
ರಾ ಮಹಿಳೆ ಕೌಸಲೆ ಸುಮಿತ್ರಾದಿಯರು ಮರುಗಿದರು || ೨೦ ||

ಉರವ ತಾಡನೆದಿಂದ ಘೋಳಿಡ
ಲರಸಿಯರು ಕೇಳಿದು ವಸಿಷ್ಠನು
ವರ ಸುಮಂತನು ಸಹಿತ ಬಂದಾ ತೈಲ ದೋಣಿಯಲಿ ||
ಇರಿಸಿ ಹೆಣವನು ಬೇಗ ದೂತರ
ಹರಿಸಬಿಟ್ಟೀಕ್ಷಣವೆ ಭರತನ
ಕರೆದು ತಹುದೆಂದಶ್ವಸಹ ಯುಧಜಿತನ ಪಟ್ಟಣಕೆ || ೨೧ ||

ಹೋಗಿ ದೂತರು ಭರತಗೆಂದರು
ಬಾಗಿ ಶಿರವನು ತಮ್ಮ ಸಹಿತವೆ
ಬೇಗ ಬರಹೇಳಿದ ವಸಿಷ್ಠನಯೋಧ್ಯೆಗೀಕ್ಷಣವೆ ||
ಆಗದವಸರ ಮಾತಿಗೇಳನೆ
ಮೇಗೆ ಮಾವಗೆ ಹೇಳಿ ವಿಂಕಲ
ನಾಗಿ ಬಂದನು ದೂತಶತ್ರುಹಸಹಿತ ತಾ ನಿಲದೆ || ೨೨ ||

ರಾಮಗಾಗಲಿ ಭೂಪಗಾಗಲಿ
ಕ್ಷೇಮವೊಬ್ಬರಿಗರಿದೆನುತ್ತಿರಿ
ಭೀಮ ನೆನೆವುತ ಬರಲು ಪಟ್ಟಣ ಹಾಳುವರಿವುತಿರೆ ||
ಭೂಮಿಪನ ಮನೆಗೈದೆ ಶೋಭೆ ವಿ
ರಾಮವಾಗಿರೆ ಕೈಕೆಯೊಬ್ಬಳೆ
ಕ್ಷೇಮದಿಂ ಕುಳಿತಿರಲು ಭಕುತಿಯಲೆರಗಿದನು ಭರತ || ೨೩ ||

ಬಂದ ಭರತನ ನೋಡಿ ಹರುಷದ
ಲಿಂದುಮುಖಿ ತೆಗೆದಪ್ಪಿ ತೊಡೆಗಳ
ತಂದು ಕುಳಿರಿಸಿ ನಗುತ ಮೂರ್ಧಾಘ್ರಾಣವನು ಮಾಡಿ ||
ತಂದೆ ತಾಯಿ ಕ್ಷೇಮ ಕುಶಲವ
ನಿಂದು ಬಹುದಿನನಾಯಿತೆಂದಡ
ದೊಂದು ನೊಗಸದೆಯಾಕುಲದಲಿಂತೆಂದನಾ ಭರತ || ೨೪ ||

ತಾಯೆ ತಾತನು ಯೆಲ್ಲಿಯೊಬ್ಬಳೆ
ನೀಯಿರುತ್ತಿಹೆಯೆಂದುವಗಲದೆ
ವಾಯುಬ್ಬಿಕೊಳೆ ಕುಳಿರೆ ತಂದೆಯ ಕಾಣದೇ ಶೋಕ ||
ಆಯಿತೆನೆ ನಿನಗೇನು ದುಃಖಕೆ
ರಾಯ ಸಂದನು ತುರಗ ಮೇಧವ
ನಾಯ ತಪ್ಪದೆ ಮಾಡಿ ಪಡೆವಾ ಸುಕೃತಿಗಳ ಪದಕೆ || ೨೫ ||

ಕಂದ ತಂದೆಗೆ ದೊಡ್ಡಗತಿಯಾ
ಯ್ತೆಂದಡಾಲಿಸಿ ತಾತ ಹಾ ಯೆನು
ತಂದು ಬಿದ್ದನು ತನ್ನನೀ ದುಃಖಾರ್ಣವದಲದ್ದೀ ||
ಹೊಂದಿದ್ದೆ ರಾಘವಗೆ ರಾಜ್ಯಾ
ನಂದ ಪಟ್ಟವ ಸಹಿತ ಕಟ್ಟದೆ
ಯೆಂದು ಬಾಯರಳುತಿರೆ ನೆಗಹುತ್ತೆಂದಳಾ ಕೈಕೆ || ೨೬ ||



ಚಿತ್ರಕೂಟದಲ್ಲಿ ರಾಮನ ಪರ್ಣಶಾಲೆ



ದಶರಥನ ಪ್ರಾಣತ್ಯಾಗ

ತೊಡೆದು ಕಂಗಳ ಜಲವ ಸಂತಸ
ವಡಿಸುತೇತಕ್ಕಳುವೆ ಯೆಲ್ಲವ
ಪಡೆದು ಮಡಗಿದೆ ನಿನಗೆನಲು ತನ್ನೈಯ್ಯನಳಿವಾಗ ||
ನುಡಿಯನೇನೆನೆ ಕೈಕೆಯೆಂದಳು
ಕಡುಧೃತಿಯಲವ ರಾಮ ಹಾಹಾ
ಮಡದಿ ಸೀತೆ ಸುಮಿತ್ರ ಹಾಯೆನುತಸುವ ಜಾರಿಸಿದ || ೨೭ ||

ಜನಕ ಸಾವಾಗೇಕೆ ರಾಘವ
ಜನನಿ ಸೀತೆ ಸುಮಿತ್ರರಿಲ್ಲವೆ
ಯೆನಲು ನುಡಿದಳು ಕೈಕೆ ರಾಮಗೆ ರಾಜ್ಯ ಪಟ್ಟವನು ||
ಅನುಗೊಳಿಸೆ ಸಂಭ್ರಮದಿ ವಿಘ್ನವ
ನನುಗೊಳಿಸಿದೆನು ನಾನು ಪಟ್ಟವ
ನಿನಗೆ ಮಾಡಲಿಕೊಂದು ಯುಕುತಿಯಲದಸು ಕೇಳೆನಲು || ೨೮ ||

ವರವೆರಡನೊಲಿದಿತ್ತ ಪೂರ್ವದ
ಲರಸನವ ಕಾ ಬೇಡಿಕೊಂಡೆನು
ಧುರದ ರಾಜ್ಯವ ನಿನಗೆ ಸಲಿಸೆಂದೊಂದು ಮತ್ತೊಂದ ||
ಧರಿಸಿ ಮುನಿವೃತ್ತಿಯಸು ರಾಘವ
ನಿರಲಡವಿಯಲ್ಲೆಂದಡಿತ್ತನು
ಧರಣಿಯಲಿ ಸತ್ಯಕ್ಕೆಯವರಿಂ ರಾಜ್ಯ ನಿನಗಾಯ್ತು || ೨೯ ||

ಕಳುಹಿದನು ರಾಘವನನಡವಿಗೆ
ಬಳಿಕ ಪಾತಿವ್ರತ್ಯ ಧರ್ಮದ
ಲಿಳೆಯ ಮಗಳೂ ಹೋದಳೊಡನೆಯೆ ಲಕ್ಷ್ಮಣನು ಹೋದ ||
ತಲೆ ಹೊರೆಯ ಸಾಗಿಸಿದೆ ನಿನಗೆನೆ
ಲೆಳಲತೆಯನುರಿಹೊಡೆದು ಸುರತರು
ಕಳಲಿ ವಜ್ರದ ಹತಿಗೆ ಬಿದ್ದುದೊ ಯೆನಲು ಸೈಗೆಡೆದ || ೩೦ ||

ಧರೆಗೆ ಹೊರಳುವ ದುಃಖ ಮೂರ್ಛಾ
ತುರಗೆ ನುಡಿದಳು ಕೈಕೆ ಸಿರಿಬರೆ
ತರುಣ ದುಃಖವೆ ಯೆನಲವಳ ಸುಡುವಂತೆ ನೋಡುತ್ತ ||
ದುರುಳೆ ದುಷ್ಟೆ ದುರಾತ್ಮೆ ಗಂಡನ
ನಿರಿದ ಪಾತಕಿ ನಿನ್ನ ಬಸುರಲಿ
ಹೊರೆದು ಕೆಟ್ಟೆನೊ ಪಾಪಿಯಾದೆನೊ ಶಿವಶಿವಾಯೆಂದ || ೩೧ ||

ಕಿಚ್ಚ ಹೊಗುವೆನು ವಿಷವ ಕುಡಿವೆನು
ಚುಚ್ಚಿಕೊಂಬೆನು ವಾವ ಪರಿಯಲಿ
ಬಿಚ್ಚಿ ತನುವನು ಯಮಪುರಕ್ಕೈದುವೆನು ನೀ ಕೆಳಗೆ ||
ನಿಚ್ಚ ಕುಂಭೀಪಾಕದಲಿ ಕೆಡೆ
ಮುಚ್ಚಿ ಕೊಂದ್ಯೆ ಪತಿಯನೆನುತೆದೆ
ಗಿಚ್ಚಿಸುರಿವುತ ಭರತ ಬಂದನು ಕೌಸಲೆಯ ಮನೆಗೆ || ೩೨ ||

ಭರತನನು ಕಾಣುತ್ತ ಕಂಠವು
ಬಿರಿಯಲಳುತಿರೆ ಹೋಗಿ ಬಿದ್ದನು
ಚರಣದಲಿ ಘೋಳಿಡುತ ಗುಣನಿಧಿ ತೆಗೆದು ತಕ್ಕೈಸಿ ||
ಸುರಿವ ನೇತ್ರ ಕೃಶಾಂಗಿ ದೈನ್ಯದಿ
ಭರತಗೆಂದಳು ದೂರ ನೀ ಹೋ
ಗಿರಲಿನಿತು ಸಂತಾಪವಾಯಿತು ಮಗನೆ ಕೇಳೆನಲು || ೩೩ ||

ಕೇಳಿದ್ಯೆ ನಿಜ ಮಾತೃ ಕೃತಕವ
ಬಾಲೆ ಲಕ್ಷ್ಮಣ ಸಹಿತ ರಾಮನು
ಹೂಳೆ ಹೊಕ್ಕನು ಧರಿಸಿ ವಲ್ಕಲ ವಸನ ಜಟೆಗಳನು ||
ಆಳಿದನು ದುಃಖಾಬ್ಧಿಯಲಿ ತಾ
ತಾಳಲಾಪೆನೆ ರಾಮ ಹಾ ಕುಲ
ಪಾಲ ಹಾ ರಘುವಂಶ ಕೇತುವೆ ಯೆಂದಳಾ ತರಳೆ || ೩೪ ||

ಹುಟ್ಟಿದನು ತನಗಾದಿ ಪುರುಷನೆ
ನೆಟ್ಟನೆಂತಾದಡೆಯು ದುಃಖದಿ
ಕಟ್ಟಿದೈ ವಿಧಿಯೇ ಬಲಾಢ್ಯನು ನೀನೆನುತ್ತಿರಲು ||
ನೆಟ್ಟನಳುವವ ಕಂಡು ಭರತನು
ಕೊಟ್ಟು ಕಂಡಂಘ್ರಿಗಳ ಕೇಳೌ
ಮುಟ್ಟಿ ಕಿವಿಯಲ್ಲಿವನು ತಾ ಕೇಳಿದವನಲ್ಲೆನುತ || ೩೫ ||

ಕೈಕೆಗಾನೆಂದಿದ್ದೆಯಾವಡೆ
ಲೋಕದಲಿ ಕೇಳಿದ್ದೆಯಾದಡೆ
ಕಾಕೃತವ ರಾಮನಲಿ ಬಳಸುವ ವರ್ತಮಾನವನು ||
ತೇಕೆ ಶಪಥವ ವಿಪ್ರಶತ ವಧೆ
ದಾಕುಳಿಸಿದವ ಗುರು ವಸಿಷ್ಠನ
ನಾಕೆಯಾತನರುಂಧತಿಯ ಖಡ್ಗದಲಿ ಕಡಿವನಹೆ || ೩೬ ||

ಎಂದು ಮೊರೆಯಿಡೆ ಸತ್ಯವನು ಕೊ
ಟ್ಟಂದು ಕೌಸಲೆಯಪ್ಪಿ ಭರತನ
ಕಂದ ಶೋಕಿಸಬೇಡ ಯೆನುತಿರೆ ಗುರುವಸಿಷ್ಠಾಂಕ ||
ಬಂದನಾಗ ಸುಮಂತ ಸಹ ನೃಪ
ಮಂದಿರಕೆ ಬಿದ್ದಳುವ ಭರತಂ
ಗೆಂದನಾದರದಿಂದ ದುಃಖ ನಿವಾರಿಸಲು ಮುನಿಪ || ೩೭ ||

ಅಪ್ಪಗಳದಿರು ಭರತ ಬನ್ನಕಿದ
ಮುಪ್ಪುತನಕವು ಸತ್ಯಧರ್ಮವ
ತಪ್ಪಿ ನಡೆಯವಿವೇಕಿ ಮಾನವ ಭೋಗ ಸೌಖ್ಯವನು ||
ಯಿಪ್ಪುದುಂಡನು ಜಾನಿ ಮುಖಸಂ
ತರ್ಪಣನನು ಯಥೋಕ್ತ ದಕ್ಷಿಣೆ
ತಪ್ಪದಿತ್ತನು ಮಾಡಿ ಹಯಮೇಧಾದಿಕವನೆಂದ || ೩೮ ||

ಇಷ್ಟಿಯಿಂ ಶ್ರೀ ಹರಿಯೆ ಮಗನೆನೆ
ಹುಟ್ಟಿದನಲಾ ರಾಮ ತ್ರಿದಿವದ
ಪಟ್ಟದಿಂದ್ರಾರ್ಧಾಸನಕ್ಕೇಗೈದಿದನು ನೃಪನು ||
ನೆಟ್ಟನಿಂತವರಿಂಗಳುವರೇ
ಭ್ರಷ್ಟನರಕಿಗಳಾದದೊಡಲನು
ಬಿಟ್ಟುಕೊಂಡಳಬೇಕಧೋಗತಿಗಿಳಿದನೋ ಯೆಂದು || ೩೯ ||

ಪಾತಕಿಗೆ ಪತಿತಂಗೆ ಕೋಪಿ ವಿ
ಘಾತಿ ಹಿಂಸಾನೃತಗೆ ಡಂಭಗೆ
ನೀತಿ ಹೀನಗೆ ದೈವಗುರು ನಿಂದಕರಿಂಗಳಬೇಕು ||
ಪೂತಕರ್ಮವು ಸತ್ಯದಯ ವಿ
ಖ್ಯಾತ ಶಾಂತಿ ಕ್ಷಾಂತಿ ವಿರತಿ ಮ
ಹಾತುಮಜ್ಞತೆ ಭಕುತಿಯುಳ್ಳರಿಗಳುವದತಿ ದೋಷ || ೪೦ ||

ಭರತ ಕೇಳೇಕಳುವೆ ಶೋಕ
ಕ್ಕರುಹನಲ್ಲದ ಮೋಕ್ಷ ಭಾಗಿಗೆ
ನಿರುಪಮಾತ್ಮ ಶುದ್ಧ ನಿರವಯ ನಿತ್ಯ ನಿರ್ದ್ವಂದ್ವ ||
ಹೊರೆಯು ಜನ್ಮಾದಿ ನಾಶವುಂಟೇ
ಶರೀರಕೆಂಬೆಯೊ ಜಡವಶುಚಿ ತಾ
ನೆರವು ಕಾಲನ ತುತ್ತು ಶೋಕಕ್ಕಿಲ್ಲ ತೆರನೆಂದ || ೪೧ ||

ತಾತ ತಾಯಿ ಸುಪತ್ನಿ ಪಾವ
ಭ್ರಾತ ಪಂಡಿತ ಜಡನಿವನು ವಿ
ಖ್ಯಾತನೆಂದಡು ಮೃತ್ಯುವಶವೆಲೆ ತಿಳಿಯಲೆಲ್ಲವರು ||
ಪೋತಸಂಪದರಳುವರೊಡಲನು
ಘಾತಿಸುತ ಪಾಪಿಗಳು ಬಲ್ಲವ
ರೇತಕಳುವರು ಭವದೊಳಗೆ ನಿಸ್ಸಾರಗಂಡವರು || ೪೨ ||



ಕೌಸಲ್ಯೆಯ ಎದುರಿಗೆ ಭರತನ ಶಪಥ



ಭರದ್ವಾಜಾಶ್ರಮಕ್ಕೆ ಭರತನ ಆಗಮನ

ಸಾರವಿಲ್ಲೆನಬೇಡವೀ ಸಂ
ಸಾರವಲಿ ಬಲ್ಲವಗೆ ವಿರತಿ ವಿ
ಚಾರ ಶಾಂತಿ ಕ್ಷಾಂತಿ ದಯ ಧೃತಿ ಸತ್ಯ ನಿಷ್ಠೆಗಳು ||
ಸಾರವಲ್ಲವೆ ಕೆಡುವ ದೇಹ ವಿ
ಕಾರವನು ನೋಡುವರೆ ಕಾಲ ಸು
ನಾರಿಯಣಲಿನ ಗೋರೆ ಯೆಲ್ಲರ ದೇಹ ಕೇಳೆಂದ || ೪೩ ||

ಮರಣ ಜನಿಸಿರ್ದವರಿಗೆಂದೂ
ಪರಿಹರಿಸುವುದೆ ಪುಣ್ಯ ಪಾಪದಿ
ಹೊರದ ಕರ್ಮವು ತೀರೆ ನಿಲುವರೆ ಬಲ್ಲಬುಧರಿಂಕೆ ||
ಮುಳುಗುವರೆ ಸಾಗರದ ಜಲ ಸಹ
ಬರುತ ಹೋಹುದು ಕಲ್ಪದಲಿ ನೆರೆ
ಯುರಿಯದೇ ಬ್ರಹ್ಮಾಂಡಕೋಟಿಗಳೆಂದನಾ ಮುನಿಪ || ೪೪ ||

ಅರಳಿಯಲಿ ಗೊನೆ ಜಲದ ಬಿಂದಿನ
ಪರಿಕಣಾವಾಯುಷ್ಯ ಪೂರ್ವಾ
ಚರಿತ ಕರ್ಮಾರಬ್ಧವಿದ್ದಂತಿರ್ದು ತೀರಿದಡೆ ||
ಧರಿಸುವನು ಮತ್ತೊಂದು ದೇಹವ
ಭರದಿ ಜೀವನು ಹಳೆಯ ವಸ್ತ್ರವ
ನೆರಹು ಹರಿವಡೆ ಬಿಟ್ಟು ಹೊಸ ವಸ್ತ್ರವನು ಹೊರೆವಂತೆ || ೪೫ ||

ಹರಿಯಲಿತ್ತನ ಶೋಕವಾತ್ಮನು
ಹೊರೆಯ ಜನಿಸನು ಹೆಚ್ಚು ಸುಖಿಸನು
ಮುರಳೆ ಕುಂದನು ಸಾಯನೀ ಷಡ್ಭಾವ ವಿರಹಿತನು ||
ಹುರಿಪರಿಯ ನಾಟಕದ ಮಾಯೆಗೆ
ಮರುಳುಗೊಂಡೇ ದಿವದ ರಾತ್ರಿಯ
ನರಿಯನೀ ಸಂಕಲ್ಪನೆಂಬವ ಕನಸಿನಂತಿಹನು || ೪೬ ||

ಪರಮನೆಲ್ಲಾ ಸಾಕ್ಷಿಮಾತ್ರನು
ನಿರುಪಮನು ನಿರ್ವ್ಯಂದ್ವನಕ್ರಿಯ
ಕರಣ ವಿರಹಿತನೇಕನಮಲ ನಿರೀಹ ಚಿನ್ಮಾತ್ರ ||
ಪರಿಪರಿಯ ಗುಣಲೇಪ ಹೊದ್ದದೆ
ನಿರಿತ ಪರಮಾನಂದನಾಗಿಹ
ನರಿತಿದನು ವೃಥವಾಗಿ ಶೋಕವ ಬಿಟ್ಟು ಕಳೆಯೆಂದ || ೪೭ ||

ಏಳು ನಡೆಸು ಕ್ರಿಯೆಯ ತಂದೆಗೆ
ತೈಲದೋಣಿಯೊಳಿಟ್ಟ ಶವವನು
ಕಾಲ ಹೋಗದೆ ತೆಗೆದು ಸಚಿವರಿಂದ ತಾನೆಂದ ||
ಏಳು ಕುಲಪಾಲಕನೆ ಕರ್ಮವ
ಮೇಳವಿಸುಯೆನೆ ಗುರು ವಚನದಲಿ
ಹಾಳು ದುಃಖವ ಮರೆದು ಬಳಿಕಾ ಕ್ರಿಯೆಗೆ ವೊಗವಾದ || ೪೮ ||

ವರ ವಸಿಷ್ಠನು ಪೇಳಿದಂದದಿ
ಭರದಿ ತಂದೆಯ ತನುವನದ ಸಂ
ಸ್ಕರಿಸಿದನು ತಾನಾಹಿತಾಗ್ನಿ ವಿಧಾನಮಾರ್ಗದಲಿ ||
ಗುರುವರನು ಸಹ ಮಂತ್ರಿ ತಮ್ಮನು
ವೆರಸಿ ಯೇಕಾದಶವಹನಿಯಲಿ
ಬರಿಸಿ ವಿಪ್ರ ಸಹಸ್ರ ವೇದಜ್ಞರಿಗೆ ಬಡಿಸಿದನು || ೪೯ ||

ದಾನಮಾನವೆಥೇಷ್ಟ ವಿತ್ತ ವಿ
ಧಾನ ತಪ್ಪದೆ ನಡೆಸಿ ರಾಮನ
ನೇ ನಿರಂತರ ಚಿಂತಿಸುತ್ತನ್ಯವನು ಲಕ್ಷಿಸದೆ ||
ಹಾನಿಗಾದಳು ಮಾತೃ ರಾಕ್ಷಸಿ
ಗೇನ ಮಾಡುವೆ ರಾಮ ಲಕ್ಷ್ಮಣ
ಜಾನಕಿಯು ಸಹ ನೂಕಿದಳಲಾ ಯೆನುತ ಬಿಸುಸುಯ್ದ || ೫೦ ||

ಇಂದೆ ನಡೆವೆನು ರಾಮನಿದ್ದಾ
ನಂದಕಾನನಕಖಿ ರಾಜ್ಯದಳ
ವೃಂದವೆಲ್ಲವ ದೂರ ಬಿಟ್ಟೀಕಾಗ್ರ ಧೈರ್ಯವಲಿ ||
ಹೊಂದುವೆನು ಸೀತಾ ಸಮೇತ ಮು
ಕುಂದ ರಾಮ ಮುಖಾಬ್ಜ ಕೌಮುದಿ
ಯಂವವನುದಿನ ನೋಡಿ ಸೇವಿಸಬೇಕು ತನಗೆಂದ || ೫೧ ||

ರಾಜ ಗಣನೆಯು ಸಂಧಿ ಪದಗಳು
ರಾಜರಿಗೆ ಪ್ರತ್ಯೇಕ ಗುಣಗಣ
ರಾಜಿಸಿತು ಮತ್ತೊಂದು ಗುಣದಿಂದೆಂಬ ಸಂಖ್ಯೆಯಲಿ ||
ವ್ಯಾಜವಿಲ್ಲದೆ ಕೇಳಿ ಪಾಪದ
ಬೀಜಸಂತುರುಹುವನು ಶತರವಿ
ತೇಜ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನೊಲವಿನಲಿ || ೫೨ ||

ಅಂತು ಸಂಧಿ ೧೬ ಕ್ಕೆ ಪದ ೭೦೧ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಹದಿನೇಳನೆಯ ಸಂಧಿ

## ಭರತನು (ಪರಿಜನಸಹಿತ) ಚಿತ್ರಕೂಟದಲ್ಲಿ ರಾಮನನ್ನು ಕಂಡದ್ದು

ಸೂಚನೆ || ಭರತನಖಿಳಾಮಾತ್ಯ ಪರಿಜನ
ಬೆರಸಿ ಹಲಬುತ್ತರಸುತಾ ರಘು
ವರನ ಕಂಡನು ಬಂದು ಬಳಿಕಾ ಚಿತ್ರಕೂಟದಲಿ ||

ಪದ || ಗಿರಿಜೆ ಕೇಳು ವಸಿಷ್ಠ ಮುನಿಗಳು
ಹಿರಿಯ ಮಂತ್ರಿನಿಯೋಗಿಯಾಪ್ತರು
ನೆರೆದ ಸಭ್ಯಸದಾಸ್ಯನೃಪಪುರ ಪೌರವಾಸಿಗಳು ||
ವರಸುವಿಪ್ರರು ಸಹಿತ ನೃಪ ಸಭೆ
ಭರಿತವಿಂದ್ರ ಸಭೋಪ ಮೊದಲಿರೆ
ಗುರುನಡುವೆ ಕುಳಿತಿರ್ದನೆರಡನೆಯಜನೊ ಯೆಂಬಂತೆ ||೧||

ಕರಸಿದಡೆ ಶತ್ರುಘ್ನ ಸಹಿತವೆ
ಭರತ ಬಂದನು ಸಭೆಗೆ ನಮಿಸಿರೆ
ಗುರು ವಸಿಷ್ಠನು ದೇಶಕಾಲೋಚಿತ ವಿಶೇಷವನು ||
ಕರುಣಿ ನುಡಿದನು ಮಗನೆ ಪಟ್ಟವ
ವಿರಚಿಸುವೆ ನಿನಗೆಂದು ಬೇಡಿದ
ವರವಲಾ ಕೈಕೇಯಿ ನಿಜಪಿತೃ ಶಾಸನವು ನಿನಗೆ ||೨||

ಬೇಡಿದಳು ನಿಜಮಾತೃ ನೀನೇ
ಮಾಡಬೇಕೆಂದೆನುತ ರಾಜ್ಯವ
ಕೊಡಿವೋಗದೆ ಕೊಟ್ಟ ನೃಪ ಸತ್ಯಪ್ರತಿಜ್ಞೆಯಲಿ ||

ಮಾಡುವೆನು ಪಟ್ಟವನು ಮುನಿಗಳು
ಕೂಡಿ ಮಂತ್ರೋಕ್ತದಲೆನಲು ಕಡೆ
ಗೋಡಿವರಿವಶ್ರುಗಳಲೆಂದನು ಭರತ ಗುರುವಿಂಗೆ ॥ ೩ ॥

ಅರಸುತನವೇಕೆನಗೆ ನೃಪಕುಲ
ದರಸಲಾ ಶ್ರೀರಾಮನಾತನ
ಚರಣ ಕಿಂಕರರಾವು ನಾಳೆಗೆಯುದಯಕಾಲದಲಿ ॥
ತೆರಳಿ ನಾವೆಲ್ಲನರು ನಿಮ್ಮಡಿ
ವೆರಸಿ ಕೌಸಲೆ ಸಹಿತ ರಾಮನ
ಕರೆದು ತರಬೇಕಿರಲಿ ರಾಕ್ಷಸಿ ಕೈಕೆ ಹೊರತಾಗಿ ॥ ४ ॥

ಇರಿದು ಕಳೆವೆನೆ ಕೈಕೆಯಿವಳನು
ಬರಿದೆ ಮಾತೃಗೃಂಥಿ ರೂಪಿಣಿ
ಯಿರಿವಡೆನ್ನನು ರಾಮನೊಳಗೊಳ ಸ್ತ್ರೀವಧಘನೆಂದು ॥
ಅರುಣನುದಯದಿ ನಾಳೆ ಹೋಹೆನು
ಚರಣ ಚಾರದಿ ದಂಡಕಾಸನ
ಕಿರದೆ ಬೇಗದಿ ಶತ್ರುಜಿತ ಸಹಿತೆಂದನಾ ಭರತ ॥ ೫ ॥

ಬನ್ನಿ ನೀವಿಲ್ಲಿರಿಯೆನಿಪ್ಪುದ
ನ್ನೆನ್ನೆ ನಿವೊಡನೆಂದು ಗುರುವಿಗೆ
ತನ್ನ ಹೃದಯದಿ ರಾಮ ಚಿಂತೆಯಲಿರುಲು ಮೌನದಲಿ ॥
ಅರ್ನವದ ಘೋಷದಲಿ ಸಭೆ ಸಂ
ಪನ್ನ ಭರತನ ಹೊಗಳೆಂದಾದಿನ
ವನ್ನು ಕಳಿದುದಯದಲಿ ಭರತನು ಪಯಣಕನುವಾದ ॥ ೬ ॥

ವರ ಸುಮಂತನ ನೇಮದಿಂ ಕರಿ
ತುರಗ ರಥ ಪಾದಾತಿ ಪರಿಜನ
ವೆರಸಿ ಕೌಸಲೆ ಮುಖ್ಯನಾರಿಯರಾಪ್ತರೊಡಗೊಂಡು ॥

ಗುರು ವಸಿಷ್ಠಪ್ರಮುಖ ವಿಪ್ರರು
ವೆರಸಿ ಧರೆಯಗಲದಲಿ ಸಂದಣಿ
ಭರಿತ ಭರತನ ಸುತ್ತವಳೆಯದಲೈದಿತೊಗ್ಗಿನಲಿ ॥ ೭ ॥

ಶೃಂಗವೇರಾಪುರಕೆ ನಡೆದಾ
ಗಂಗೆಯೀ ತಡಿಯಲ್ಲಿ ಸೈನಿಕ
ಸಂಗಡಿಸಿ ಬಿಟ್ಟಿರಲು ಶತ್ರುಘ್ನಾಂಕನಾಜ್ಞೆಯಲಿ ॥
ಕಂಗೆಡುತ ಗುಹ ಕೇಳಿ ಸೇನಾ
ಜಂಗುಳಿಯ ಸಹಿತಿಲ್ಲಿಗೀತ
ಕ್ಕಂಘವಿಸಿದನೊ ಭರತನೆನುತವೆ ಮನದಿ ಶಂಕಿಸಿದ ॥ ೮ ॥

ಪಾತಕವನೇನಾದರೂ ಪರ
ಮಾತುಮ ಶ್ರೀ ರಾಮಚಂದ್ರಂ
ಗೀತನೆಸಗಲು ಬಂದನಿವನೆಂತಸ್ಥವರಿವನ್ನ ॥
ಪೋತವಸು ತರಬೇಡ ವಾಯುಧ
ವಾತುಕೊಂಡಿರಿಸುತ್ತ ನೋಡುತ
ಜಾತಿಗಳು ನೀವೆಲ್ಲ ಸೌವ್ವರಿಸುತ್ತ ಮಾರ್ಗದಲಿ ॥ ೯ ॥

ಎಂದು ತನ್ನವರಿಂಗೆ ಗುಹನೈ
ತಂದು ಭರತನ ಹೊರಗುಪಾಯನ
ವೃಂದ ಸಹಿತೆಡಬಲದಲಾಯುಧವಿಡಿದ ಭಟರೊಡನೆ ॥
ತಂದ ಕಾಣಿಕೆಯಿರಿಸಿ ಭರತನ
ಮುಂದೆ ಕಂಡನು ಮನುಜ ಮಂತ್ರಿಗ
ಳಿಂದ ಸಹ ಕುಳ್ಳಿರಲು ರಾಮಪದಾಬ್ಜ ಚಿಂತೆಯಲಿ ॥ ೧೦ ॥

ನೀಲಮೇಘದ್ಯುತಿಯ ನಯನೋ
ನ್ಮೀಲಿಕೇಕ್ಷಣ ದುಃಖ ಚೀರದ
ಚಾಳ ಜಟೆಗಳ, ರಾಮ ರಾಮಾ ರಾಮ ಸಿರಿ ರಾಮ ॥

ಕಾಳು ಮಾಡಿತು ನನ್ನನಗಲಿಸಿ
ಕಾಲಗತಿ ಕಾನಾರಿಗೆಂದೆನು
ಪಾಲಿಸಾನಪರಾಧಿಯೆನುತಿರೆ ಗುಹನು ಬೆರಗಾದ ॥ ೧೧ ॥

ಬಿದ್ದು ಪದದಲಿ ಗುಹನು ನಾನೆನೆ
ಲೆದ್ದು ತಕ್ಕಿಸಿ ಬಿಡಲರಿಯದ
ನ್ನಿದ್ರಮತಿ ಬಾ ತಮ್ಮ ಬಾರಾ ಸಖಿಯೆ ಬಾ ಯೆನುತ ॥
ಬದ್ದುದಕೆ ನೀನೇಸುಕೃತಿ ಮುನಿ
ಹೃದ್ಯರಾಮನು ನೋಡಿ ನಿನ್ನನು
ಹೊದ್ದಿಯಾಲಿಂಗಿಸಿದನಲ್ಲೈ ಯೆಂದನಾ ಭರತ ॥ ೧೨ ॥

ಎಲ್ಲಿ ಕಮಲದಳಾಕ್ಷ ರಾಮನು
ವಲ್ಲಭೆಯ ಸಹಿತನುಜನೊಡ ನಿ
ದ್ದೆಲ್ಲಿ ಮಲಗಿವನಿರುಳು ತೋರಾ ಸ್ಥಳವ ನೀನೆನಗೆ ॥
ಇಲ್ಲಿ ನೀನೆ ಸಭಾಗ್ಯ ರಾಮನ
ಸಲ್ಲಲಿತ ಸಂಭಾಷಣಪ್ರಿಯ
ಕುಳ್ಳನಾದೆಯನುತ್ತ ಮರುಗಿದನೆಶ್ರುಧಾರೆಯಲಿ ॥ ೧೩ ॥

ಎನುತ ಗುಹನೊಡನೈದಿ ಕಂಡನು
ಜನಕ ಸುತೆ ಸಹಿತೊಂದು ಪುರದಡಿ
ಯನುಪಮನು ಮಲಗಿದ್ದ ದರ್ಭಾಸ್ತರಣ ಪಾತ್ರದಲಿ ॥
ಕನಕ ಬಿಂದುಗದಲ್ಲಿ ಸೀತಾಂ
ಗನೆಯ ದಿವ್ಯಾಭರಣಯುಮುರಿ
ದ್ದನುವ ಕಾಣುತ ಮತ್ತೆ ಭರತನ ಶೋಕ ಮರುಕೊಳಿಸಿ ॥ ೧೪ ॥

ಚೆನ್ನೆ ಚಲುವಿನ ಕಣಿ ಜನಕ ಸುತೆ
ತನ್ನ ಪತಿಯೊಡನುಪ್ಪರಿಗೆಯಲಿ
ಸ್ವರ್ಣ ಪರಿಯಂಕದಲಿ ಮೃದುತಲ್ಪದಲೊರಗುವವಳು ॥

ನೆನ್ನ ದೆಸೆಯಿಂ ಕಲುನೆಲದಿ ಕುಶ
ಪರ್ಣದಲ್ಲೊರಗಿದಳೆ ಸುಡು ಸುಡು
ತನ್ನ ಜಲ್ಮವ ಪಾಪಿ ಕೈಕೇಯೊಡಲ ಪಾತಕಿಯ ॥ ೧೫ ॥

ಆವುದೆನ್ನ ನಿಮಿತ್ತ ದುಃಖವ
ನಾದಿಪೂರುಷ ರಾಮಚಂದ್ರಗೆ
ಛೇದಕಾರಣನಾದೆ ನಾ ಲಕ್ಷ್ಮಣನು ರಾಘವನ ॥
ಪಾದವೇ ಗತಿಯಾಗಿ ವನಕೊಡ
ನೈದಿವನು ಸಾಕ್ಷಾತ್ಪರಮಾತ್ಮನ
ಹೋ ದಯಾಳುವೆ ನಿನ್ನ ಭೃತ್ಯರ ಭೃತ್ಯ ನಾನೆಂದ ॥ ೧೯ ॥

ಇತ್ತಲಾನಾ ರಾಮ ಭೃತ್ಯರ
ಭೃತ್ಯನಾದಡೆ ಜನ್ಮ ಸಫಲವೆ
ನುತ್ತ ಹೇಳ್ಕೆ ಸಖಿಯೆ ಬಲ್ಲಡೆ ರಾಮನೆಲ್ಲಿಹನು ॥
ಅತ್ತಲೆನ್ನನು ಕರೆದು ರಾಮನ
ಹತ್ತಿರೈದಿಸು ಯೆನಲು ಭರತನ
ಭಕ್ತಿ ಹೃದಯಕೆ ಮನ ಕರಗಿ ಗುಹನೆಂದನಿಂತೆಂದ ॥ ೧೭ ॥

ದೇವ ನೀನೇ ಧನ್ಯ ಭಕ್ತಿ ದೃ
ಢಾವಲಂಬನನಹುದಹುದು ರಾ
ಜೀವ ಲೋಚನ ರಾಮ ಲಕ್ಷ್ಮಣ ಸೀತೆ ಸಹವಾಗಿ ॥
ಆ ವಿಮಳಗಿರಿ ಚಿತ್ರಕೂಟ ಮ
ಹಾ ವಿಪಿನ ಗಂಗಾ ಸಮೀಪದಿ
ಭಾಮೆ ಲಕ್ಷ್ಮಣರಿಂದ ಮುನಿಗಳ ನಡುವೆ ಸುಖವಿಹನು ॥ ೧೮ ॥

ಹೋಗುವವೆ ನಾವೀಗಳಲ್ಲಿಗೆ
ಬೇಗ ಗಂಗೆಯ ಕಳಿವವೆನುತವೆ
ಸಾಗಿಸಿದ್ದೈನೂರು ದೋಣಿಯ ತಂದು ಗುಹ ಬಳಿಕ ॥

ಸಾಗರೋಪಮ ಗಂಗೆಯನು ಸಸು
ಲಾಗ ತಪ್ಪದೆ ಸಕಲ ಸೈನ್ಯ ನಿ
ಯೋಗಿ ಮುಖ್ಯರು ಸಹಿತ ದಾಂಟುತ್ತಿದ್ದುದಾ ತಡಿಗೆ ॥ ೧೯ ॥

ಒಂದಶಿ ದೃಢ ನಾವೆಯನು ತಾನೇ
ತಂದು ಗುರುವನು ರಾಮ ಮಾತೆಯ
ರಂದೊಡನೆ ಕೈಕಾ ಸುಮಿತ್ರೆಯರನು ಭರತ ಸಹಿತ ॥
ಹೊಂದಿಗೆಯ ಶತ್ರುಘ್ನರನು ಭರ
ದಿಂದ ದಾಂಟಿಸಿಯಾಚೆಗಿಳಿದೈ
ತಂದರತಿ ಬೇಗದಲಿ ಭಾರದ್ವಾಜನಾಶ್ರಮಕೆ ॥ ೨೦ ॥

ದೂರ ಸೇನೆಯ ಹೊರಗಿರಿಸಿಯೇ
ಧೀರ ಭರತನು ತಮ್ಮ ಸಹಿತಾ
ವೀರ ಮುನಿಯೊತ್ತಿಂಗೆ ಭಕುತಿಯದಿಂದ ನಡೆತರುತ ॥
ಚಾರು ತೇಜೋನಿಧಿಯ ಕಂಡನು
ಸೂರಿಯಾನಲರಂತೆ ರಾಮ ಪ
ದಾರವಿಂದ ಧ್ಯಾನದಲಿ ಕುಳಿತಾ ಮುನೀಶ್ವರನ ॥ ೨೧ ॥

ಕಂಡು ಭರತನು ಮುನಿಪದದ್ವಯ
ಪುಂಡರೀಕದಿ ಭಕುತಿ ಭಾರದಿ
ದಿಂಡುಗೆಡೆವಾಷ್ಟಾಂಗ ಸನ್ನತಿಯಿಂದಿರಲು ನೋಡಿ ॥
ಚಂಡ ಮುನಿಯವರಾರು ದಶರಥ
ಮಂಡಲೇಶಾತ್ಮಜರೆ ಸಾರೇ
ನಂಡನಲೆಯೆನುತುಚಿತ ಸತ್ಕಾರದಲಿ ಪೂಜಿಸಿದ ॥ ೨೨ ॥

ಇತ್ತಲೇನು ನಿಮಿತ್ತ ಬಂದಿರಿ
ಸ್ವಸ್ತಿಯೇ ನಿಮಗಾಪ್ತ ಪರಿಜನ
ಕುತ್ತರೋತ್ತರವೆಳೆ ಜಗತ್ಪಾಲಕನು ನಿಜೇಶ ॥

ವೃತ್ತಿ ತಪ್ಪದಲೇನಡವಿಗು
ದ್ವೃತ್ತರಾದಿರಿ ವಲ್ಕಲಾಂಬರ
ಶಾಸ್ತ್ರವೇ ಜಟಿ ನೃಪರ ಭೋಗಕ್ಕೆಂದನಾ ಮುನಿಪ ॥ ೨೩ ॥

ಜನಪರಿಂಗೀ ಮುನಿಯ ವೇಷಾ
ಜಿನ ಜಟೆಯ ಹೊರಲೇನು ಕಾರಣ
ವನಕೆ ಬಂದಿರಿ ಮುಪ್ಪಿನವರೇ ಯೌವ್ವನಾಗತರು ॥
ಮುನಿ ನಿವೇಷ್ಯದಲೇನು ಕಾರಣ
ವೆನಲು ಕೇಳುತ ಕಣ್ಣುನೀರಲಿ
ನೆನೆದು ತನುಗಳವನುಸರಣಲೆಂತೆಂದನಾ ಭರತ ॥ ೨೪ ॥

ಎಲ್ಲವನು ನೀ ಬಲ್ಲೆ ಲೋಕವ
ಲುಳ್ಳದನು ಮತ್ತರಿಪು ಕೇಳುವು
ದಿಲ್ಲಿ ತನಗೆಯನುಗ್ರಹವಲಾ ಮುನಿಪ ನಿಮ್ಮಡಿಗೆ ॥
ಸೊಲ್ಲಿಸುವೆ ನಾನೇನ ಕೈಕೆಯ
ಖುಲ್ಲ ಕೃತಕದ ಕರ್ಮದಲಿ ರಘು
ವಲ್ಲಭ ಶ್ರೀ ರಾಮ ರಾಜ್ಯ ವಿಘಾತಿಯಾಯ್ತೆಂದ ॥ ೨೫ ॥

ವನಕೆ ರಾಮನ ಕಳುಹುವುದ ನಾ
ಮನವಚನದಿಂದರಿಯೆ ಕೇಳೆನು
ಮುನಿಪ ಮಾಡುವೆನಾವ ಶಪಥವನಾದಡೀಕ್ಷಣವೆ ॥
ಯೆನುತ ಭಾರದ್ವಾಜನಂಘ್ರಿಯ
ನನುಪಮನು ಮುಟ್ಟಿದನು ನೀನೇ
ಮನದಲರಿ ನಾನರಿಯೆ ಕ್ಷುದ್ರನೊ ಶುದ್ಧನೋ ಯೆಂದು ॥ ೨೬ ॥

ಸ್ವಾಮಿ ಚಿತ್ತವಿಸೆನಗೆ ರಾಜ್ಯದ
ಕಾಮದಲ್ಲ್ಯಕುದೇನು ಸಾಕ್ಷಾ
ದ್ರಾಮನಿರೆ ರಾಜಾಧಿರಾಜನನಂತ ಗುಣಮಹಿಮ ॥

ಸೋಮಸನ್ನಿಭನಾರ್ತಜನ ಸು
ಕ್ಷೇಮ ಸಾನಂದಾಬ್ಧಿ ನಿರುಪಮ
ನಾಮನಾಥನ ಭೃತ್ಯ ಭೃತ್ಯರ ಭೃತ್ಯ ನಾನೆಂದ || ೨೭ ||

ಈಗ ರಾಮಾಂತಿಕಕೆ ಬೇಗದಿ
ಹೋಗಿ ನಾ ಕರ್ತಂಬದಯೋಧ್ಯೆಯ
ಲಾಗಿಸಿದ ಸಂಭಾರದಲಿ ಪಟ್ಟಾಭಿಷೇಕವನು ||
ಆ ಗುರೂತ್ತಮ ಮಂತ್ರವರ್ಯನಿ
ಯೊಗಿ ಜನಸಹ ಮಾಡಿದಡೆಸದೆ
ಭೋಗಯೋಗದ ಸಿದ್ಧಿ ತನಗೆಂದನು ಮುನೀಶ್ವರಗ || ೨೮ ||

ಬಂದು ರಾಮ ಪದಾಂತಿಕದಿ ಬಿ
ಡ್ದೊಂದುವನು ತಾನೊಲ್ಲದೇ ಕರ
ತಂದು ಪಟ್ಟವ ಕಟ್ಟಿ ಕಟ್ಟಿಗೆವಿಡಿದು ದೂರದಲಿ ||
ನಿಂದು ನಿಃಚಾಂಗದಲಿ ಭಜಿಸುವೆ
ಸಂದೆಹವೆ ಹಾ ರಾಮ ಹಾ ರಘು
ನಂದನಾ ನೀ ಬಲ್ಲೆ ಯೆಂದಳುತೀರ್ದನಾ ಭರತ || ೨೯ ||

ಇಂತೆನಲು ಮುನಿ ಕೇಳಿ ಭರತನ
ಚಿಂತೆಯನು ತಾನೆದ್ದು ತಕ್ಕೈಸಿ
ನಿಂತ ಮೂರ್ಧಾಘ್ರಾಣವನು ಮಾಡುತ್ತ ಹರ್ಷದಲಿ ||
ಚಿಂತಿಸದಿರೆಲೆ ಮಗನೆ ದೈವದ
ತಂತ್ರವಿದು ನೀ ಶುದ್ಧನೆಂದೇ
ನಂತರವೆ ತಾ ಬಲ್ಲೆನಾತ್ಮಜ್ಞಾನ ದೃಷ್ಟಿಯಲಿ || ೩೦ ||

ಶೋಕವೇತಕೆ ರಾಮ ಲಕ್ಷ್ಮಣ
ರೇಕವಲ್ಲೈ ನಿನಗೆ ಪ್ರಿಯದಲಿ
ಬಾ ಕುಳಗನೇ ನೀನು ರಾಮ ಪ್ರಾಣ ಭಕುತರೊಲ

ನೂರು ರಾತ್ರಿಯಹಲ್ಲಿ ಸೇನಾ
ನೀಕ ಸಹ ನಾಳ್ಕಿದಿ ಕಂಡಹೆ
ನಾಕ ನಿಳಯಾರ್ಚಿತನನೆಂದನು ಸಂತವಿಸಿ ಮುನಿಪ ॥ ೩೧ ॥

ಏನುವೆನೆ ನಿಮ್ಮಡಿಯ ನುಡಿಯೇ
ದಾರಿ ತನಗೆಂದಿರಲು ಭರತನು
ದಾರ ಮುನಿಕರಚರಣಯುಗವನು ತೊಳೆದು ಮೌನದಲಿ ॥
ಸೇರಿ ಹೋಮದ ಪೊಳಗೆ ಕುಳಿತಾ
ಗಾರು ಬಲ್ಲರು ಮುನಿಯ ಮಹಿಮೆಯ
ಸೋರೆ ಕರೆದನು ಕಾಮಧೇನುವ ಕಾಮಿತಪ್ರದವ ॥ ೩೨ ॥

ದಿವ್ಯ ದಧಿ ಘೃತ ಪಕ್ವ ಪಾಯಸ
ದಿವ್ಯ ನಾನಾ ಭೋಗವೆಲ್ಲವು
ದಿವ್ಯವಲ್ಲವದೊಂದು ಮಾನುಷ ಭೋಗವೇ ಯಿಲ್ಲ ॥
ನವ್ಯ ನವ್ಯವ ಕರಕರದು ಪಡೆ
ಸೇವ್ಯವೆನೆ ಸಲಿಸಿದನು ಬಳಿಕವ
ರವ್ವೆಗಳು ಶತ್ರುಘ್ನ ಭರತರಿಂಗುಳ್ಳೈಭೋಚಿತವ ॥ ೩೩ ॥

ವರ ವಸಿಷ್ಠನ ಮೊದಲು ಶಾಸ್ತ್ರೀ
ಶ್ಕರದಲರ್ಚಿಸಿ ಷೋಡಶಾರ್ಚನೆ
ವೆಸಸಿ ಬಳಿಕಾನಂತ ಸೇನೆಯನೆಲ್ಲವನು ವಣಿಸಿ ॥
ಕರೆಕರೆದು ಪ್ರತ್ಯೇಕದಿಂದನು
ಚರರೊಳೊಬ್ಬರು ಉಳಿಯದೆಲ್ಲರು
ಭೂತವೆನಲುಂಡುಂಡು ರಾತ್ರಿಯಲಿದ್ದರಂದಲ್ಲಿ ॥ ೩೪ ॥

ದಣಿಸಿದನು ಪಡೆಯೆಲ್ಲವನು ಮುನಿ
ದಣಿಯೆ ದಿವ್ಯಾನ್ನಾದಿ ಭೋಗದಿ
ಯೆಣಿಸಿ ಜಪ ಮಂತ್ರಾರ್ಥ್ಯಪೂರ್ವಕವಾಗಿಯಾದರಿಯು ॥

ವಣಿಸನೇ ತನ್ನುವನ ನೋಳ್ಪನು
ಭಣಿತಿಯೆಸು ತಾನೆಸುತಲಾದಿನ
ಮಣಿಯುದಯಗಿರಿಯಗ್ರದಲಿ ರಥವೇರಿ ನಡೆತಂವ ॥ ೩೫ ॥

ಅಮರರಂತಲ್ಲೀರ್ದುದಯದಲಿ
ನಮಿಸಿ ಮುನಿನೇಮವನು ಕೊಂಡಾ
ಕ್ರಮದಿ ಭರತಾದಿಗಳು ನಡೆದರು ಚಿತ್ರಕೂಟಕ್ಕೆ ॥
ರಮಣರಾಮನ ದರ್ಶನಾರ್ಥಿಯ
ಲಮಮ ವೇಗದಿ ಹೋಗಿ ಸೈನ್ಯೋ
ತಮವನೆಲ್ಲವ ಹೊರಗಿರಿಸಿ ಮುಂದೈದಿದನು ಭರತ ॥ ೩೬ ॥

ವರವಸಿಷ್ಠ ಸುಮಂತ ಶತ್ರು
ಘ್ನರು ಗುಹನು ಸಹಿತಾ ಮುನೀಂದ್ರರ
ನಿರುಪಮಾಶ್ರಮದೊಳಗೆ ನೋಡುತ್ತರಸಿ ಕಾಣದಿರೆ ॥
ಕರೆಕರೆದು ಕೇಳುವನು ಶ್ರೀ ರಘು
ವರನಿಹಾಶ್ರಮ ವಾವೆಡೆಯಲೆ
ನ್ನರಸ ಸೀತಾ ಲಕ್ಷ್ಮಣರು ಸಹಿತೆಂದು ಋಷಿವರರ ॥ ೩೭ ॥

ಎಂವಡೊಂದರು ಋಷಿಗಳಿವೆಯಿದೆ
ಮುಂದೆ ಗಂಗಾತೀರದಲಿ ರಘು
ನಂದನಾಶ್ರಮವಿತ್ತುದ ತಟದಲ್ಲಿನಲು ಕೇಳಿ ॥
ಮುಂದೆ ಬರೆ ಬರಲಾ ನೃಪನ ಪವ
ವೃಂವಕವಳೀಚೂತ ಚಂಪಕ
ಚಂವಬಕುಳವು ಕೋವಿದಾರ ಸುಗಂಧಯುತ ವನವ ॥ ೩೮ ॥

ಪರಿಪರಿಯ ಫಲಪುಷ್ಪ ಮೋದಾಂ
ಕುರ ತಳಿರ್ಗಳಲೆಸೆಯೆ ನೋಡುತ
ಭರತ ಹರುಷವಲ್ಲೈದಿ ಗುರುಮಂತ್ರ್ಯನುಜ ಸಹವಾಗಿ ॥

ದರುಶನದಿ ದೂರದಲಿ ಕಂಡನು
ಪರಮಶೋಭಾಮಂದಿರವನಾ
ದರದಿ ವೃಕ್ಷಾಗ್ರದಲಿ ಹರಹಿದ ವಲ್ಕಲಾಜಿನದ ॥ ೩೯ ॥

ಗಿರಿಜೆ ಕೇಳ್ಳೆ ಮುನಿಮನಂಗಳ
ಪರಿವೃತದ ಮಧ್ಯದಲಿಯೊಪ್ಪುವ
ವರ ರಘೂದ್ವಹನಾಶ್ರಮವನೀಕ್ಷಿಸುತನುಜ ಸಹಿತ ॥
ಬರಲು ಮುಂದೆ ಸಮೀಪದಲಿ ಸಂ
ಸ್ಫುರಿಸಿ ಸುತ್ತಲು ಶೋಭಮಾನದಿ
ಹರದ ಸೀತಾರಾಮ ಚರಣಾಂಕಿತವಿರಲು ಕಂಡ ॥ ೪೦ ॥

ಅಂಕುಶದ ಧ್ವಜ ವಜ್ರಯವಲತೆ
ಪಂಕಜಾರಿ ಸುಶೋಭ ಮಾನಾ
ಲಂಕೃತದ ಪಾವನ ಪರಾಗವ ಕಂಡನುಜ ಸಹಿತ ॥
ಶಂಕರನ ಕೃಪೆಯಾಯಿತಹಹಾ
ತಂಕ ಬೀತುದು ಬದುಕಿದೆನು ಬಾ
ಪಂಕೆಗಂಡವರಾರು ತನ್ನ ಸುಧನ್ಯತೆಯಲೆಂದ ॥ ೪೧ ॥

ಅರರೆ ಧನ್ಯರದಾರು ತನ್ನಂ
ತಿರಲಿದೇ ಗೋಚರಿಸಿತೀ ಪದ
ಸರಸಿರುಹ ಸಂಲಗ್ನ ಲಾಂಛನ ಧೂಳಿದನು ನೆನೆಮ ॥
ವರ ಮುನೀಂದ್ರರು ಕಾಣರಜಭವ
ಸುರರು ಸಹ ವೇದಾಂತ ಮಸ್ತಕ
ಮರಳಿದವಲಾ ತಾನಿದಾವನೊ ಕಂಡೆನಿದನೆಂದ ॥ ೪೨ ॥

ಬದ್ದುದಕೆ ಫಲವಾಯ್ತು ಹಿರಿಯರ
ಹೊದ್ದಿದಕೆ ಫಲವಾಯ್ತನುಜನಾ
ಗಿರ್ದುದಕೆ ಫಲವಾಯ್ತೆನುತ್ತಡಿಗಡಿಗೆ ಹರ್ಷದಲಿ ॥

ಬಿದ್ದನಾ ಶ್ರೀರಾಮಚಂದ್ರ
ಪದ್ವಯದ ಲಾಂಛನದ ಹುಡಿಯೊಳ
ಗದ್ದಿಯೊಡಲನ ಪ್ರೇಮ ಗಾಢಾಲಿಂಗನವಲೆಸೆದ ॥ ೪೩ ॥

ಬಳಿಕ ಪರಮಾನಂದ ಬಾಷ್ಪಾ
ವಳಿಯ ಗದ್ಗದಗಳಾಕ್ಷರ
ದೊಲವು ಕಾಯುವಲ್ಲೈದಿ ಮೆಲ್ಲನೆ ಮುಂದೆ ಬರಬರಲು ॥
ಹೊಳೆವ ಸೂರ್ಯ ಸಹಸ್ರ ಕಾಂತಿಯ
ಕಳೆಯೊಡಲ ಚತುರತೆಯ ನೀಲದ
ಲುಳಿಯುಕೋಮಲ ಶಾಮಳಾಂಗನ ಕಂಡನಾ ಭರತ ॥ ೪೪ ॥

ನಸುನಗೆಯ ಘುಮುಖಾಬ್ಜದಾಯತ
ಯಸಳುಗಂಗಳ ವಲ್ಕಲದ ಸವ
ವಸನ ದಿವ್ಯ ಜಟಾಕಿರೀಟದಲಿರೆ ವಿನೋದವನು ॥
ವಸುಧೆಯಾತ್ಮಜೆಯೊಡನೆ ಯೋಜಿಪ
ಲಸಮ ಚರಣವ ಲಕ್ಷ್ಮಣನು ಸೇ
ವಿಸಲು ಕಾಣುತ ಭರತ ಬಂದನು ರಾಮ ಶರಣೆನುತ ॥ ೪೫ ॥

ಆಯಿತಿಲ್ಲಿಗೆ ಸಂಧಿ ಲೆಕ್ಕವು
ರಾಯರಿಂ ಮೇಲೊಂದು ನಾಲ್ವ
ತ್ತಾಯಿತಾರಧಿಕವೆನೆ ಪದಗಳು ರಾಮ ಚರಿತವಲಿ ॥
ಮಾಯೆಯಿಲ್ಲದೆ ಕೇಳಲಬುಜದ
ಳಾಯುತಾಂಬಕನವರ ಕರುಣಾದಿ
ಶಾಯ್ವಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹನೊಲವಿನಲಿ ॥ ೪೬ ॥

ಅಂತು ಸಂಧಿ ೧೭ಕ್ಕೆ ಪದ ೭೪೭ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ
ಶ್ರೀ ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ಹದಿನೆಂಟನೆಯ ಸಂಧಿ

## ರಾಮನು ಭರತನನ್ನು ಸಮಾಧಾನಪಡಿಸಿದ್ದು

ಸೂಚನೆ ॥ ರಾಮಪಿತೃ ಮರಣವನು ಕೇಳಿ
ದ್ದಾ ಮಹಾಮತಿ ಭರತನನು ಸು
ಪ್ರೇಮದಲಿ ಸಂತವಿಸುತಿದ್ದನು ಚಿತ್ರಕೂಟದಲಿ ॥

ಪದ ॥ ಕೇಳು ಪಾರ್ವತಿ ಭರತನಾ ಶ್ರೀ
ಲೋಲ ರಾಮನ ಕಂಡು ಹರುಷೋ
ನ್ಮೀಲಿತೇಕ್ಷಣನಾಗಿ ಮರಿದತಿ ವೇಗದಲಿ ಬಂದು ॥
ಘೋಳಿಡುತ ಚರಣಾರವಿಂದಕೆ
ಮೇಳವಿಸಿ ನಿಜತನುವ ಹಿಡಿದನು
ಕಾಲನೆರಡನು ಭಕುತಿಯಲಿ ಸಿರಿರಾಮ ಸಲಹೆನುತ ॥ ೧ ॥

ಬಳಿಕ ಭರತನನೆತ್ತಿ ರಾಮನು
ಸೆಳೆದು ತಕ್ಕೈಸಿದನು ದೀರ್ಘಾ
ಜ್ವಲಿತ ಬಾಹುಗಳಿಂದ ಬಿಗಿದಾನಂದ ಜಲದಿಂದ ॥
ಗಳಿತ ನೇತ್ರದಲಂಗ ಭಿತ್ತಿಯ
ತೊಳೆದು ತೊಡೆಯಲಿ ಕುಳ್ಳಿರಿಸಿಕೊಂ
ಡೊಲವು ಮಿಗೆ ಅಡಿಗಡಿಗೆ ಸರ್ವೇಶ್ವರನು ಮೈದಡವಿ ॥ ೨ ॥

ಆ ಸಮಯದಲಿ ಬಂದರಾಗಳೆ
ಕೌಸಲಾ ಕೈಕಾ ಸುಮಿತ್ರೆಯ
ರಾಸರರಸಿ ಜಲಾಂತಕಯ್ದುವ ಗೋವಿನಂದದಲಿ ॥

ಬೀಸರದ ಬಹ ಲಾಯು ಕಾಣು
ತ್ರಾಸನವನುಳಿದೆದ್ದು ಧಿಗಿಲನೆ
ಭಾಸುರ ಶ್ರೀರಾಮನೆರಗಿದನಾಗಳಂಘ್ರಿಯಲಿ ॥ ೩ ॥

ನಮಿಸಲೆತ್ತಿದಳೊಲಿದು ತಕ್ಕೈಸಿ
ಕಮಲ ಮುಖಿ ರಾಮಾಂಗರಾಗವ
ನಮವು ತೊಳೆವಳು ಹಳವಿಸುತ ದುಃಖಾಶ್ರು ಜಲದಿಂದ ॥
ಅಮರನುತ ಕೈಕಾ ಸುಮಿತ್ರೆಗೆ
ನಮಿಸಿರಲಿ ಕನ್ನಗರ ಕಂಡನು
ವಿಮಳಗುಣವರ್ಯನ ವಸಿಷ್ಠ ಮಹಾ ಮುನೀಶ್ವರನ ॥ ೪ ॥

ಎರಗಿ ಸಾಷ್ಟಾಂಗದಲಿ ನುಡಿದನು
ಹರಹರಾ ಕೃತಕೃತ್ಯನಾದೆನು
ಗುರುವೆಯೆನುತಾಸನವನಿತ್ತುಚಿತಂಗಳನು ಮಾಡಿ ॥
ಬರವಿದೆನ್ನಲಿ ನೇಹವಾಯಿ
ತ್ತರಸನೆಂತಿಹನೆನ್ನನಗಲಿದ
ಭರತ ದುಃಖಿತನೇಸನೆಂದನು ತಂದೆ ತನಗೆಂದ ॥ ೫ ॥

ಎಂದಡೆಂದ ವಸಿಷ್ಠ ರಾಘವ
ತಂದೆ ದಶರಥ ನಿನ್ನ ವಿರಹದಿ
ಬೆಂದು ನಿನ್ನನೆ ನೆನೆದು ರಾಮಾ ರಾಮ ಜಾನಕಿಯೆ ॥
ಯೆಂದ ಲಕ್ಷ್ಮಣ ಯೆನುತ ದುಃಖದ
ಬಂದಿಗೊಡಲನು ತೆತ್ತು ಸುಗತಿಗೆ
ಸಂದನೆಂದೆಲ್ಲವೆಸು ಹೇಳಿದನಾ ರಘೋತ್ತಮಗೆ ॥ ೬ ॥

ಕೇಳಿ ಗುರುವಾಕ್ಯವನು ಕರ್ಣದ
ಶೂಲೆಯಂದವ ಶೋಕ ನಿಕರದ
ಮೂಲವನು ಹಾ ತಾತ ಹಾ ಯೆನ್ನಯ್ಯ ಹಾಯೆನುತ ॥

ಬಾಳದೇತಕೆ ಬಿಟ್ಟು ಹೋದ್ಯೆ
ಹೇಳದಿತ್ತಲು ತನಗೆ ಕರುಣಾ
ಪಾಲಿತನೆ ಹಾಯೆನುತ ಪ್ರಾಕೃತರಂತೆ ಹಳವಿಸಿದ || ೭ ||

ಬಿಟ್ಟೆಯೆನ್ನನಾಥನಾದೆನು
ಮುಟ್ಟಿಲಾಲಿಸುವವರದಾರಿಂ
ಗಿಷ್ಟರಾರೆನುತಿರಲು ಲಕ್ಷ್ಮಣ ಸೀತೆಯರು ಕೇಳಿ ||
ಥಟ್ಟುಗೆಡದರು ಧರೆಗೆವೊರಲುತ
ಕೆಟ್ಟೆವೆಂದಾ ರಾಮ ಮಾತೆಯ
ರಿಷ್ಟರೆಲ್ಲರು ಹಾಯೆನುತ್ತೊಡಲೊಡೆಯಲೊದರಿದರು || ೮ ||

ಕೇಳಿ ಬಳಿಕ ವಸಿಷ್ಠನಾ ಶ್ರೀ
ಲೋಲ ರಾಮನ ತಿಳುಹಿದಂ ಬಿಡು
ಗಾಳು ಮನುಜನೆ ರಾಮ ನಿಸಗೀ ಲೋಕ ಸಂಗ್ರಹದ ||
ಜಾಳು ಶೋಕವಿದಾರಿಗಾತ್ಮಗೊ
ಮೇಲೆ ದೇಹಕೊ ಬರಿದೆ ಮಾಯಾ
ಮಾಲೆ ಹಬ್ಬಿತೆ ನಿಜವಿವೇಕದ ನೇತ್ರಕಕಟೆಂದ || ೯ ||

ಆತುಮನು ನಿರವಯವನದ್ವಯ
ಜಾತಮೃತಿ ಸುಖದುಃಖ ಜರೆನರೆ
ಭೀತಿಯೆಂಬುದು ಹೊದ್ದದಕ್ರಿಯ ಜನಸನವಿನಾಶಿ ||
ಭೂತಕೆಂಬರೆ ಜಡವದರಿವಿನ
ಮಾತನರಿಯದು ಕೆಡದು ಕೆಟ್ಟಡು
ಭೂತವಿಕೃತಿಯೆ ಭೂತದಲಿ ಲಯವಾಗಿ ಕಾಂಗೆಂದ || ೧೦ ||

ಕನಸಿನಲಿ ನಾನಾತ್ಮ ಭೇದವು
ಮನಕತದಿ ನೆರೆ ತೋರಿಯಳಿವಂ
ತನುಪಮಾತ್ಮನ ಸನ್ನಿಧಾನದ ಮಾಯೆಯಿಂದಾದ ||

ಮನುಜತಿರ್ಯಗ್ದ್ವಿಜರೆಂಬರ
ಜನನ ಮರಣ ಸುಖಾಸುಖಂಗಳು
ಜನಿಸವೇ ಸ್ವೈ ಸಳಿಯುವಿವಕಿನ್ನಳಲವೇಕೆಂದ ॥ ೧೧ ॥

ನಿತ್ಯನವ್ಯಯನೇಕನದ್ವಯ
ಸತ್ಯ ಸಂವಿನ್ಮಾತ್ರನಸುಪಮ
ಚಿತ್ತ ಸಾಕ್ಷಿನಿರೀಹನಾತುಮನೆಂದು ಬಲ್ಲವರು ॥
ಭಿತ್ತರವ ಮರಣದಲಿ ಶೋಕಿಸ
ಲುತ್ತಮರು ಸುಖದಲ್ಲಿ ಹರ್ಷಿಸ
ಲತ್ತಲೀ ತನು ಧರ್ಮವಾತ್ಮಂಗಿಲ್ಲವೆಂದೆಂದು ॥ ೧೨ ॥

ನಿನಗದೆತ್ತಣ ದುಃಖ ನಿನ್ನನು
ನೆನೆದು ಗೆಲುವರು ಶೋಕಮೋಹವ
ಮನುಜ ನಾಟಕ ಸಾಕೆನುತ ಮುನಿ ತಿಳುಹಲಾಕ್ಷಣಕೆ ॥
ಮನದ ದುಃಖವನುಳಿದು ಮಂದಾ
ಕಿನಿಯ ಜಲದಲಿ ಮಿಂದು ಪಾವನ
ನೆನಿಸಿ ಪಿತೃಗಳಿಗೆಲ್ಲ ಬಳಿಕ ಜಲಾಂಜಲಿಯನಿತ್ತ ॥ ೧೩ ॥

ಮಾಡಿ ಪಿಂಡವ ಮೂಲಫಲಮಧು
ಗೂಡಿ ಲಕ್ಷ್ಮಣ ಸಹಿತ ಮಂತ್ರದಿ
ನೀಡಿದನು ಬಳಿಕಿಂಗುದೀ ಫಲ ಸಮದ ಪಿಂಡವನು ॥
ನೋಡಿ ಶಾಸ್ತ್ರದಿ ತಾನದಾವದ
ಮಾಡುವನು ಭೋಜನವನದನೇ
ಮಾಡುವದು ಶ್ರಾದ್ಧಾದಿಗಳಿಗೆಂಬುದಿವೆ ಶ್ರುತಿ ಸಿದ್ಧ ॥ ೧೪ ॥

ಎಲ್ಲರೂ ದುಃಖಾಶ್ರು ಜಲಧಿಯು
ಉಳ್ಳವ್ಯವುತ ಮರುಗಿ ಮಿಂದರು
ಸಲ್ಲಲಿತ ಸಾಕ್ಷಾತಗಂಗೆಯಲ್ಲೈದಿಯಾಶ್ರಮಕೆ ॥

ಒಲ್ಲದಾರೂ ಕಂದಮೂಲವ
ನಿಲ್ಲಿಯುಪವಾಸದಲಿ ಯಾತ್ರಿಯ
ಫುಲ್ಲಲೋಚನ ರಾಮನೊಡನಿದ್ದುದು ಜನಸ್ತೋಮ ॥ ೧೫ ॥

ಮರುದಿವಸ ಗಂಗೆಯಲಿ ಮಿಂದಾ
ದರದಿ ನಿರ್ಮಲರಾಗಿ ನೆರದಿ
ತ್ಥರವಲೆಲ್ಲರು ಕುಳಿತಿರಲು ಬಂದೆರಗಿ ರಾಘವಗೆ ॥
ಭರತನೆಂದನು ರಾಮ ರಾಮೋ
ತ್ಕರ ಮಹಾಗುಣ ನಿಧಿಯೆ ಪಟ್ಟವ
ಧರಿಸಿ ರಾಜ್ಯವ ಪಾಲಿಸೆಲ್ಲರನೆನುತ ಭಕುತಿಯಲಿ ॥ ೧೬ ॥

ತಂದೆಯಂತ್ಯದಿಯಣ್ಣನೇ ಧಿಟ
ತಂದೆಯಲ್ಲಾ ತವಗಿದುವೆ ನೃಪ
ವೃಂದಧರ್ಮವು ಪ್ರಜೆಗಳನುರಾಗದಲಿ ನೆರೆ ಸಲಹಿ ॥
ಮುಂದೆ ಯಜನವನೆಲ್ಲ ಮಾಡಿಸಿ
ಸಂದನರನುತ್ಪಾದಿಸುತ ನೆಲ
ವಿಂದ ಧರ್ಮವ ನೀತಿ ತಪ್ಪದೆ ಸಲಹಿಕೊಂಡಿಹುದು ॥ ೧೭ ॥

ಮಗಗೆ ಪಟ್ಟವ ಕಟ್ಟಿ ವನವನು
ಹೊಗುವದಲ್ಲಿಂ ಮೇಲೆ ತಪದಲಿ
ಸೊಗಸದುಳ್ಳಡೆ ನಿಮ್ಮಗದೀಗಳೆ ಚಹುದುಚಿತವಲ್ಲ ॥
ಮಿಗದೆ ತನ್ನಲಿ ಕರುಣವುಳ್ಳಡೆ
ಹಗರಣವಲೀ ಕೈಕೆ ಮಾಡಿದ
ಬಗೆಯ ಮನದಲಿ ನೆನೆಯಬಾರದು ರಾಮ ನೀನೆಂದ ॥ ೧೮ ॥

ಎಂದು ಚರಣವ ಹಿಡಿದು ಶಿರದಲಿ
ತಂದಿರಿಸಿಕೊಂಡಿಳೆಗೆ ಬಿದ್ದನು
ಮುಂದೆದಂಡದವೋಲು ರಾಘವ ಪಾಲಿಸೆಂದೆನುತ ॥

ತಂದೆ ಬಾಯೆಂದೆತ್ತಿ ತೊಡೆಯುಲಿ
ತಂದು ಕುಳಿರಿಸಿ ರಾಮನತಿ ಮುದ
ದಿಂದ ಸಪ್ರೇಮಾರ್ದ್ರನಯನದಲನುಜಗಿಂತೆಂದ ॥ ೧೯ ॥

ಕೇಳು ಮಗನೇ ನನ್ನ ನುಡಿಯನು
ಹೇಳಿದೆಯಲಾ ನೀನಿದೆಲ್ಲವ
ಶೀಲನೃಪರಿಂಗಹುದು ಮತ್ತೊಂದಿಹವು ಕಿಂಚಿತವು ॥
ಹೇಳುವೆನು ಹದಿನಾಲ್ಕು ವರುಷವ
ಬೀಳುಗೊಡುವೆನು ದಂಡಕಾಖ್ಯದಿ
ಮೇಲೆ ತಾ ಬಹೆನನ್ನವರ ಮಾತಾಡಬೇಡೆಂದ ॥ ೨೦ ॥

ವರುಷ ಹದಿನಾಲ್ಕೆಂತ ನಿನಗಿಂ
ದಿರಿಸಿದನು ಪಿತ ನಿನಗೆ ರಾಜ್ಯವ
ನಿರುವನದಿ ನೀನೆಂದು ಕೊಟ್ಟನು ತಪವೆನಗೆ ಪಿತನು ॥
ಇರಲು ಬೇಕೈ ನೀನು ನಾನೂ
ಓರಿಯುದೆಂವದಲಿದ್ದ ಸ್ವೇಚ್ಛಾ
ಚರಣೆ ನವಗೆತ್ತಣದು ಪಿತೃವಶವರ್ತಿಗಳಿಗೆಂದ ॥ ೨೧ ॥

ಮೀರಿವಡೆ ಪಿತೃನುಡಿಯನವ ಪಿತೃ
ಧಾರಕನೆ ತಾನೆಲ್ಲ ನರಕದಿ
ಘೋರಯಾತನೆವಡುವ ಜೀವನ್ಮೃತನಲಾ ಧಟಕೆ ॥
ಸಾರವಿವಸಂದಾಳು ರಾಜ್ಯವ
ಸೇರಿವನವಲ್ಲಿಹೆನು ತಾನಿದ
ಕಾರು ವೊಲ್ಲೆನಲಾಗದಯ್ಯನ ಮಾತ ನಾವೆಂದ ॥ ೨೨ ॥

ಅಣ್ಣ ತಾತನ ಮಾತದೇ ತಾ
ಬಣ್ಣಿಸುವೆಯುನ್ನತ್ತ ಹೃದಯನು
ಹೆಣ್ಣಿನಿಚ್ಛೆಯ ಮನುಜ ಮೂರ್ಖಭ್ರಾಂತಿ ಚೇತನನು ॥

ಹಣ್ಣು ಮುಪ್ಪಿನ ಬಾಲಬುದ್ಧಿಯ
ತಿಣ್ಣದಲಿ ಹೇಳಿದಡೆ ತಾನ
ಗ್ರಣ್ಯ ಮತವೇ ರಾಮನೆಂದಡೆ ರಾಮನಿಂತೆಂದ || ೨೩ ||

ಅಲ್ಲ ಪಿತ ಕಾಮುಕನು ಮೂಢದಿ
ಯಲ್ಲ ಸ್ತ್ರೀಜಿತ ಭ್ರಾಂತ ಮಾನವ
ನಲ್ಲ ಪೂರ್ವದಿ ದತ್ತವರ ಸತ್ಯವೆನೆ ಪಾಲಿಸಲು ||
ವಲ್ಲಭೆಗೆ ಪೊಲಿದಿತ್ತು ಪಾಪದ
ಸೊಲ್ಲಿಗಂಜಿದ ನರಕಭಯದಲಿ
ಬಲ್ಲವನು ಪಿತ ಸತ್ಯಸಂಧನು ಭರತ ಕೇಳೆಂದ || ೨೪ ||

ಆತನಗ್ಗದ ವಚನ ಸತ್ಯದ
ನೀತಿ ತಪ್ಪದೆ ನಡೆಸದಿದ್ದಡೆ
ಪಾತಕವು ತನಗಾಗದೇ ಲೋಕದಲಿ ರಾಘವನು ||
ಬಾತೆಗೆಟ್ಟನು ಸತ್ಯಕೆನ್ನರಿ
ಮಾತ ನೀನಿದ ಕೇಳೆನಲು ರಘು
ಜಾತಗೆಂದನು ಮತ್ತೆ ನುಡಿದನು ದೈನ್ಯದಲಿ ಭರತ || ೨೫ ||

ನಾನು ವಲ್ಕಲ ಜಟೆಯುನಾಂತಾ
ನ್ಯೂನ ಮನು ಸಂಖ್ಯಾಬ್ದ ವನದಲಿ
ಸಾನುರಾಗದಲಿಹೆನು ರಾಜ್ಯವನಾಳು ನೀ ಪಿತನ ||
ದಾನವಚನವು ತಪ್ಪದೆಂದೆನ
ನೇನನಾಡುವೆ ರಾಜ್ಯ ನಿನಗೀ
ಶಾಸನವ ತನಗೆನ್ನನೇ ಪಿತನೆಂದನಾ ರಾಮ || ೨೬ ||

ವನದಿ ನೀ ರಾಜ್ಯದಲಿ ತಾನಿರ
ಲನುಜ ಮೊದಲೇ ವ್ಯರ್ಥವಾಗದೆ
ಯೆನಲು ಲಕ್ಷ್ಮಣನಂತೆ ನಾ ನಿಮ್ಮಡಿಯ ಸೇವಿಸುತ ||

ಮನೆಗೆ ಹೋಗದೆ ಬಪ್ಪೆನಲ್ಲದ
ಡನಲನಲಿ ಬೀಳುವೆನು ತನ್ನುವಿದ
ನೆಸುತ ತನ್ನಲಿ ನಿಶ್ಚಯವ ಮಾಡಿದನು ಕಲಿ ಭರತ || ೨೭ ||

ಹರಿಹಿ ದರ್ಭೆಯ ಮೂಡ ಮುಂತಾ
ಗಿರೆ ಕುಳಿತು ದೇಹವನೆ ಬಿಡಲೆಂ
ದಿರಲವನ ನಿರ್ಬಂಧವನು ಕಾಣುತ್ತ ವಿಸ್ಮಯದಿ ||
ಗುರು ವಸಿಷ್ಠನ ನೇತ್ರ ಸಂಜ್ಞೆಯ
ಭರದಿ ರಾಮನು ನೋಡಲಾಗಳೆ
ಕರೆದು ಭರತಂಗೆಂದನೇಕಾಂತವಲಿ ಮುನಿರಾಯ || ೨೮ ||

ಸರ್ವಸಾರವ ಬಲ್ಲ ಬೋಧೆಯ
ಗುರ್ವವೆಲ್ಲವ ತಿಳಿವರಿದ ಗುರು
ಸರ್ವ ಮುನಿಜರೆಲ್ಲರಿಂತಾನಧಿಕನಾಗಿರ್ವ ||
ಸರ್ವಗುಣ ಸಂಪನ್ನನಾಗಿಯು
ಸರ್ವಹಿತಕರನಾದ ಮುನಿಪನು
ಸರ್ವ ಗೌಪ್ಯವ ಭರತ ನೀ ಕೇಳೆಂದು ಕರುಣಿಸಿದ || ೨೯ ||

ಕೇಳು ಮಗನೇ ಭರತ ಗೌಪ್ಯವ
ಹೇಳುವೆನು ನಿಶ್ಚಿತವ ಸಾಕ್ಷಾ
ನ್ಮ್ರಲತಾಂಗೀವರನೆನಿಪ ನಾರಾಯಣನೆ ಬಂದು ||
ತಾಳಿದನು ರಾಮಸ್ವರೂಪವ
ಹೇಳಿಕೊಂಡನು ಹಿಂದೆ ಕಮಲಜ
ಜಾಳುರಾವಣನೆಂಬ ದನುಜನ ವಧಿಸಲೋಸುಗರ || ೩೦ ||

ದಶರಥಗೆ ಸುತನಾಗಿ ಜನಿಸಿದ
ನಸುರರನು ವಧಿಸಲಿಕೆ ಯಾವನ
ಹೆಸರಿಸಿದ ವರಯೋಗಮಾಯೆಯ ಜನಕಭೂಪತಿಯ ||

ವಸತಿಯಲಿ ಸೀತಾಭಿಧಾನದ
ಹೆಸರುವಡೆದುದು ಸೇರಿದಳು ಬಂ
ದಸುರ ವೈರಿ ಮುಕುಂದ ರಾಮಂಗೆಂದನಾ ಮುನಿಪ ॥ ೩೧ ॥

ಶೇಷನವತಾರವು ಕಣಾ ಲ
ಕ್ಷ್ಮೀಶ ರಾಮನ ಬಳಿಯಲನುದಿನ
ವಾಸವಾಗಿರುತ್ತಿದುವೀ ಲಕ್ಷ್ಮಣನೆನಿಪ್ಪವನು ॥
ಸಂಶಯವು ಬೇಡಮರ ಕಂಟಕ
ದೋಷಿ ರಾವಣನನ್ನು ವಧಿಸಲು
ಭಾಸುರ ಶ್ರೀ ರಾಮನೈದುವನೆಂದನಾ ಮುನಿಪ ॥ ೩೨ ॥

ಕೈಕೆ ಬೇಡಿದ ವರವ ನಿಷ್ಠುರ
ವಾಕು ಸಹಿತಾ ನೇಮದೆಲ್ಲವು
ನಾಕದವರಿಂದಾದ ಕೃತಕವು ಪೋಣದಲ್ಲದಡೆ ॥
ಆಕೆ ರಾಮಂಗೆಂದು ವಹಿತವ
ಸೋಕಿಸುವ ನುಡಿಯೆಂಬವಳೆ ಜಗ
ದೇಕನಾಥನು ರಾಮನರಿ ಸಂದೇಹ ಬೇಡೆಂದ ॥ ೩೩ ॥

ದೇವ ರಾಮನು ಮನೆಗೆ ತಿರುಗನು
ನೀವು ನಾವು ಸಮಸ್ತ ಸೈನಿಕ
ದೇವಿ ಕೌಸಲೆ ಮುಖ್ಯ ಮಾತೆಯತೊಡನವಶ್ಯದಲಿ ॥
ಈ ವನವಲಿಹುದೇನು ಕಾರಣ
ಸಾವಧಾನದಿ ಪುರಕೆ ತೆರಳುವ
ರಾವಣನ ಕುಲಸಹಿತ ರಾಮನ ಕೊಂದು ಬಹನೆಂದ ॥ ೩೪ ॥

ಕೊಲ್ಲನೇ ತಾಟಕಿಯ ಯಾಗದಿ
ಚಲ್ಲಿ ಬಡಿಯನೆ ದನುಜರೆಲ್ಲರ
ಕಲ್ಲಹಲ್ಯಾಶಾಪ ಮೋಕ್ಷವ ಮಾಡನೇ ಧಟಕೆ ॥

ಬಿಲ್ಲ ಮುರಿಯನೆ ಭೂತನಾಥನ
ನಲ್ಲಿ ಸೀತೆಯ ವರಿಸಿ ಬರುತವೆ
ಕೊಳ್ಳನೇ ಭಾರ್ಗವ ಮುನೀಂದ್ರನ ಕರದ ನಿಜ ಧನುವ || ೩೫ ||

ದೊಡ್ಡ ರಾವಣನಾದಡೊಂದೇ
ಕಡ್ಡಿ ರಾಮಗೆ ಕೊಲಲು ಕೇಳ್ಳೈ
ಹೆಡ್ಡ ರಾವಣ ಸಿಕ್ಕಿದನು ಕಾರ್ತ್ಯ್ಯನ ಕರದಿ ಮುನ್ನ ||
ವೊಡ್ಡು ಕಾರ್ತ್ಯ್ಯನ ಕೊಂದು ಭಾರ್ಗವ
ನಡ್ಡವಿಸಿದರೆ ಪರಶುರಾಮನ
ಸಡ್ಡು ಮಾಡನೆ ರಾಮನಾತನ ಚಾಪವನು ಕೊಳ್ಳದು || ೩೬ ||

ಎಂದಡೆಲ್ಲವ ಕೇಳಿ ಗುರುಮುಖ
ದಿಂದ ಭರತನು ತಿಳಿದು ವಿಸ್ಮಯ
ದಿಂದ ಶ್ರೀ ರಘುನಾಥನೇ ಪರಮಾತ್ಮನೆಂದರಿದು ||
ಸಂದ ಹರುಷದಲುಬ್ಬಿ ನಗುತ್ತೈ
ತಂದ ರಾಮನ ಹೊರೆಗೆ ಭರತನು
ಸಿಂಧು ಬಿನ್ನಹ ಮಾಡಿವಸು ಭಕುತಿಯಲಿ ಕೈಮುಗಿದು || ೩೭ ||

ಸಂಧಿ ಹದಿನೆಂಟಲ್ಲಿ ಪದಗಳ
ವೃಂದ ಷಟು ತ್ರಿಂಶಗಳ ಸಂಖ್ಯೆಯ
ಲೊಂದಧಿಕವಿದನೋದಿ ಕೇಳಿದಡಘ ವಿನಾಶಕರ ||
ಎಂದು ವಗಲದೆ ಹೃದಯ ಕಮಲದ
ಮಂದಿರದಿ ನೆಲಸಿಪ್ಪ ಪರಮಾ
ನಂದಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹ ಸಲಹೆಮ್ಮ || ೩೮ ||

ಅಂತು ಸಂಧಿ ೧೮ ಕ್ಕೆ ಪದ ೭೮೫ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ
ಶ್ರೀ ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ಹತ್ತೊಂಭತ್ತನೆಯ ಸಂಧಿ

## ನಂದಿಗ್ರಾಮದಲ್ಲಿ ಭರತನ ವಾಸ

ಸೂಚನೆ ॥ ರಾಮನೆಲ್ಲರ ಕಳುಹಿದನು ಸುಖ
ಪ್ರೇಮದಲಿ ನಿಜಪುರಕೆ ನಂದಿ
ಗ್ರಾಮದಲಿ ಭರತಾಂಕನಿದ್ದನು ತಮ್ಮ ಸಹವಾಗಿ ॥

ಪದ ॥ ಕೇಳು ಪಾರ್ವತಿ ಮುನಿಯ ಮುಖದಲಿ
ಕೇಳಿ ಭರತನು ರಾಮನೇ ಶ್ರೀ
ಲೋಲನೆಂಬುದ ತಿಳಿದು ವಿರಹದವ್ಯಾಕುಲದ ಬಳಿಕ ॥
ಮೇಲೆ ರಾಮಗೆ ನಮಿಸಿ ನುಡಿದನು
ಬೀಳುಗೊಡುವೆನು ಪುರಕೆ ರಾಘವ
ಪಾಲಿಸೈ ನಿಜ ದಿವ್ಯ ಸಿರಿ ಪಾದುಕೆಯನಿದನೆಂದ ॥ ೧ ॥

ನಿನ್ನ ಕಂಡಂತನುದಿನವು ಸಂ
ಪನ್ನ ಪಾದುಕೆಯಿದನು ಪೂಜಿಸು
ತನ್ನವಹ ಸೇವೆಯನು ಮಾಡುತ ರಾಜ್ಯ ಕೃತ್ಯವನು ॥
ಧನ್ಯನಾಗಿಹೆ ನೀ ಬಹನ್ನಗ
ವನ್ಯವರಿಯದೆ ನಿನ್ನ ಚರಣದ
ಸನ್ನಿಧಿಯಲಿದ್ದಂತೆ ಕಾಲವ ಕಳೆವೆ ನಾನೆಂದ ॥ ೨ ॥

ಎಂದೆನುತ್ತಾ ದಿವ್ಯ ಪಾದುಕೆ
ಯಂದೆರಡನಿಜರತ್ನ ಭೂಷಣ
ದಿಂದಲಂಕೃತವಾಗಿ ಕೊಂಡಿರಿಸಿದನು ಶಿರದಲ್ಲಿ ||
ಮುಂದೆ ಬಲಬಂದಡಿಗಡಿಗೆ ರಘು
ನಂದನನ ಪದಕೆರಗಿ ಮತ್ತಿಂ
ತೆಂದನತಿ ಭಕುತಿಯಲಿ ಗದ್ಗದ ಸ್ವರದಿ ಭರತಾಂಕ || ೩ ||

ಎತ್ತಲಾನೂ ರಾಮ ವನದೊಳ
ಗುತ್ತರಿಸಿ ಹದಿನಾಲ್ಕು ವರುಷವ
ಮತ್ತೆ ಮೊದಲಿನ ದಿನಕೆ ನೀ ಬಾರದಡೆಯಾದಿನವೆ ||
ಹೊತ್ತಿಸುವೆನಗ್ನಿಯಲಿ ತನುವನು
ಸತ್ಯವೆಂದೆನಲಾಗ ನಿ
ವರ್ತಿಸಿದನಾ ರಾಮ ಭರತನನಧಿಕ ಕರುಣದಲಿ || ೪ ||

ಎನುತ ಸೈನಿಕ ಸಹಿತ ಮಂತ್ರಿಗ
ಳನುಜ ಶತ್ರುಘ್ನಾಂಕನೊಡನಾ
ಮುನಿವಸಿಷ್ಠನು ಸಹಿತ ಮಾತೃಗಳೊಡನೆ ಪಯಣವನು ||
ಅನುವಿನಿಂ ತೆರಳಲಿಕೆ ಭರತನು
ಮನವ ಮಾಡುತ್ತಿರಲು ಕಂಬನಿ
ಘನಲೋಳೇಕಾಂತಕ್ಕೆ ಕರೆದಳು ಕೈಕೆ ರಾಘವನ || ೫ ||

ಕರವನೆರಡನು ಮುಗಿದು ತನ್ನಯ
ಶಿರವನತಿ ದುಃಖದಲಿ ನುಡಿದಳು
ಹರ ಹರಾ ರಘುನಾಥ ನಿನ್ನನು ರಾಜ್ಯದಿಂ ನಾನು ||
ಹೊರವಡಿಸಿದೆನು ನಿರ್ದಯತ್ವದ
ಭರದಿ ನಿಷ್ಠುರದಿಂದ ಬುದ್ಧಿಯು
ನಿರುತ ನಿನ್ನಯ ಮಾಯೆ ಮೋಹಿಸಿ ಕೆಡಿಸಿದುದು ತನ್ನ || ೬ ||

ಆರು ಗೆಲುವರು ವಿಷ್ಣುಮಾಯಾ
ನಾರಿಯನು ಮೂಲೋಕದೊಳು ತಾ
ಧೀರನನು ಸಹವಾಗಿ ಮೋಹಿಸಿ ಕೆಡಹುವಳು ಧಿಟಕೆ ||
ನಾರಿ ತಾನೆಲೆ ರಾಮ ತನ್ನವಿ
ಕಾರವಡಿಸುವುದರಿಂದೆ ತಕ್ಷಮೆ
ಸಾರ ಬಲ್ಲರಿಗೆನ್ನ ಕೃತಕವ ಕ್ಷಮಿಸಬೇಕೆನಲು || ೭ ||

ನೀನಲ್ಯೆ ಸಾಕ್ಷಾತ ವಿಷ್ಣು
ಜ್ಞಾನಮಯನವ್ಯಕ್ತನಾದಿ
ಸ್ಥಾನರೂಪ ಸನಾತನನು ಪರಿಪೂರ್ಣ ಪರಮಾತ್ಮ ||
ನೀನು ಮಾಯಾ ಮಾನುಷಾಂಗದ
ಲೀ ನಿಖಿಳ ಲೋಕವನು ಮೋಹಿಸಿ
ಹಾನಿ ವೃದ್ಧಿಗಳಿಂದ ಕುಣಿಸುತ ನೋಡಿ ಸುಖಿಸುತಿಹೆ || ೮ ||

ನೀನೆ ಪ್ರೇರಿಸಿ ಲೋಕದೊಳಗ
ಜ್ಞಾನಿಗಳ ಮಾಡಿರುವ ಸುಖದುಃ
ಖಾ ನಿರಂತರ ಮಾಯೆಯವಳಿಗೆ ಸ್ವೇಚ್ಛೆ ಧಿಟಕುಂಟೆ ||
ನಾನಸತ್ಕೃತ್ರಿಮ ಬೊಂಬೆ ಕುಣಿವುದ
ದೇನು ನರ್ತಕ ಕುಹಕ ಚೇಷ್ಟಾ
ಧೀನವಲ್ಲೈ ರಾಮ ತಿಳಿಯಲಿಕೆಂದಳಾ ಕೈಕೆ || ೯ ||

ನಿನ್ನ ವಶದಲಿ ಮಾಯೆ ಮಾಯಾ
ಭಿನ್ನ ರೂಪದಿ ಜಗವ ಹರಹುವ
ಲಾರ್ಣವದ ಬುದ್ಬುದ ತರಂಗವಿಕಾರದಂದದಲಿ ||
ಹೊನ್ನು ತೊಡಿಗೆಗಳಾಗಿ ಹೆಸರಿಸಿ
ಹೊನ್ನ ಮರಸುವ ಪೋಲು ನಿಜ ಚೈ
ತನ್ಯ ಕೃತಿಯೇ ಚೇತನವ ಮರೆದಿಹುದು ಭೇದದಲಿ || ೧೦ ||

ದೇವ ತನ್ನನು ಮೋಹಿಸಿದೆಲಾ
ದೇವ ಕಾರ್ಯವ ಮಾಡಲೋಸುಗ
ಕಾವುದೆನ್ನನು ಪಾಪಚೇಷ್ಟಾಭಾವ ಹೊಗದಂತೆ ||
ಆವ ದೇವತೆಗಳಿಗು ಕಾಣದ
ದೇವ ನನ್ನಿದಿರಿನಲಿ ತೋರಿದೆ
ಯಾವ ಕರುಣೆಯೊ ರಾಮ ನೀನೆಂದಳು ಸರೋಜಮುಖಿ || ೧೧ ||

ಪಾಹಿ ವಿಶ್ವೇಶ್ವರನೆ ಜಯ ಜಯ
ಪಾಹಿ ಪಾಹಿಯನಂತ ಮಹಿಮನೆ
ಪಾಹಿ ಜಗತೀನಾಥ ಸುಪ್ರಿಯ ಮುಮುಕ್ಷುಬಾಂಧವನೆ ||
ಮೋಹಮಯದ ಜ್ಞಾನ ಪಾಶ ಸ
ಮೂಹ ಪುತ್ರಾದಿಗಳ ಬಂಧವ
ನಾ ಹರಿಸು ವಿಜ್ಞಾನಖಡುಗದೊಳೆಂದಳಾ ಕೈಕೆ || ೧೨ ||

ಕಷ್ಟವೀ ಸಂಸಾರವಿದರೊಳು
ಕಷ್ಟವೀ ತನು ಧರ್ಮವಲ್ಲಿಯು
ಕಷ್ಟವೀ ಪುತ್ರಾದಿಯೊಳಗಣ ಸ್ನೇಹಮಯ ಪಾಶ ||
ಕಷ್ಟನದ ಹರಿ ನಿನ್ನ ನಿಜಪದ
ವಿಷ್ಟರಧ್ಯಾನಾಖ್ಯ ಪಾಶದಿ
ಕಷ್ಟ ತನ್ನಯ ಮರೆಯ ಹೊಕ್ಕೆನು ಯೆಂದಳಿಂದುಮುಖಿ || ೧೩ ||

ಎಂದ ಕೈಕೆಯ ಮಾತ ಕೇಳು
ತ್ತೆಂದನಾ ಶ್ರೀರಾಮ ನಸುನಗೆ
ಯಿಂದ ಕೇಳೌ ತಾಯೆ ನೀನಾಡಿದ್ದ ಮಾತುಗಳು ||
ವೊಂದು ತಪ್ಪದು ಸತ್ಯ ನಿಜ ಸುಖ
ದಿಂದ ದಿವಿಜರ ಕಾರ್ಯಕೋಸುಗ
ಬಂದು ನುಡಿದಳು ವಾಣಿ ನನ್ನ ಪ್ರೇರಣೆಯುಳಿಂದ || ೧೪ ||

ನೀನು ಬರಿದೆ ನಿಮಿತ್ತ ಮಾತ್ರವ
ದೇನು ದೋಷವು ನಿನಗೆ ಬೆದರದಿ
ರೌ ನಿರಂತರ ಹಗಲಿರುಳುವೆಡಬಿಡದೆ ತನ್ನುವನು ||
ಧ್ಯಾನಿಸುತ್ತಿರು ಹೃದಯ ಕಮಲದ
ಲಾನತಪ್ರಿಯ ದಾನ ಭಕ್ತಾ
ಧೀನ ವಿಗ್ರಹರೂಪನೆನ್ನನು ತಾಯಿ ಬಿಡದೆಂದ || ೧೫ ||

ಪುತ್ರಮಿತ್ರಪ್ರಿಯಧರಾಧಿಕ
ವರ್ತಿಯನು ಬಿಡಬಿಡದೆ ಕೇಳುತ
ಕೀರ್ತಿಸುತ ನೆನೆವುತ್ತ ತನ್ನನು ಭಾವಭಕುತಿಯಲಿ ||
ಮಿಥ್ಯವೆಂದೆಲ್ಲವನು ತಿಳಿ ಸ
ರ್ವತ್ರ ಸಮದುಃಖದಲಿ ನನ್ನನೆ
ಸುತ್ತಲೂ ಕಾಣುತ್ತ ಮುದವಿರು ತಾಯಿ ನೀನೆಂದ || ೧೬ ||

ಶತ್ರು ಮಿತ್ರರೆನಿಪ್ಪ ಭೇದದ
ಭಿತ್ತರವು ತನಗಿಲ್ಲ ಭಕ್ತರ
ಹತ್ತಿರಿದ್ದೇ ಭಜಿಸುವೆನು ಕಲ್ಪಾಂತವಾದರೆಯು ||
ಮತ್ತೆ ತನ್ನಯ ಮಾಯೆಯಿಂದಾ
ಸಕ್ತಿಮೋಹಿತರೆಂಬರೆನ್ನನು
ವೃತ್ತ ಮಾನವ ಮೋಹಿ ಸುಖದುಃಖಾನುಗತನೆಂದು || ೧೭ ||

ನಿನಗೆ ತನ್ನ ವಿವೇಕ ಬುದ್ಧಿಯೆ
ಜನಿಸಿತಿದೆಲಾ ಭವಭಯಾಪಹ
ವೆನಿಪುದಂಜದಿರನುಪ ಸುಖದಿಂದಿನ್ನು ನೀ ನಿನ್ನ ||
ಮನೆಯಲಿರು ಸಂಸಾರ ಲೇಪದ
ಜಿನುಗು ಮಲಿನವ ಹೊದ್ದದೆನ್ನನೆ
ನೆನೆವುತಿಹುದನವರತವೆಡಬಿಡದೆಂದನಾ ರಾಮ || ೧೮ ||

ಎನಲದನು ಕೇಳುತ್ತ ಕೈಕೆಗೆ
ಮನದ ಸಂತೋಷಾಂಬು ಬಂದಾ
ನೆನೆದ ಕಡೆಗೋಡಿಯುಲಿಳಿದು ತನುನೆನೆಯೆ ವಿಸ್ಮಯದಿ ||
ಅನುಪಮನ ಬಲಬಂದು ಬಳಿಕಾ
ವನಿತೆಯವನಿಯು ಮೇಲೆ ಶತಸಂ
ಖ್ಯೆನಲು ನಮಿಸುತ ಬೇಳುಗೊಂಡಳು ರಾಘವೇಶ್ವರನ || ೧೯ ||

ಭರತನೆಖಿಳಾಮಾತ್ಯ ಪಂಜನ
ವರಪುರೋಹಿತ ಮಂತ್ರಿ ತಾಯ್ಗಳು
ವೆರಸಿ ಬಂದನಯೋಧ್ಯೆಗತಿ ವೇಗದಲಿ ರಾಘವನ ||
ಸ್ಮರಿಸುತೆಡಬಿಡದೆಲ್ಲರನು ತಂ
ದಿರಿಸಿ ಪಟ್ಟಣದಲ್ಲಿ ತಮ್ಮನು
ವೆರಸಿ ನಂದಿಗ್ರಾಮವನು ನೆರೆಹೊಕ್ಕನಾ ಭರತ || ೨೦ ||

ಅಲ್ಲಿ ಸಿಂಹಾಸನದಿ ರಾಮ ಪ
ದುಲ್ಲಸಿತ ಪಾದುಕೆಯನಿರಿಸಿ
ದ್ದೆಲ್ಲರೀಕ್ಷಿಸುವಂತೆ ಭಕುತಿಯ ಭಾವದಲಿ ಭರತ ||
ಸಲ್ಲಲಿತ ಗಂಧಾಕ್ಷತೆಗಳಿಂ
ಮೊಲ್ಲೆ ಮಲ್ಲಿಗೆ ಪುಷ್ಪ ಮುಖ್ಯದ
ಲುಳ್ಳ ವಿಭವುಪಚಾರದಿಂ ಪೂಜಿಸುವನನವರತ || ೨೧ ||

ರಾಮಗುಳ್ಳ ರಾಜವಿಭವವ
ನೇಮದಿಂ ಪಾದುಕೆಗೆ ಮಾಡುತ
ಸೋಮಸನ್ನಿಭ ನಿತ್ಯನಿತ್ಯವು ತಪ್ಪದೆಲ್ಲವನು ||
ಕಾಮ ಕರ್ಮವನುಳುಹಿ ಭಜಿಸುತ
ಭೂಮಿ ಶಯನದಿ ವಲ್ಕಲಾಂಬರ
ದಾ ಮಹಾಜಟೆ ಶಿರದಿ ವಿಜಿತೇಂದ್ರಿಯದಲಿಹ ಭರತ || ೨೨ ||

ಕಂದ ಮೂಲ ಫಲಾಶನದಲೀ
ದ್ವಂದ್ವವರ್ಜಿತ ಬ್ರಹ್ಮಚರ್ಯಗ
ಳಿಂದ ಶತ್ರುಘ್ನನನು ಸಹಿತ ನೃಪ ಕೃತ್ಯವೆಲ್ಲವನು ॥
ಪೊಂದು ಪುಳಿಯದ ಪೋಲು ನಡೆಸು
ತ್ತಂದು ನಿಂದಾ ಕೃತ್ಯವೆಲ್ಲವ
ಮುಂದೆ ಪಾದುಕೆಯಿದಿರು ಬಿನ್ನವಿಸುವನು ಕೈಮುಗಿದು ॥ ೩೩ ॥

ನಿತ್ಯ ನಿತ್ಯವು ಭರತ ಪಾದುಕೆ
ವತ್ತಿನಲಿ ಕೋಲ್ಹಿಡಿದು ವೋಲಗಿ
ಸುತ್ತನಾನ್ಯಪನೆಂಬ ಭಾವವನೇನುವನು ಹೊರದೆ ॥
ಭಕ್ತಿಯಲಿ ರಾಮಾಂಘ್ರಿ ಚಿಂತಾ
ಸಕ್ತಿಯಲ್ಲಿ ದಿನವೆಣಿಸುತೆಂದಿಂ
ಗಿತ್ತ ರಾಘವ ಬಹನೊಯೆನುತನವರತ ಹಾರುತಿಹ ॥ ೩೪ ॥

ಮುಖ್ಯರಿಯ ಕರಣವನು ರಾಮ ಪ
ದಾರ್ಪಣವ ಮಾಡಿತರ ವಿಷಯದ
ದರ್ಪಕೊಳಗಾಗದೆ ನಿರಂತರ ರಾಮ ಶರಣೆನುತ ॥
ಇಪ್ಪನೊಮ್ಮೆಮ್ಮೇನು ನೆನೆಯದೆ
ನಿಪ್ಪಸರದಿಂ ರಾಮಚಿಂತೆಯ
ಲೊಪ್ಪಿದನು ಸಾಕ್ಷಾತ ವಿಮಳಬ್ರಹ್ಮ ಋಷಿಯಂತೆ ॥ ೩೫ ॥

ಚಿತ್ರಕೂಟಾದ್ರಿಯಲಿ ರಾಘವ
ನಿತ್ತಮುನಿಜನರೊಡನೆ ಸುಖದಲಿ
ಮತ್ತಕಾಶಿನಿ ಲಕ್ಷ್ಮಣರು ಸಹ ಕೆಲವು ಕಾಲವಿರೆ ॥
ಅತ್ತಯೋಧ್ಯಾದೇಶ ಪಟ್ಟಣ
ದುತ್ತರದ ಜನನಿವಹ ರಾಘವ
ಚಿತ್ರಕೂಟದಲಿದ್ದುದರಿಂದೈತಪ್ಪುದನವರತ ॥ ೩೬ ॥



ನಂದಿಗ್ರಾಮದಲ್ಲಿ ಶ್ರೀರಾಮನ
ಪಾದುಕಾಪೂಜಾನಿರತ ಭರತ



ಅನಸೂಯಾ ದೇವಿಯಿಂದ
ಸೀತೆಗೆ ವಸ್ತ್ರದಾನ ಪುರಸ್ಕಾರ

ಬಂದು ಬಂದಾದೇಶ ಜನ ರಘು
ನಂದನನ ದರುಶನದ ಲಾಲಸ
ದಿಂದ ಕಂಡ್ಕೈದುತಿರೆಯದಕಾ ರಾಘವನು ನೋಡಿ ||
ವೃಂದ ಜನದ ಸುಬಾಧೆ ತನಗೇ
ಕೆಂದು ಗಿರಿಯದನುಳಿದು ದಂಡಕ
ವೆಂದೆನಿಪ ವನಕ್ಕೈದಿ ನೆನೆದನು ಕಾರ್ಯವನು ಮನದಿ || ೩೭ ||

ಒಡನೆ ಸೀತಾ ಲಕ್ಷ್ಮಣರು ಸಹ
ನಡೆದನತ್ರಿ ಮುನೀಂದ್ರನಾಶ್ರಮ
ದೆಡೆಗೆ ಸರ್ವರು ಋತುಗಳವು ಸುಖವಾಸವಾಗಿಹುದು ||
ಗಡಬಡೆಯ ಜನಬಾಧೆ ವರ್ಜಿತ
ದೆಡೆಗೆ ಬಂದಾ ಮುನಿಪನಂಗದ
ಕಡಲ ಕಾಂತಿಯ ಕಂಡನಾಶಾವಳಿಯ ಬೆಳುಗುತಿರೆ || ೩೮ ||

ವನವನೆಲ್ಲವ ಬೆಳಗುತಿಪ್ಪಾ
ಮುನಿಗೆ ದಂಡಪ್ರಣತನಾಗಿ
ದ್ದನುಪಮನು ಕೈಮುಗಿದು ನುಡಿದನು ನಾನು ರಾಘವನು ||
ಜನಕನಾಜ್ಞೆಗೆ ಬಂದೆನಡವಿಗೆ
ಯನುವಿಡಿದು ಕೃತ್ಯಕೃತ್ಯನಾದೆ
ಘನಮಹಾ ತೇಜೋನಿಧಿಯೆ ನಿಜದರುಶನದಲೆಂದ || ೩೯ ||

ಎನಲು ರಾಮನ ವಚನಕೆದ್ದಾ
ಮುನಿಪನೊಡನು ರಾಮ ಸಾಕ್ಷಾ
ಚ್ಚಿನುಮಯ ಶ್ರೀ ಹರಿಯೆನಿಪ್ಪುದನೆಂದು ಭಕುತಿಯಲಿ ||
ವಿನುತ ವಿಧ್ಯುಕ್ತದಲಿ ಪೂಜಿಸಿ
ವನದ ಫಲ ಪಕ್ವಾನ್ನದಿಂದಾ
ಜನಕಸುತೆ ಲಕ್ಷ್ಮಣರ ಸಹ ಸಂತುಷ್ಟಿವಡಿಸಿದನು || ೪೦ ||

ಪ್ರೇಮದಿಂದಾತಿಥ್ಯ ಪೂಜೆಯ
ರಾಮಚಂದ್ರಗೆ ಮಾಡಿ ನುಡಿವನು
ಸಾಮದಲಿ ರಘುನಾಥ ಮುಪ್ಪಿನ ಸತಿಯವಳು ತನಗೆ ||
ಕ್ಷಾಮತಪದಿಂ ಚಲಿಸದುತ್ತಮೆ
ಯಾಮಹಾಧರ್ಮಜ್ಞೆ ಯಾಕೆಯ
ನಾಮವನಸೂಯಾಭಿಧಾನವು ಯೆಂದನಾ ಮುನಿಪ || ೩೧ ||

ಒಳಗೆ ಯಂತರ್ ಗೃಹೆಯಲಿಪ್ಪಳು
ಕಳುಕು ಸೀತೆಯ ಕಂಡುಬರಲೆನ
ಲೆಲೆಗೆ ಹೋಗನಸೂಯ ದೇವಿಗೆ ನಮಿಸಿ ಬೇಗದಲಿ ||
ತಳುವದೇ ಬಾಯೆಂದು ರಾಘವ
ಕಳುಹಲಾಗಲಿಯೆಂದು ಹೊಕ್ಕಳು
ನಿಳೆಯವನು ಕಂಡೆರಗಿದಳು ದಂಡವದೊಲಾ ಸೀತೆ || ೩೨ ||

ದಂಡವಂತೆರಗಿದ್ದ ಸೀತೆಯು
ಕಂಡುಮುಂದನಸೂಯೆ ತಕ್ಕೈಸಿ
ಕೊಂಡು ಬಾ ಬಾರೆನ್ನ ಮಗಳೇ ಸೀತೆ ಬಾ ಯೆನುತ ||
ಮಂಡಿತಾ ಪ್ರೇಮದಲಿ ದಿವ್ಯವು
ಕುಂಡಲದ್ವಯವನ್ನು ಕೊಟ್ಟಳ
ಖಂಡ ನಿರ್ಮಿತ ವಿಶ್ವಕರ್ಮ ಸುಕೌಶಲೋತ್ತರವ || ೩೩ ||

ಭಕ್ತಿಯಿಂದ ದುಕೂಲವೀಡನು
ಮತ್ತೆ ಕೊಟ್ಟಳು ಮಾಸದಿರ್ದುದ
ನುತ್ತಮೆಗೆ ದಿವ್ಯಾಂಗರಾಗಾಕ್ಷತವ ದಿವ್ಯವನು ||
ಹತ್ತಿರಲಿ ಕೆಡದೆಂದು ಶೋಭಾ
ಯುಕ್ತವನು ಕಮಲಾಲಯೆಗೆ ಸತಿ
ಭಕ್ತಿಯಿಂ ಬಾಳ್ಸುಖದಿ ಪಾತಿವ್ರತ್ಯದಲ್ಲೆನುತ || ೩೪ ||

ನಿನಗೆ ಪಾತಿವ್ರತ್ಯ ಕುಂದದೆ
ಜನಪ ರಾಘವ ಸಹಿತ ಸುಖದಲಿ
ವನನಿವಾಸವ ಳಿವು ಮನೆಗೈದುವವೆನುತ ಹರಸಿ ||
ವನಿತೆ ಕಳುಹಲು ಕಂದಮೂಲಾ
ಶನವನುಂಡಾ ರಾಮ ಲಕ್ಷ್ಮಣ
ಜನಕಸುತೆ ಸಹಿತಿರಲು ನುಡಿದನು ಮುನಿಪ ರಾಘವಗೆ || ೩೦ ||

ರಾಮ ನೀ ಹದಿನಾಲ್ಕು ಲೋಕಕೆ
ಕ್ಷೇಮಕಾರಣವಾಗಿ ಸುರನರ
ತಾಮಸಾಧಿಕ ದೇಹವನು ನೆರೆ ಧರಿಸಿಯೂ ಗುಣದ ||
ಭ್ರಾಮಕವು ಲೇಪಿಸದೆ ನೀ ಚಿ
ದ್ವ್ಯೋಮನಾಗಿಯೆ ಮಾಯೆಯಿಂದಿಹೆ
ಯೇ ಮಹಿಮೆಯೋ ಮೋಹಿಸುತ್ತಿಹೆ ಯೆಂದನಾ ಮುನಿಪ || ೩೧ ||

ಮುಗಿದುದಿಲ್ಲಿಗೆ ಸಂಧಿ ಧೃತಿಯಿಂ
ಮಿಗಿಲೆನಲು ಮತ್ತೊಂದು ಪದ ಸಂ
ಖ್ಯೆಗಳು ಮೂವತ್ತೇಳಯೋಧ್ಯಾ ಕಾಂಡವಾಯ್ತಿನ್ನು ||
ಮಿಗೆಯರಣ್ಯದ ಕಾಂಡವನು ಶಿವ
ನಗಜೆಗೆಂಬುದ ಕೇಳಿ ಸಲಹುವ
ಜಗವಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನೊಲವಿನಲಿ || ೩೨ ||

ಅಂತು ಸಂಧಿ ೧೯ಕ್ಕೆ ಪದ ೬೩೦ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ
ಶ್ರೀ ಶ್ರೀ

## ಅಯೋಧ್ಯಾ ಕಾಂಡ ಮುಗಿದುದು

ಸ್ವಸ್ತಿಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ||
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು ||೧||

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯ ಶಾಲಿನೀ
ದೇಶೋಽಯಂ ಕ್ಷೋಭರಹಿತೋ ಸಜ್ಜನಾಃ ಸಂತು ನಿರ್ಭಯಾಃ ||೨||

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ
ಅಧನಾಃ ಸಧನಾಃ ಸಂತು ಜೀವನ್ತು ಶರದಾಂ ಶತಮ್ ||೩||

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ||೪||

ಯದಕ್ಷರ ಪದಭ್ರಷ್ಟಂ ಮಾತ್ರಾ ಹೀನಂ ತು ಯದ್ಭವೇತ್
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ||೫||

ಶ್ರೀ ಕೃಷ್ಣಾರ್ಪಣಮಸ್ತು



# ಪರಿಶಿಷ್ಟಗಳು

## ಪದ್ಯಗಳ ಆಕಾರದಿ ಸೂಚಿ

### ಬಾಲಕಾಂಡ

| ಪದ್ಯ | ಸಂಖ್ಯೆ | ಸಂಧಿ | ಪುಟ |
|---|---|---|---|
| ಅಚ್ಚರಿಯಲಾ ರಾಮ ನಿನ್ನಯ | ೧೮ | ೬ | ೬೦ |
| ಅತ್ತಲವಳ ಸಮಾಧಿಯಲಿ ಸ | ೧೭ | ೫ | ೫೧ |
| ಅತ್ತಲಾ ಸಭೆಯೊಳಗೆ ದಶರಥ | ೨೧ | ೪ | ೩೮ |
| ಅದ್ಯ ನೀ ಭವಸಾಗರದ ನಡು | ೧೬ | ೪ | ೩೭ |
| ಅಮುನಿಃಂತತ್ತಾನಂದ ಚಿನ್ಮಯ | ೩೬ | ೧ | ೧೦ |
| ಅದು ನಿಮಿತ್ತಲೆ ರಾಮ ಕರುಣಾ | ೨೯ | ೮ | ೮೬ |
| ಅನವರತವೂ ಸೇವ್ಯ ಸೇವಕ | ೪೭ | ೪ | ೪೫ |
| ಅಪ್ಪ ಬಾ ಗುಣಧಾಮ ಬಾ ನ | ೩೬ | ೮ | ೮೮ |
| ಅಪ್ಪಿದನು ಮುನಿನಾಥ ರಾಮನ | ೨೩ | ೫ | ೫೩ |
| ಅರರೆ ತನ್ನಂತಾರು ಧನ್ಯರು | ೧೭ | ೬ | ೬೦ |
| ಅರಿಯದಜ್ಞರು ರಾಮನಾದಡೆ | ೨೯ | ೧ | ೮ |
| ಅಲ್ಲಿ ಕಾವ್ಯಾಶ್ರಮ ಸುರಮ್ಯ ಸ | ೨೪ | ೫ | ೫೩ |
| ಅಲ್ಲಿ ಜನಿಸಿದನಾಗ ಜಗತೀ | ೬ | ೪ | ೩೪ |
| ಅವನ ಮಗ ನಾನಾಗಿ ಕೌಸಲೆ | ೨೭ | ೩ | ೨೯ |
| ಅವರ ವಧಿಸಲು ಬೇಡಬಂದೆನು | ೬ | ೫ | ೪೮ |
| ಅವಳ ಪೂಜೆಯನಾಂತು ಬಂದೆವು | ೭ | ೭ | ೬೮ |
| ಅಕ್ಷತೋದಕ ಸಹಿತ ಧಾರೆಯ | ೨೫ | ೭ | ೭೨ |
| ಅಕ್ಷಯನೆ ನಿನ್ನಂಘ್ರಿಯುಗಲವ | ೩೫ | ೬ | ೬೨ |
| ಆಗ ಕಂಡಳು ಮುಂದೆ ನಿಂದಾ | ೧೨ | ೬ | ೫೯ |
| ಆಗ ಕಂಡಾ ತಾಯಿ ತಂದೆಯು | ೩೯ | ೪ | ೪೩ |

## ಅಯೋಧ್ಯಾ ಕಾಂಡ

| ಪದ್ಯ | ಸಂಖ್ಯೆ | ಸಂಧಿ | ಪುಟ |
|---|---|---|---|
| ಮಿತ್ರ ಗುಹನೆನು ತಿಳುಹಿದವನು | ಸೂಚನೆ | ೧೪ | ೧೫೫ |
| ಮಿಸುಪ ರತುನದ ರತುನ ಕಾಂತಿಯ | ೩ | ೯ | ೯೪ |
| ಮೀರಬಾರದು ದುಃಖ ಸುಖವನು | ೧೧ | ೧೪ | ೧೫೮ |
| ಮೀರಿದಡೆ ಪಿತೃನುಡಿಯನವ ಪಿತೃ | ೨೨ | ೧೮ | ೨೦೯ |
| ಮೀರುವೆನೆ ನಿಮ್ಮಡಿಯ ನುಡಿಯೇ | ೩೨ | ೧೭ | ೨೦೦ |
| ಮುಖ್ಯವಾದಾಭರಣವನು ತೆಗ | ೪೫ | ೧೨ | ೧೪೧ |
| ಮುಗಿದುದಿಲ್ಲಿಗೆ ಸಂಧಿ ಧೃತಿಯಿಂ | ೩೭ | ೧೯ | ೨೨೩ |
| ಮುನ್ನ ನಾನು ಕಿರಾತನಾದೆನು | ೨೩ | ೧೫ | ೧೭೧ |
| ಮುನಿಪ ತಂದೆಯ ನೇಮವನು ತಾ | ೫ | ೧೫ | ೧೬೭ |
| ಮುಪ್ಪುರಿಯ ಕರಣವಸು ರಾಮ ಪ | ೨೫ | ೧೯ | ೨೨೦ |
| ಮೂರು ಜಗ ಕಂಟಕ ಶಿವುವನಿವ | ೧೨ | ೧೩ | ೧೪೬ |
| ಮೃಗವ್ಯಸನದಲಿ ಪಾಪಿ ನಾ ರಾ | ೧೬ | ೧೬ | ೧೮೨ |
| ಮೆಲ್ಲನಾ ನಿಮ್ಮೊಡನೆ ಚರಿಸಲು | ೪೦ | ೧೨ | ೧೪೦ |
| ಮೋಗವನೋಡುತ್ತಿರಲು ಜಾನಕಿ | ೨೫ | ೧೩ | ೧೪೯ |
| ಮಂಚವಲ್ಲೇಕಾಂತದಲ್ಲಿರೆ | ೨೭ | ೧೦ | ೧೧೨ |
| ಮಂಥರೆಯ ಮೊದಲಲ್ಲಿ ಕೈಕೆಯ | ೨೪ | ೧೦ | ೧೧೧ |
| ಮುಂದೆ ಕಲಿಯಲಿ ಜನಿಸುವವರಿಂ | ೧೮ | ೧೩ | ೧೪೭ |
| ಯೆತ್ತಿ ಕುಳಿರಿಸಿ ರಾಮ ತಂದೆಯ | ೩೯ | ೧೧ | ೧೨೭ |
| ಯುಂದೆ ನೀ ಸಂಸಾರಿಯೆಂದೆಲೆ | ೧೫ | ೯ | ೯೭ |
| ರವಿಕುಲೇಶ್ವರ ರಾಮ ಚರಿತದಿ | ೪೯ | ೧೨ | ೧೪೨ |
| ರಾಜ ಗಣನೆಯ ಸಂಧಿ ಪದಗಳು | ೫೨ | ೧೬ | ೧೯೧ |
| ರಾಟಿಯೆತ್ತಿದ ಕೊಡನುದಕ ಹೂ | ೧೭ | ೧೨ | ೧೩೪ |
| ರಾಮ ಕೇಳಿಂತೆನುತ ನಿನ್ನಯ | ೩೬ | ೧೫ | ೧೭೫ |
| ರಾಮ ಕೇಳೈ ನಿನಗೆ ಸೀತಾ | ೮ | ೧೫ | ೧೬೮ |

—೦—



# ೨ ಶಬ್ದಾರ್ಥಗಳು

## ಬಾಲಕಾಂಡ

ಅಗ್ಗಳಿಕೆ— ಹೆಚ್ಚಳ
ಅಘ — ಪಾಪ
ಅಟ್ಟುಳಿ — ಕಾಟ, ಪೀಡೆ
ಅಧರ — ತುಟಿ
ಅಧ್ವರ — ಯಜ್ಞ
ಅಭವ — ಶಿವ
ಅಭ್ರ — ಮೋಡ
ಅಭ್ರದಲುಲಿ — ಅಶರೀರವಾಣಿ
ಆಕೆವಾಳ — ಶೂರ, ಬಲಶಾಲಿ
ಆನಕ — ಒಂದು ತರದ ವಾದ್ಯ ವಿಶೇಷ ಭೇರಿ
ಆಪಡೆ — ಸಾಧ್ಯವಾದರೆ
ಆಯತದೆ — ಯೋಗ್ಯರೀತಿಯಿಂದ
ಉಗಿ — ಎಳೆ, ಜಗ್ಗು
ಉಪ್ಪರ — ಉಚ್ಚ, ಶ್ರೇಷ್ಠ
ಉರಿಸ್ಸುಲು — ನಿಟ್ಟುಸಿರು
ಊಣಯ — ಕಡಿಮೆ, ನ್ಯೂನತೆ
ಊರು — ತೊಡೆ
ಓಪ — ರಕ್ಷಕ
ಓವ — ರಕ್ಷಕ, ದಯೆ
ಅಂಜಲಿ — ಬೊಗಸೆ
ಅಂದಳ — ಮೇಣೆ, ಅಂಬಾರಿ
ಅಂಬರ — ಆಕಾಶ
ಅಂಬು — ನೀರು
ಅಂಬುಜ — ಕಮಲ
ಅಂಬುಜೋದ್ಭವ — ಬ್ರಹ್ಮ

ಅಂಶ — ಹಗಲು
ಕಟಕ — ಆಭರಣ
ಕದಳಿ — ಬಾಳೆ
ಕಪಿಲೆ — ಆಕಳು
ಕಮನೀಯ — ಸುಂದರ
ಕಲ್ಮಷ — ಹೊಲಸು
ಕುಕ್ಷಿ — ಹೊಟ್ಟೆ
ಕುಚ — ಮೊಲೆ
ಕುಟ್ಮಲ — ಮೊಗ್ಗು
ಕೈತವ — ವಂಚನೆ, ಮೋಸ
ಕೈವಾರ — ಹೊಗಳಿಕೆ, ಗುಣಗಾನ
ಕೂಗೆ — ಕೂಗು, ಧ್ವನಿಸು
ಕೌಶೇಯಾಂಬರ — ರೇಶಿಮೆ ಬಟ್ಟೆ
ಕ್ರಂದನ — ಕೂಗುವಿಕೆ, ಅಳುವಿಕೆ
ಕುಂಚಿತ — ಸಣ್ಣದಾದ, ವಕ್ರವಾದ
ಕುಂದಣ — ಬಂಗಾರ
ಕೊಂಬು — ಒಂದು ತರದ ವಾದ್ಯ
ಗರ್ತ — ಹೊಂಡ
ಗುಲ್ಫ — ಪಾದದ ಹರಡ
ಗೋಷ್ಠ — ಕೊಟ್ಟಿಗೆ
ಗೊಂದಣ — ಸಮೂಹ
ಚಷಕ — ಪಾನಪಾತ್ರೆ, ಸುರೆ
ಚಯ — ಸಮೂಹ, ಗುಂಪು
ಚೆಳ್ಳುಗುರು — ಉದ್ದನೆಯ ಚೆಲುವಾದ ಉಗುರು
ಚಂಡಕಿರಣ — ಸೂರ್ಯ

ಚೆಂಬು -- ತಾಮ್ರದ ಪಾತ್ರೆ

ಛಡಾಳ -- ಕಾಂತಿ, ಪ್ರಭೆ

ಜಘನ -- ಸ್ತ್ರೀಯರ ಸೊಂಟದ ಹಿಂಭಾಗ, ಸೊಂಟ

ಜಳ -- ಉರಿ, ಕಾವು, ಸ್ವಚ್ಛತೆ

ಜಾನು -- ಮೊಳಕಾಲು

ಜಾಯೆ -- ಹೆಂಡತಿ

ಜೂಳೆಗಡಗ -- ಮಣ್ಣಿನ ಬಾಳೆ

ಜಂಘಾ - ಮೊಳಕಾಲಿನ ಕೆಳಭಾಗ

ತಟ -- ದಂಡೆ

ತಟಾಕ -- ಕೆರೆ, ಸರೋವರ

ತಿಬ್ಬು -- ಬಿಲ್ಲಿನ ಹೆದೆ ನಾರಿ

ತ್ರಿನೇತ್ರ -- ಈಶ್ವರ

ತೂಣೀರ -- ಬತ್ತಳಿಕೆ

ತಿಂಥಿಣಿ -- ಸಮೂಹ

ದಿವ -- ಸ್ವರ್ಗ

ದ್ರುಹಿಣ -- ಬ್ರಹ್ಮದೇವ

ನಿಮಿತ್ತ -- ಉದ್ದೇಶ, ಗುರಿ

ನಿರೀಹ -- ಬಯಕೆಯಿಲ್ಲದ ಇಚ್ಛೆಯಿಲ್ಲದ

ನಿಷ್ಕ -- ಎದೆಯ ಹಾರ, ಬಂಗಾರದ ಆಭರಣ

ನಿಷ್ಕಂಠಿ -- ಆಭರಣ ಧರಿಸಿದ ಸ್ತ್ರೀ

ನಿಳಯ -- ಮನೆ

ಪಲ್ಲವ -- ಚಿಗುರೆಲೆ

ಪೂಗಣೆಯ -- ಮನ್ಮಥ

ಪೆಕ್ಕಣ -- ನೋಟ, ಪ್ರದರ್ಶನ

ಪಂಕ -- ಕೆಸರು

ಪಂಠಿಸು -- ಅನುಕರಣೆಯ ಧ್ವನಿ

ಫೇನ -- ನೊರೆ, ಬುದ್ಬುದ

ಬಲುಹು -- ಬಲ್ಮೆ, ಶಕ್ತಿ

ಬೆಗಡು -- ಭಯ, ಆಶ್ಚರ್ಯ ವಿಸ್ಮಯ

ಬೆಸಗೊಳ್ಳು -- ಕೇಳಿಕೊಳ್ಳು

ಬೇಳು -- ಹೋಮ ಮಾಡು

ಭಣಿತೆ -- ಮಾತು, ಹೇಳುವಿಕೆ

ಭೇಷಜ -- ಮದ್ದು, ಔಷದ

ಮಖ -- ಯಜ್ಞ

ಮತ್ಸರ -- ಹೊಟ್ಟೆಕಿಚ್ಚು

ಮದದಂತಿ -- ಮದ್ದಾನೆ

ಮನಸಿಜಾಂತಕ -- ಈಶ್ವರ

ಮಸಗು -- ವಿಜೃಂಭಿಸು, ವಿಸ್ತರಿಸು

ಮಾರ -- ಮನ್ಮಥ

ಮೇಖಲೆ -- ಒಡ್ಯಾಣ, ನಡುಪಟ್ಟಿ

ರಹಿ -- ಸೊಗಸು, ವಿನೋದ

ರಾಮಣೀಯಕ -- ಸುಂದರವಾದ

ವನಜ -- ತಾವರೆ

ವನಜನೇತ್ರ -- ನಿಳುವಾದ ಕಣ್ಣುಳ್ಳವ

ವರೂಥ -- ರಥ, ಬಂಡಿ, ತೇರು

ವಿರತ -- ಮುಗಿದ, ತಡೆದ

ವಿರತಿ -- ವೈರಾಗ್ಯ ಉಪೇಕ್ಷೆ

ವೀಜನ -- ಬೀಸುವಿಕೆ

ಶಕುನ -- ಮುನ್ಸೂಚನೆ
ಶರಧಿ -- ಸಮುದ್ರ
ಶುಂಠ -- ಮೂರ್ಖ, ಬುದ್ಧಿಗೇಡಿ
ಶೌಂಡ -- ಸಮರ್ಥ, ಶ್ರೇಷ್ಠ
ಸತ್ರ -- ಯಜ್ಞ
ಸತ್ತಿಗೆ -- ಛತ್ರಿ, ಕೊಡೆ
ಸೊಡರು -- ದೀಪ, ಪ್ರಕಾಶ
ಸಿಂಜಾನ -- ಗೆಜ್ಜೆಗಳ ಧ್ವನಿ
ಹನನ -- ನಾಶ
ಹರಿ -- ಮಂಗ, ಕೋಡ
ಹಳಚು -- ಯುದ್ಧಮಾಡು
ಹಳವಿಸು -- ದುಃಖಿಸು, ಚಿಂತಿಸು
ಹೆಳವ -- ಕಾಲಿಲ್ಲದವ
ಹೇರೊಡಲು -- ದೊಡ್ಡ ಹೊಟ್ಟೆ
ಹೊಡಕರಿಸು -- ತೋರು ಪ್ರಕಟವಾಗು

## ಅಯೋಧ್ಯಾಕಾಂಡ

ಆರ್ತಿ -- ಪ್ರೀತಿ, ಸುಖ
ಅನ್ವಯ -- ವಂಶ
ಅಪ್ರಬುದ್ಧ -- ತಿಳಿಗೇಡಿ, ಹೆಡ್ಡ
ಅಮೇಧ್ಯ -- ಹೊಲಸು
ಅರುವೆ -- ವಸ್ತ್ರ
ಅಲಸದೆ -- ಆಲಸ್ಯ ಮಾಡದೆ
ಅಹರ್ನಿಶಿ -- ಹಗಲು, ರಾತ್ರಿ
ಅಹಿ -- ಸರ್ಪ
ಅಳಿಕುಲ -- ದುಂಬಿಗಳ ಹಿಂಡು
ಆಕೆವಾಳ -- ಶೂರ, ಬಲಶಾಲಿ
ಇನಿತಕೆ -- ಇಷ್ಟರಲ್ಲಿ
ಇಷ್ಟಿ -- ಯಜ್ಞ
ಉಟಜ - ಪರ್ಣಶಾಲೆ, ಎಲೆಮನೆ
ಉತ್ತಮೆ -- ಒಳ್ಳೆಯ ಹೆಸರು
ಉಪ್ಪವಡಿಸು - ನಿದ್ದೆಯಿಂದ ಎದ್ದೇಳು
ಉಪಾಯನ -- ಕಾಣಿಕೆ
ಉರ - ಎದೆ
ಕಮನೀಯ -- ಸುಂದರ
ಕರಗ -- ಜಲಪಾತ್ರೆ
ಕಾಪಥ -- ಕೆಟ್ಟ ಹಾದಿ
ಕಾರಿರುಳು -- ಕತ್ತಲೆಯ ರಾತ್ರಿ
ಕಾಳುಮಾಡು -- ಹಾಳುಮಾಡು
ಕ್ಷುತ್ -- ಹಸಿವು
ಕೃತಕ -- ನಿಜವಲ್ಲದ, ಕಪಟ
ಕೊರಡು -- ಮರದ ತುಂಡು
ಕೋವಿದಾರ -- ಕಂಚಿವಾಳಗಿಡ
ಕೋಳುವೋಗು -- ಮರ್ಯಾದೆ ಬಿಡು
ಕೌಮುದಿ -- ಬೆಳದಿಂಗಳು
ಕಂಥೆ -- ಹರಕು ಬಟ್ಟೆಗಂಟು
ಖಟ್ವಾಂಗ -- ಮಂಚ
ಖರ್ವಿಸು -- ಸಣ್ಣ, ಕುಳ್ಳ, ಎಲ್ಲ
ಖುಲ್ಲ -- ಕ್ಷುಲ್ಲಕ, ಕ್ಷುದ್ರ, ದುಷ್ಟ
ಗನ್ನಗತಕ -- ಮೋಸಗಾರಿಕೆ
ಗನ್ನಗುಳಿ - ಪೊಳ್ಳು ಬಡಿವಾರ

ಉಲುಹ — ಶಬ್ದ
ಒಡಲು — ದೇಹ
ಬಳಲು — ಘೋಳಿಡು, ದುಃಖಪಡು
ಓಜೆ — ಕ್ರಮ
ಅಂಕ — ತೊಡೆ
ಅಂಗರಾಗ — ದೇಹಕ್ಕೆ ಲೇಪಿಸುವ ಸುಗಂಧದ್ರವ್ಯ
ಕದಳಿ — ಬಾಳೆ
ಕಮಗೆಡು — ಕಪ್ಪಾಗು
ಕಿಣ್ಣ — ಘನತೆ, ಗುರುತ್ವ
ತೃಷೆ — ನೀರಡಿಕೆ
ಧಾತ್ರಿ — ಸೇವಕಿ, ದಾಸಿ
ಧೂರ್ಜಟಿ — ಈಶ್ವರ
ನಗಸುತೆ — ಪಾರ್ವತಿ
ನಿರಯ — ನರಕ ನರಕಲೋಕ
ನಿಷಾದ — ಬೇಡ
ನೆನಹು — ಧ್ಯಾನ, ವಿಚಾರ
ನೇಣು — ಹಗ್ಗ
ನೇಹ — ಪ್ರೀತಿ, ಗೆಳತನ
ನಂದನ — ಸಂತೋಷಪಡಿಸುವ
ಪರ್ಣ — ಎಲೆ
ಪನ್ನಗ — ಸರ್ಪ, ಹಾವು
ಪ್ರಕರ — ಸಮೂಹ, ಹೂಗೊಂಚಲು
ಪೂಗ — ಅಡಿಕೆ
ಪೂತಕರ್ಮ — ಪವಿತ್ರವಾದ ಕೆಲಸ
ಪೋತ — ದೋಣಿ, ಹಡಗ
ಪಂಕ — ಕೆಸರು
ಗನ್ನಗಳಿ — ಒಣ ಹೆಮ್ಮೆ
ಚರ್ವಣ — ಜಗಿಯುವಿಕೆ
ಚಳಕ — ತೀವ್ರತೆ, ವೇಗ
ಚಿಬುಕ — ಗದ್ದ
ಚೂತ — ಮಾವು
ಚೋದಿಸು — ಹುರಿಗೊಳಿಸು, ಪ್ರೇರಿಸು
ಚಂಪಕ — ಸಂಪಿಗೆ
ತಸ್ಕರ — ಕಳ್ಳ, ಚೋರ
ತಳುವದೇ — ತಡಮಾಡದೇ
ಭ್ರಾಮೆ — ತಪ್ಪು ತಿಳುವಳಿಕೆ ಕೊಡುವ
ಭೇಕ — ಕಪ್ಪೆ, ಮಂಡೂಕ
ಮಜಡ — ದಡ್ಡ, ಹೆಡ್ಡ
ಮಣಿಹ — ನಮಸ್ಕಾರ, ಓಲಗ, ಸೇವೆ
ಮಸಗು — ಪ್ರಯತ್ನ ಪಡು, ಸಿಟ್ಟಾಗು ಬಿತ್ತರಿಸು
ಮಾಚದೆ — ಅಡಗಿಸದೆ
ಮಿಟ್ಟಿ — ಒಂದು ಬಗೆಯ ಆಯುಧ
ಯಾಮಿನಿ — ರಾತ್ರಿ
ರಂಭಾ — ಬಾಳೆಯ ಮರ
ಲಾಂಛನ — ಚಿಹ್ನೆ
ವಲ್ಕಲ — ನಾರು ಬಟ್ಟೆ
ವಲ್ಗೂದರ — ದೊಡ್ಡ ಹೊಟ್ಟೆ
ವಸುಧೆಯಾತ್ಮಜೆ — ಸೀತೆ
ವಹಿಲ — ರಭಸ, ತೀವ್ರತೆ
ವಾಸನಿಸು — ಆಘ್ರಾಣಿಸು
ವಿಗತ — ಕಳೆದುಹೋದ, ತೀರದ
ವಿಘಾತಿ — ಹಾಳುಮಾಡುವವ, ದುಷ್ಟ

ಬಕುಳ - ರಂಜೆಮರ, ಎರಜಲುಮರ
ಬಪ್ಪಂಗೆ -- ಉಡಿದಾರ ಪಟ್ಟಿ
ಬಲಬರು -- ಪ್ರದಕ್ಷಿಣೆ ಮಾಡು
ಬಾಕುಳಿಗ -- ಆಶ್ಯಾಶೆಯುಳ್ಳವ
ಬಾತೆ -- ಬಾಳ್ತೆ, ಪ್ರಯೋಜನ
ಬುದ್ಬುದ -- ನೊರೆ, ಗುಳ್ಳೆ
ಬೇಳು -- ಆಹುತಿ ಕೊಡು
ಭಾಸ -- ಪ್ರಕಾಶ, ಕಿರಣ
ಸಸಿನೆ - ಸಮೀಪ, ಹತ್ತಿರ, ಚೆನ್ನಾಗಿ
ಸಾಲಭಂಜಿಕೆ -- ಬೊಂಬೆ, ಗೊಂಬೆ
ಸ್ಯಂದನ -- ರಥ ತೇರು
ಹಳವಿಸು -- ದುಃಖಪಡು
ಹಾಹೆದೋಹರು - ಕಾಲ್ಬಳೆ, ಕಾಲತೊಡವು
ವಿಪಿನ -- ಅಡವಿ
ವಿಭವ -- ಶ್ರೇಷ್ಠತೆ, ಅಟ್ಟಹಾಸ ಉತ್ಸಾಹ
ವಿಷ್ಟೆ -- ಮಲ ಸಗಣಿ, ಹಿಕ್ಕೆ
ವೈಮನಸ್ಯ -- ವೈರತ್ವ, ದುಃಖ ಮನಸ್ತಾಪ
ಷಂಡ -- ನಪುಂಸಕ
ಸಸಿನ -- ನೆಟ್ಟಗೆ, ಉಚಿತವಾಗಿ
ಹೀಹಾಳಿ -- ಅಗೌರವ
ಹುಗಿಲು -- ಪ್ರವೇಶ, ದ್ವಾರ
ಹೇಡ -- ಹೆಡ್ಡ
ಹೊನಲು -- ಪ್ರವಾಹ

—o—

# ಶುದ್ಧಿ ಪತ್ರಿಕೆ

| ಪುಟ | ಪದ್ಯ | ಸಾಲು | ಅಶುದ್ಧ | ಶುದ್ಧ |
|---|---|---|---|---|
| ೩ | ೯ | ೫ | ಬೊಧಾಕಾರ | ಬೋಧಾಕಾರ |
| ೧೦ | ೩೬ | ೩ | ಡನರರಿವ | ದಡರರಿವ |
| ೧೧ | ೪೧ | ೫ | ಕರುಳಿನ | ಕುರುಳಿನ |
| ೧೫ | ೪ | ೩ | ಏಧ್ವರ | ಲಧ್ವರ |
| ೨೬ | ೧೫ | ೬ | ಯೊಡನೊಡನೋಲಗಿಸ | ಯೊಡನೋಲಗಿಸ |
| ೩೧ | ೩೬ | ೨ | ತಧ್ವರದ | ರಧ್ವರದ |
| ೩೭ | ೧೭ | ೬ | ಸೌಖ್ಯಲಿದಂದಳಾ | ಸೌಖದಲೆಂದಳಾ |
| ೩೮ | ೨೦ | ೭ | ಪರಿಸ | ಪಠಿಸ |
| ೪೦ | ೩೦ ನೇ ಪದ | | ಜೋ | ಜೋ ಆಗಬೇಕು. |
| ೬೨ | ೨೪ | ೬ | ದೊಂದು ವನು | ದೊಂದುವನು |

| ಪುಟ | ಪದ್ಯ | ಸಾಲು | ಅಶುದ್ಧ | ಶುದ್ಧ |
|---|---|---|---|---|
| ೭೧ | ೨೨ | ೩ | ಪಠಿವಿತಾನ | ಪಠಿವಿತಾನ |
| ೭೬ | ೪೦ | ೩ | ತಮ್ಗುಣ | ತದ್ಗುಣ |
| ೭೮ | ೪೭ | ೨ | ಷುಷಿಗಳ | ಋಷಿಗಳ |
| ೭೮ | ೪೭ | ೪ | ಕೆಳವ | ಕೇಳಿದ |
| ೯೪ | ೩ | ೨ | ಕುಸುವ | ಕುಸುಮ |
| ೯೯ | ೨೩ | ೬ | ದುಂಚಲಿಸ | ದುಂ ಚಲಿಸ |
| ೯೯ | ೨೫ | ೩ | ನಧ್ವಯಿತ | ನದ್ವಯಿತ |
| ೧೦೭ | ೯ | ೫ | ಪಾಡ | ಪಾಡ |
| ೧೧೫ | ೪೦ | ೪ | ಕೊ್ಯಗಿದೆ | ಕೊ್ಯವಗಿದೆ |
| ೧೧೫ | ೪೧ | ೫ | ಬಿಪ್ದೆಳು | ಬಿಪ್ದಳು |
| ೧೧೬ | ೪೫ | ೨ | ವೂಳ | ವೊಳ |
| ೧೨೨ | ೧೯ | ೩ | ಜೊಳೆಗಡಗದ | ಜೂಳೆಗಡಗವ |
| ೧೩೫ | ೨೦ | ೪ | ತನು ವಿಲ್ಲ್ೀಂದು | ತನುವಿಲ್ಲೀಂದು |
| ೧೩೯ | ೩೬ | ೬ | ಹೊಽಡೆ | ಹೋಽಡೆ |
| ೧೪೦ | ೪೦ | ೨ | ಗಳೆಲ್ಲ ವರಳಿಸ | ಗಳೆಲ್ಲವರಳಿಸ |
| ೧೪೧ | ೪೩ | ೫ | ಹಾರ | ಹಾರಾ |
| ೧೪೪ | ೬ | ೪ | ರಕ್ಷಿಸು ತಿದ್ದ | ರಕ್ಷಿಸುತಿದ್ದ |
| ೧೫೧ | ೩೨ | ೬ | ತ್ತಮು ಸಾ ನದೀ | ತಮುಸಾನದೀ |
| ೧೫೩ | ೪೧ | ೬ | ನಿಧಿಗೆದಗಿ | ನಿಧಿಗೊದಗಿ |
| ೧೮೫ | ೨೯ | ೨ | ಕಾ | ನಾ |
| ೧೮೭ | ೩೮ | ೪ | ಯಿಪ್ಪ | ಯಿಪ್ಪ |
| ೨೧೫ | ೪ | ೫ | ನಿ | ಲೆಂದುನಿ |
| ೨೫೧ | ೨೯ | ೫ | ಕೃತ್ಯಕೃತ್ಯ | ಕೃತಕೃತ್ಯನಾದೆಂ |
| ೨೨೩ | ೩೫ | ೩ | ವಾಸವಳಿದು | ವಾಸವನುಳಿದು |

